# ...ಡಿಗರ ಆರ್ಥಿಕ ಮತ್ತು ಸಾಂಸ್ಕೃತಿಕ ನೆಲೆಗಳು

ಮಾಸ್ಟರ್ ಆಫ್ ಫಿಲಾಸಫಿ (ಎಂ. ಫಿಲ್.) ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಪ್ರೌಢ ಪ್ರಬಂಧ

ಸಂಶೋಧಕರು :
ಹೆಚ್. ನರಸಿಂಹಮೂರ್ತಿ

ಮಾರ್ಗದರ್ಶಕರು :
ಡಾ. ಎ. ಸುಬ್ಬಣ್ಣ ರೈ

ವಿದೇಶಿ ಮತ್ತು ಭಾರತೀಯ ಭಾಷೆಗಳ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ, ಕಮಲಾಪುರ – ೫೮೩ ೨೨೧
ಅಕ್ಟೋಬರ್ ೧೯೯೬

# ಈಡಿಗರ ಆರ್ಥಿಕ ಮತ್ತು ಸಾಂಸ್ಕೃತಿಕ ನೆಲೆಗಳು

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಯ
ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ಪ್ರೌಢ ಪ್ರಬಂಧ



ಸಂಶೋಧಕರು :
*ಹೆಚ್. ನರಸಿಂಹಮೂರ್ತಿ*



ಮಾರ್ಗದರ್ಶಕರು :
*ಡಾ. ಎ. ಸುಬ್ಬಣ್ಣ ರೈ*

ವಿದೇಶಿ ಮತ್ತು ಭಾರತೀಯ ಭಾಷೆಗಳ ವಿಭಾಗ
ಭಾಷಾನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ, ಕಮಲಾಪುರ-೫೮೩ ೨೨೧
ಅಕ್ಟೋಬರ್ ೧೯೯೬

# *ಮಾರ್ಗದರ್ಶಕರ ದೃಢೀಕರಣ ಪತ್ರ*

ಶ್ರೀ ಹೆಚ್ .ನರಸಿಂಹಮೂರ್ತಿ ಇವರು "ಈಡಿಗರ ಆರ್ಥಿಕ ಮತ್ತು ಸಾಂಸ್ಕೃತಿಕ ನೆಲೆಗಳು" ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ.

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಸಂಪ್ರಬಂಧವನ್ನು ಅಥವಾ ಇದರ ಭಾಗವನ್ನು ಇವರು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:೩೧-೧೦-೧೯೯೬
ಸ್ಥಳ:ವಿದ್ಯಾರಣ್ಯ

***ಡಾ. ಎ. ಸುಬ್ಬಣ್ಣ ರೈ***
ಪ್ರವಾಚಕರು
ವಿದೇಶಿ ಮತ್ತು ಭಾರತೀಯ ಭಾಷೆಗಳ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ-೫೮೩ ೨೨೧.

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನ ಕೈಗೊಳ್ಳಲು ಅವಕಾಶ ಮಾಡಿಕೊಟ್ಟ ಕುಲಪತಿಯವರಾದ ಡಾ|| ಚಂದ್ರಶೇಖರ ಕಂಬಾರ ಅವರಿಗೆ, ಮಾನ್ಯ ಕುಲಸಚಿವರಿಗೆ, ವಿಭಾಗದ ಮುಖ್ಯಸ್ಥರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರಿಗೆ ಮತ್ತು ಮಾರ್ಗದರ್ಶನ ನೀಡಿದ ಡಾ|| ಎ.ಸುಬ್ಬಣ್ಣ ರೈ ಅವರಿಗೆ,

ಈ ಪ್ರಬಂಧ ರಚನೆಯೂ ಸೇರಿದಂತೆ ಹಲವು ವಿಧಗಳಲ್ಲಿ ಒಳನೋಟಗಳನ್ನು ಕೊಟ್ಟ ಡಾ|| ಕೆ.ವಿ. ನಾರಾಯಣ, ಪ್ರೊ.ಎಚ್ .ಎಸ್ .ರಾಘವೇಂದ್ರರಾವ್ , ಪ್ರೊ. ಹಿ.ಚಿ.ಬೋರಲಿಂಗಯ್ಯ, ಡಾ|| ರಹಮತ್ ತರೀಕೆರೆ, ಡಾ|| ಪುರುಷೋತ್ತಮ ಬಿಳಿಮಲೆ, ಪ್ರೊ. ಬಿ.ಶೇಷಾದ್ರಿ, ಡಾ|| ಎಚ್ .ಎಸ್ .ಶ್ರೀಮತಿ, ಪ್ರೊ. ಎ.ವಿ. ನಾವಡ, ಪ್ರೊ. ಟಿ.ಎಸ್ .ಸತ್ಯನಾಥ್ , ಪ್ರೊ. ಲಕ್ಷ್ಮಣ ತೆಲಗಾವಿ, ಪ್ರೊ: ಓ.ಎಲ್ .ನಾಗಭೂಷಣಸ್ವಾಮಿ,ಡಾ|| ಕೆ. ಕೇಶವಶರ್ಮ ಅವರಿಗೆ,

ವಿಷಯಕ್ಕೆ ಸಂಬಂಧಿಸಿದಂತೆ ನನ್ನೊಂದಿಗೆ ಚರ್ಚಿಸಿ ಸಹಕರಿಸಿದ ಪ್ರಿಯರಾದ ಶ್ರೀ ಬಿ.ಎಂ.ಪುಟ್ಟಯ್ಯ, ಶ್ರೀ ಮಾಧವ ಪೆರಾಜೆ, ಡಾ|| ಮೋಹನ ಕುಂಟಾರ್ ಮೊದಲಾದವರಿಗೆ,

ಈ ಅಧ್ಯಯನದ ಸಂದರ್ಭದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಕರಿಸಿದ ವಿಶ್ವವಿದ್ಯಾಲಯದ ಎಲ್ಲಾ ಸಿಬ್ಬಂದಿವರ್ಗಕ್ಕೆ,

ಗೆಳೆಯರಾದ ಕೃಷ್ಣಮೂರ್ತಿ, ದೈವಜ್ಞ, ಕೀರ್ತಿ, ಮಂಜುಳಾ, ಗೀತಾ, ಗೀತಾಶೆಣೈ, ಎಂ.ಪಿ.ವೀಣಾ, ಶಿವು, ಶಿವಪ್ಪ, ಕುಶಾಲ, ಶಾರಿಹಳ್ಳಿ, ಜಮದಂಡಿ, ಸಿದ್ದರಾಜು, ಹೈದರ್ , ಶೇಖರ್ , ಕೆ. ವಾಸುದೇವ್ ಅವರಿಗೆ,

ಹಿರಿಯರಾದ ಬಿ.ಎಸ್. ಬಾಸ್ಕರ್, ಬಂಗಾರಪ್ಪ, ಚಂದ್ರಶೇಖರ್ ಅವರಿಗೆ

ನನ್ನ ಕುಟುಂಬ ಮತ್ತು ಬಂಧು ವರ್ಗಕ್ಕೆ, ಮಾಹಿತಿದಾರರಿಗೆ, ಪ್ರಬಂಧವನ್ನು ಅಂದವಾಗಿ ಗಣಕಯಂತ್ರದಲ್ಲಿ ಸಂಯೋಜಿಸಿಕೊಟ್ಟ ಶ್ರೀ ಎ.ಎಂ.ಕೃಪಾಶಂಕರ್, ಸ್ಫೂರ್ತಿ ಕಂಪ್ಯೂಟರ್ಸ್ ಮತ್ತು ಸೋಮನಾಥ ರೆಡ್ಡಿ ಅವರಿಗೆ,

ಸ್ಥಳ:ವಿದ್ಯಾರಣ್ಯ

ದಿನಾಂಕ:೩೧-೧೦-೧೯೯೬

*ಎಚ್. ನರಸಿಂಹಮೂರ್ತಿ*

ಎಂ.ಫಿಲ್. ವಿದ್ಯಾರ್ಥಿ

ವಿದೇಶಿ ಮತ್ತು ಭಾರತೀಯ ಭಾಷೆಗಳ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪರಿವಿಡಿ



### ಅನುಬಂಧ

# ಅಧ್ಯಾಯ-೧

## ಅಧ್ಯಯನದ ಉದ್ದೇಶ,ಸ್ವರೂಪ ಮತ್ತು ವಿಧಾನ

ಕರ್ನಾಟಕಾದ್ಯಂತ ನೆಲೆಸಿರುವ ಈಡಿಗರು ವಿಭಿನ್ನ ಭೌಗೋಳಿಕ ಪರಿಸರದಲ್ಲಿ ವಿಭಿನ್ನ ರೀತಿಯ ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕನ್ನು ರೂಪಿಸಿಕೊಂಡಿದ್ದಾರೆ. ಅನೇಕ ಉಪಪಂಗಡಗಳ ಹೆಸರಿನಲ್ಲಿ ಗುರ್ತಿಸಿಕೊಳ್ಳುತ್ತಿದ್ದಾರೆ. ಹೀಗೆ ವಿಭಿನ್ನವಾಗಿರುವ ಈ ೨೪ ಉಪಪಂಗಡದವರ ಮೂಲ ಕಸುಬು ಕಳ್ಳು ತೆಗೆದು ಮಾರುವುದಾಗಿತ್ತು . ಈ ಕಸುಬನ್ನು ಆಧರಿಸಿ ಇಂದು ಇವರನ್ನು ಈಡಿಗರು ಎಂಬ ಒಂದೇ ಹೆಸರಿನಲ್ಲಿ ಗುರ್ತಿಸಲಾಗುತ್ತಿದೆ. ಆದರೆ ಹೀಗೆ ಗುರ್ತಿಸುವದು ತುಂಬಾ ಸರಳೀಕರಣವಾಗುತ್ತದೆ. ಇಂದು ರಾಜ್ಯದಲ್ಲಿ ಗುರ್ತಿಸಿರುವ ೨೪ ಉಪಪಂಗಡಗಳ ಕಳ್ಳು ತೆಗೆಯುವ ವೃತ್ತಿ ಇಂದು ಅವರಿಗಾಗಿ ಉಳಿದಿಲ್ಲ . ವೃತ್ತಿಯನ್ನು ಕಳೆದುಕೊಂಡು ಹೊಸವೃತ್ತಿಗಳಿಗೆ ಹೊಂದಿಕೊಳ್ಳುವ ಸಂದರ್ಭದಲ್ಲಿ ಅವರು ಎದುರಿಸುತ್ತಿರುವ ಬಿಕ್ಕಟ್ಟು ತುಂಬಾ ಸಂಕೀರ್ಣವಾದ ಸ್ಥಿತಿಯನ್ನುಂಟುಮಾಡಿದೆ. ಕೆಲವು ಕಡೆ ಕಳ್ಳು ಇಳಿಸುವ ವೃತ್ತಿ ಇಂದಿಗೂ ಮುಂದುವರೆದಿದೆ. ಮತ್ತೆ ಕೆಲವು ಕಡೆ ಈ ವೃತ್ತಿ ಆನುಷಂಗಿಕವಾದ ಕಸುಬಾಗಿದೆ. ಕೆಲವು ಕಡೆ ಸರ್ಕಾರದ ಪಾನನಿರೋಧ ಜಾರಿಗೆ ತಂದು ವೃತ್ತಿಯನ್ನು ಸಂಪೂರ್ಣವಾಗಿ ಕಿತ್ತುಕೊಂಡಿದೆ. ಈ ಎಲ್ಲಾ ಸಂದರ್ಭಗಳಲ್ಲಿ ಆಯಾ ಪ್ರದೇಶದ ಆರ್ಥಿಕ ಸ್ಥಿತಿಗಳು ಇವರನ್ನು ನಿಯಂತ್ರಿಸುತ್ತಿವೆ. ಈ ಸ್ಥಿತಿಯು ಅವರನ್ನು ವಿಭಿನ್ನವಾದ ಬದಲಾವಣೆಗೆ ಒತ್ತಾಯಿಸಿದೆ. ವಿಭಿನ್ನವಾದ ಸಂಕಷ್ಟದ ಸ್ಥಿತಿಯನ್ನು ಅನುಭವಿಸುವಂತೆ ಮಾಡಿದೆ. ಇವರ ಈ ಆರ್ಥಿಕ ಚಟುವಟಿಕೆಯ ಸ್ಥಿತಿಯನ್ನಾಧರಿಸಿ ಅವರ ಸಾಮಾಜಿಕ ಸಾಂಸ್ಕೃತಿಕ ಬದುಕು ಕೂಡ ವಿಚಿತ್ರ ರೀತಿಯ ಬದಲಾವಣೆಗೆ ಒಗ್ಗಿಕೊಳ್ಳುತ್ತಿದೆ. ಇಂಥ ಸ್ಥಿತಿಯೊಂದರ ಹಿಂದಿರುವ ಚಾರಿತ್ರಿಕ ಕಾರಣಗಳನ್ನು ,ಅದರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನಾಧರಿಸಿ ಗುರುತಿಸುವ ಉದ್ದೇಶ ಈ ಅಧ್ಯಯನಕ್ಕಿದೆ.

ಈಡಿಗರಲ್ಲಿ ೨೪ ಉಪಪಂಗಡಗಳಿವೆಯೆಂದು ಗುರುತಿಸಲಾಗಿದೆ. ಈ ಇಷ್ಟು ಉಪಪಂಗಡಗಳನ್ನು ಈ ಅಧ್ಯಯನಕ್ಕೆ ಒಳಪಡಿಸಿಕೊಂಡಿಲ್ಲ . ಅದು ಸಾಧ್ಯವೂ ಇಲ್ಲ . ಕಾರಣ ಈ ಪ್ರಬಂಧಕ್ಕೆ ಇದರದ್ದೇ ಆದ ಮಿತಿಗಳಿವೆ. ಈ ಇತಿಮಿತಿಗಳ ವ್ಯಾಪ್ತಿಗೆ ಸಾಕಾಗುವಷ್ಟು ಸಾಮಗ್ರಿಗಳನ್ನು ಕೇವಲ ಮೂರು ಪಂಗಡಗಳಾದ ಈಡಿಗ ,ದೀವರು ,ಬಿಲ್ಲವರು, ಪಂಗಡಗಳಿಂದ ಮಾತ್ರ ಸಂಗ್ರಹಿಸಿ ಅಳವಡಿಸಲಾಗಿದೆ.

ಈ ೩ ಪಂಗಡಗಳಿಂದ ದೊರೆಯಬಹುದಾದ ಸಾಮಗ್ರಿಗಳನ್ನು ಅಧ್ಯಯನಕ್ಕೆ ಸಮಗ್ರವಾಗಿ ಒಳಪಡಿಸಿ ಅವುಗಳ ಎಲ್ಲಾಮುಖಗಳನ್ನು ವಿಶ್ಲೇಷಿಸುವ ಉದ್ದೇಶ ಅಧ್ಯಯನಕ್ಕಿದ್ದರೂ ಅದು ಈ ಮಿತಿಯೊಳಗೆ ಸಾಧ್ಯವಾಗುವುದಿಲ್ಲವೆನ್ನುವ ಎಚ್ಚರಿಕೆಯೂ ಇದೆ. ಈ ಕಾರಣಕ್ಕೆ ಈ ೩ ಪಂಗಡಗಳ ಕೆಲವೇ ಪ್ರಧಾನ ಸಾಮಗ್ರಿಗಳು ಚರ್ಚೆಗೆ ಒಳಪಡುವ ಸಾಧ್ಯತೆಯಿದೆ.

ಈಡಿಗರು ಎನ್ನುವ ಪದವನ್ನು ಈ ಅಧ್ಯಯನದ ಶೀರ್ಷಿಕೆಗೆ ಬಳಸಲಾಗಿದೆ. ಹೀಗೆ ಬಳಸಿರುವ ಬಗ್ಗೆ ನನಗೆ ಅನುಮಾನಗಳಿವೆ. ಈ ಪದವನ್ನು ರಾಜ್ಯದ ಇತರೆ ಪಂಗಡಗಳಿಗೆ ಅನ್ವಯಿಸುವುದು ಕೂಡ ಸರಿ ಎಂದು ವಾದಿಸುವ ಹಠ ಈ ಅಧ್ಯಯನಕ್ಕಿಲ್ಲ. ಈ ಪದವನ್ನು ಸೀಮಿತಾರ್ಥದಲ್ಲಿ ಬಳಸಲು ಉದ್ದೇಶಿಸಿದೆ. ಕೇವಲ ಕಳ್ಳು ತೆಗೆಯುವ ಮತ್ತು ಮಾರುವ ಕಸುಬನ್ನು ಈ ಎಲ್ಲಾ ಪಂಗಡದವರು ಹಿಂದಿನಿಂದಲೂ ಅನುಸರಿಸುತ್ತಿದ್ದ ಕಾರಣಕ್ಕೆ ಈ ಪದವನ್ನು ಅನ್ವಯಿಸಲಾಗಿದೆ. ಅಂದರೆ ವೃತ್ತಿ ಸಂಬಂಧ ಸೂಚಕವಾಗಿ ಮಾತ್ರ ಈ ಪದವನ್ನು ಬಳಸಲಾಗಿದೆ.

ಈಡಿಗ ,ಬಿಲ್ಲವ ,ದೀವ ,ಪಂಗಡಗಳು ರಾಜ್ಯದ ವಿಭಿನ್ನ ಭೌಗೋಳಿಕ ಪರಿಸರದಲ್ಲಿ ನೆಲೆಸಿವೆ. ಆರ್ಥಿಕ ಚಟುವಟಿಕೆಗಳು ಮತ್ತು ಸ್ಥಿತಿಗತಿಗಳು ಕೂಡ ವಿಭಿನ್ನ ಸ್ವರೂಪದಲ್ಲಿ ಈ ೩ ಪಂಗಡಗಳಲ್ಲಿ ರೂಪಗೊಂಡಿವೆ. ಹಾಗೆಂದು ಈ ಮೂರು ಸಮುದಾಯಗಳನ್ನು ಜಾತಿಕೇಂದ್ರಿತವಾಗಿ ಚರ್ಚಿಸುವ ಆಸಕ್ತಿ ಈ ಅಧ್ಯಯನಕ್ಕಿಲ್ಲ . ಇದುವರೆಗಿನ ಒಂದೆರೆಡು ಈಡಿಗರನ್ನು ಕುರಿತ ಅಧ್ಯಯನಗಳು ಜಾತಿಕೇಂದ್ರಿತವಾಗಿವೆ. ಉದಾ: ಇ.ಹನುಮಂತಯ್ಯನವರ ಈಡಿಗ ಜನಾಂಗದ ಚರಿತ್ರೆ,ಹೊ.ಮ.ಸತ್ಯನಾರಾಯಣರ ಈಡಿಗ ಜನಾಂಗದ ಅಧ್ಯಯನಗಳು ಈಬಗೆಯವುಗಳಾಗಿವೆ. ಈ ಬಗೆಯ ಜಾತಿಕೇಂದ್ರಿತ ಅಧ್ಯಯನಗಳು ವ್ಯಕ್ತಿ ನಿಷ್ಠತೆ ಮತ್ತು ಪೂರ್ವಗ್ರಹಗಳಿಂದ ಪ್ರಚೋದಿತವಾಗಿರುವುದು ಸ್ಪಷ್ಟವಾಗಿದೆ.. ವಸ್ತು ನಿಷ್ಠವಾದ ಆಲೋಚನೆ ಇಲ್ಲಿ ಸಾಧ್ಯವಾಗುವುದಿಲ್ಲ. ಜಾತಿಕೇಂದ್ರಿತವಾಗಿ ಆಲೋಚಿಸುವ ಮನಸ್ಸುಗಳು ಇಡೀ ವ್ಯವಸ್ಥೆಯನ್ನು ಒಪ್ಪಿಕೊಂಡು ಅದನ್ನು ಸಮರ್ಥಿಸುವ ಉದ್ದೇಶದಿಂದ ಕೂಡಿರುತ್ತವೆ. ಇಂಥ ಮನಸ್ಸುಗಳು ಒಂದು ಸಮೂಹವನ್ನು ಜಾತಿಕೇಂದ್ರಿತವಾದ ದೃಷ್ಟಿಯಲ್ಲಿ ನೋಡುವಾಗ ಅದನ್ನು ವ್ಯವಸ್ಥೆಯ ಒಂದು ಅವಿಭಾಜ್ಯ ಅಂಗವಾಗಿ ಮಾತ್ರ ನೋಡಲು ಸಾಧ್ಯ . ಈ ಬಗೆಯ ಅಧ್ಯಯನಗಳು ವ್ಯವಸ್ಥೆಯ ದೋಷಗಳನ್ನು ,ವೈರುಧ್ಯಗಳನ್ನು ಕುರಿತು ಪ್ರಶ್ನಿಸುವುದಿಲ್ಲ. ಇದಕ್ಕೆ ಪರ್ಯಾಯವಾಗಿ ಈ ಜಾತಿಯ ಅಥವಾ ವ್ಯವಸ್ಥೆಯ ವೈರುಧ್ಯಗಳನ್ನು ಮುಚ್ಚಿ ಹಾಕುವ ಹುನ್ನಾರಗಳಿರುತ್ತವೆ. ಈ ಕಾರಣಕ್ಕೆ ಜಾತಿ,ಅಥವಾ ವ್ಯವಸ್ಥೆಯನ್ನು ವೈಭವೀಕರಿಸುತ್ತಾರೆ.

ವಸಾಹತುಶಾಹಿ ಶಿಕ್ಷಣಕ್ರಮ ಮತ್ತು ಭಾರತೀಯ ಶಿಷ್ಯ ಮಾದರಿಯ ಶಿಕ್ಷಣಕ್ರಮಗಳು ಈ ಬಗೆಯ ಆಲೋಚನೆಗಳನ್ನು ಹುಟ್ಟುಹಾಕಿ ರಕ್ಷಿಸಿಕೊಂಡು ಬಂದಿರುವ ಪ್ರಯತ್ನವಾಗಿ ಈತರಹದ ಅಧ್ಯಯನಗಳು, ಫಲಿತಗಳು ಹೊರಬೀಳುತ್ತವೆ. ಇಂಥ ಅಧ್ಯಯನ ಆರ್ಥಿಕ ವ್ಯವಸ್ಥೆಯನ್ನು ಸಮರ್ಥಿಸಿಕೊಳ್ಳುತ್ತಿರುವ ಬುದ್ಧಿಜೀವಿಗಳು, ಈಹೊಸ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ನಿಟ್ಟಿನಲ್ಲಿ ಇಂದಿನ ಅಧ್ಯಯನಕ್ಕೆ ಮಾದರಿಗಳನ್ನು ರೂಪಿಸುತ್ತಿದ್ದಾರೆ. ಸಮೂಹ ಮಾಧ್ಯಮಗಳೂ ಈ ಬಗೆಯ ಆಲೋಚನೆಗಳನ್ನು ಪ್ರಚೋದಿಸುತ್ತಿವೆ. ಇಂಥ ಅಧ್ಯಯನಗಳು ಕೊಡುವ ಫಲಿತಾಂಶ, ಪರಿಣಾಮಗಳು ಮೂಲಭೂತವಾದಿ ಆಲೋಚನೆಯ ಪರಿಣಾಮಗಳಿಗಿಂತ ಅಪಾಯಕ್ಕೆ ಈ ೨ ಬಗೆಯ ಆಲೋಚನೆಯಿಂದ ಬಿಡಿಸಿಕೊಳ್ಳುವ ಪ್ರಯತ್ನ ಇಂದಿನ ಅಧ್ಯಯನ ಆಗಬೇಕಿದೆ. ಇದು ಮೊದಲ ಹಂತದ ಸಾದನೆಕೂಡ. ಈ ಬಗೆಯ ಒಂದು ಪ್ರಯತ್ನವಾಗಿ ಈ ಪ್ರಬಂಧ ರೂಪಗೊಳ್ಳಬೇಕೆಂಬುದು ಪ್ರಮುಖ ಉದ್ದೇಶವಾಗಿದೆ. ಇದರ ಅರ್ಥ ಈ ಅಧ್ಯಯನದಲ್ಲಿ ಈ ಮೂರು ಪಂಗಡಗಳನ್ನು ಪ್ರತ್ಯೇಕವಾಗಿ ಚರ್ಚಿಸುವುದು, ಹೀಗೆ ಪ್ರತ್ಯೇಕವಾಗಿ ಚರ್ಚಿಸುವಾಗ ಈ ಮೂರು ಪಂಗಡಗಳ ಆಂತರಿಕ ವೈರುಧ್ಯಗಳನ್ನು ಗುರ್ತಿಸುವುದು ಈ ಚರ್ಚೆಯ ಆಸಕ್ತಿಯಾಗಿದೆ. ಅಂದರೆ ಪ್ರತಿ ಪಂಗಡಗಳ ಜನರನ್ನು ಅವರ ಆರ್ಥಿಕ ಸ್ಥಿತಿಗತಿಗಳ ಆಧಾರದಮೇಲೆ ವರ್ಗೀಕರಿಸಿ ನೋಡುವುದಾಗಿದೆ. ಹೀಗೆ ವರ್ಗೀಕರಿಸಲ್ಪಟ್ಟ ಪ್ರತಿವರ್ಗದ ಈಡಿಗರು ಆಯಾವರ್ಗದ ಆರ್ಥಿಕ ಸ್ಥಿತಿಗತಿಗಳಿಗನುಸಾರವಾಗಿ ತಮ್ಮ ಸಾಮಾಜಿಕ ಸಾಂಸ್ಕೃತಿಕ ಬದುಕಿಗೆ ಹೊಂದಿಕೊಂಡಿರುತ್ತಾರೆ. ಈ ಪ್ರತಿ ವರ್ಗದವರು ಆಂತರಿಕ ಮತ್ತು ಬಾಹ್ಯ ಒತ್ತಡದ ಪರಿಣಾಮಗಳನ್ನು (ಪರಿಣಾಮಗಳು ನಕಾರಾತ್ಮಕವಾಗಿರಬಹುದು ಅಥವಾ ಗುಣಾತ್ಮಕವಾಗಿರಬಹುದು) ಎದುರಿಸುವ, ಅನುಭವಿಸುವ ತೀವ್ರತೆಯಲ್ಲಿ ವ್ಯತ್ಯಾಸಗಳಿರುತ್ತವೆ. ಇಂಥ ವ್ಯತ್ಯಾಸಗಳು ಸಂಕೀರ್ಣವಾಗಿರುತ್ತವೆ. ಅವುಗಳನ್ನು ಗುರುತಿಸುವ ಪ್ರಯತ್ನದಲ್ಲಿ ಅಧ್ಯಯನ ಸಾಗಬೇಕಿದೆ. ಹೀಗೆ ಜಾತಿಯ ಹೆಸರಿನಡಿಯಲ್ಲಿರುವ ಒಂದು ಸಮೂಹವನ್ನು ವಿಭಜಿಸಿ ವಿಶ್ಲೇಷಿಸುವ ಸಾಧ್ಯತೆ ಅದರ ವಿರೋಧಿನೆಲೆಯ ವಿಶ್ಲೇಷಣಾ ಮಾದರಿಯಿಂದ ಮಾತ್ರ ಸಾಧ್ಯವಾಗುತ್ತದೆ. ಈ ಕಾರಣಕ್ಕೆ ಈ ಅಧ್ಯಯನವು ವೈರುಧ್ಯ ನೆಲೆಯ ವಿಶ್ಲೇಷಣೆಯ ದಾರಿ ಹಿಡಿಯುತ್ತದೆ.

ಕರ್ನಾಟಕದ ಬಯಲು ಸೀಮೆ ಪ್ರದೇಶದ ಈಡಿಗರು, ಶಿವಮೊಗ್ಗ, ಉತ್ತರ ಕನ್ನಡ ಜಿಲ್ಲೆಯ ದೀವರು ಮತ್ತು ನಾಮಧಾರಿಗಳು ದಕ್ಷಿಣ ಕನ್ನಡ ಜಿಲ್ಲೆಯ ಬಿಲ್ಲವರು ಈ ೩ ಪಂಗಡಗಳನ್ನು ನಿರ್ದಿಷ್ಟವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಉಳಿದಂತೆ ಇತರೆ ಜಿಲ್ಲೆಗಳ ಪ್ರದೇಶಗಳ ಎಲ್ಲಾ ಪಂಗಡಗಳನ್ನು ಆನುಷಂಗಿಕ ಅವಶ್ಯಕತೆಗಾಗಿ ಬಳಸಿಕೊಳ್ಳಲಾಗಿದೆ. ಉದಾ, ಕೇರಳದ ಈಳವರಾಗಿರಬಹುದು, ಆಂದ್ರದ ಗೌಂಡ್ಲ. ತಮಿಳು ನಾಡಿನ

ನಾಡಾರರಾಗಿರಬಹುದು. ಅಧ್ಯಯನಕ್ಕೆ ವಿಭಿನ್ನ ಮೂಲಗಳಿಂದ ಸಾಮಾಗ್ರಿಗಳನ್ನು ಸಂಗ್ರಹಿಸಿ ಬಳಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ವಕ್ತೃಮಾಹಿತಿಗಳೇ ಈ ಅಧ್ಯನಕ್ಕೆ ಪ್ರಧಾನ ಆಕರಗಳಾಗಿವೆ.ದಕ್ಷಿಣ ಕನ್ನಡ, ಶಿವಮೊಗ್ಗ ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಿಂದ ಪ್ರಾತಿನಿಧಿಕವಾಗಿ ವಕ್ತೃಗಳನ್ನು ಆಯ್ಕೆ ಮಾಡಿಕೊಂಡು ಅವರಿಂದ ದೊರೆಯುವ ಅನುಭವಗಳು ಕಥೆಗಳು, ಹಾಡುಗಳಿಂದ ಮಾಹಿತಿಯನ್ನು ಪಡೆಯಲಾಗಿದೆ. ಒಟ್ಟು ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಸರ್ಕಾರಿ ಧಾಖಲಾತಿಗಳಿಂದ, ಸಾಹಿತ್ಯಕೃತಿಗಳಿಂದ, ದಿನಪತ್ರಿಕೆ, ಮಾಸಪತ್ರಿಕೆಗಳಿಂದ ಪಡೆದುಕೊಳ್ಳಲಾಗಿದೆ. ಒಟ್ಟಾರೆ ಲಿಖಿತ, ಮೌಖಿಕ ಮೂಲಗಳಿಂದ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ.

ಹೀಗೆ ಸಂಗ್ರಹಿಸಿದ ಮಾಹಿತಿಗಳಿಂದ ಅಧ್ಯಯಸಕ್ಕೆ ಪೂರಕವಾದ ಅಂಶಗಳನ್ನು ಹೆಕ್ಕಿತೆಗೆಯಲಾಗಿದೆ. ಸಂಗ್ರಹಿಸಲಾದ ಅಂಶಗಳಿಂದ, ಈ ಸಮುದಾಯದ ವಾಸ್ತವವನ್ನು ಗ್ರಹಿಸಿ ಚರ್ಚೆಗೆ ಒಳಪಡಿಸಲಾಗಿದೆ. ಅರ್ಥೈಸಿಕೊಳ್ಳುವ ವ್ಯಾಖ್ಯಾನಿಸುವ ವಿಧಾನವನ್ನು ಈ ಅಧ್ಯಯನದಲ್ಲಿ ಅನುಸರಿಸಲಾಗಿದೆ.

ಅಧ್ಯಯನವು ಒಟ್ಟು ೫ ಅಧ್ಯಾಯಗಳನ್ನು ಒಳಗೊಂಡಿದೆ. ೧ ಅಧ್ಯಯನದ ಉದ್ದೇಶ,ಸ್ವರೂಪ ಮತ್ತು ವಿಧಾನ ೨. ಹಿನ್ನೆಲೆ ಮತ್ತು ಕೌಟುಂಬಿಕ ನೆಲೆಗಳು ೩. ಆರ್ಥಿಕ ನೆಲೆಗಳು ೪ .ಸಾಂಸ್ಕೃತಿಕ ನೆಲೆಗಳು ೫.ಉಪಸಂಹಾರ, ಮತ್ತು ಅನುಬಂಧ . ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ,ವ್ಯಾಪ್ತಿ ಸ್ವರೂಪಮತ್ತು ವಿಧಾನವನ್ನು ಕುರಿತು ಚರ್ಚೆಯಿದೆ. ೨ ನೇ ಅಧ್ಯಾಯವು, ಈಡಿಗ ಸಮುದಾಯದ ಒಂದು ಸ್ಥೂಲ ಪರಿಚಯವನ್ನು ಒಳಗೊಳ್ಳುತ್ತದೆ. ೩ನೇ ಅಧ್ಯಾಯದಲ್ಲಿ ಆರ್ಥಿಕ ಸ್ಥಿತಿಗತಿಗಳನ್ನು ಚಾರಿತ್ರಿಕ ಬದಲಾವಣೆಯ ಹಿನ್ನೆಲೆಯಲ್ಲಿ ಚರ್ಚಿಸಲಾಗುವುದು. ೪ನೇ ಅಧ್ಯಾಯವು ಬದಲಾದ ಆರ್ಥಿಕ ಸ್ಥಿತಿಗತಿಗಳಿಗನುಗುಣವಾಗಿ ಅವರ ಸಾಂಸ್ಕೃತಿಕ ಬದುಕು ಪಡೆದುಕೊಂಡ ಸ್ಥಿತ್ಯಂತರದ ಸ್ವರೂಪದ ಬಗ್ಗೆ ಚರ್ಚೆಗಳನ್ನು ಬೆಳೆಸುತ್ತದೆ. ಇವು ಈ ನಿಬಂಧದ ಸ್ವರೂಪವನ್ನು ಸ್ಪಷ್ಟಪಡಿಸುವ ಅಂಶಗಳು. ಉಪಸಂಹಾರದಲ್ಲಿ ಅಧ್ಯಯನದ ಫಲಿತಗಳನ್ನು ಕುರಿತ ಒಂದು ಅವಲೋಕನ ವಿರುತ್ತದೆ. ಅನುಬಂಧದ ಭಾಗವು,ಆಕರಸೂಚಿ, ಸರ್ಕಾರಿ ಮತ್ತು ಗ್ರಂಥಸ್ಥ ದಾಖಲಾತಿಗಳ ವರದಿ, ವಕ್ತೃಗಳಮಾಹಿತಿ ವಿವರಗಳನ್ನು ಒಳಗೊಂಡಿರುತ್ತದೆ. ಇದು ಈ ಪ್ರಬಂಧದ ಸ್ಥೂಲ ರೂಪ.

# ಅಧ್ಯಾಯ-೨ ಹಿನ್ನೆಲೆ

## (ಅ) ಹೆಸರು

ಕಳ್ಳು ಇಳಿಸುವುದನ್ನೇ ವಂಶಪಾರಂಪರಿಕವಾಗಿ ತಮ್ಮ ವೃತ್ತಿಯನ್ನಾಗಿಸಿಕೊಂಡು ಜೀವನ ಕ್ರಮವನ್ನು ರೂಪಿಸಿಕೊಂಡು ಬಂದ[ರುವ] ಸಮುದಾಯ ಭಾರತಾದ್ಯಂತ ಹರಡಿಕೊಂಡಿದೆ. ವಿಶಾಲ ಭೌಗೋಳಿಕ ವ್ಯಾಪ್ತಿಯಲ್ಲಿ ಹರಡಿಕೊಂಡಿರುವ ಈ ಸಮುದಾಯವು ಆಯಾ ಪರಿಸರದ ಸಂಸ್ಕೃತಿಯನ್ನು ರೂಢಿಸಿಕೊಂಡು ಬಂದಿದೆ. ಆಯಾ ಪರಿಸರದ ಭಾಷೆಯಲ್ಲಿ ಈ ಸಮುದಾಯ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುತ್ತಿದೆ. ಮತ್ತು ಒಂದೇ ಭಾಷೆಯಲ್ಲಿ ಬೇರೆ ಬೇರೆ ಭೌಗೋಳಿಕ ಪರಿಸರದಲ್ಲಿ ಬೇರೆ ಬೇರೆ ಹೆಸರುಗಳಿಂದ ಈ ವೃತ್ತಿಯವರು ಕರೆಯಲ್ಪಡುತ್ತಿದ್ದಾರೆ.

ಕರ್ನಾಟಕದಲ್ಲಿ ಮೈಸೂರು, ತುಮಕೂರು, ಚಿತ್ರದುರ್ಗ, ಬಳ್ಳಾರಿ ಜಿಲ್ಲೆಗಳಲ್ಲಿ ಇವರನ್ನು ಈಡಿಗರೆಂದು ಕರೆಯುತ್ತಾರೆ(ಹೀಗೆ ಕರೆಯಲ್ಪಡುವ ಇವರು ಆಂಧ್ರ ಮೂಲದವರೆಂದೂ ಇವರ ಬಹುತೇಕ ಮಾತೃಭಾಷೆ ತೆಲುಗು ಎಂದೂ ಗುರುತಿಸಲಾಗಿದೆ). ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಿಲ್ಲವರು, ಪೂಜಾರರು, ಬೆಳ್ಚಪ್ಪಾಡರು, ಈಡಿಗರು, ಬೈದ್ಯರು, ಮೂರ್ತೆದಾರರು, ಕುಡಿಯರು ಎಂದೂ ಕರೆಯಲ್ಪಡುತ್ತಿದ್ದಾರೆ. ಉತ್ತರ ಕನ್ನಡದಲ್ಲಿ ಪ್ರಧಾನವಾಗಿ ಇಂದು ಇವರನ್ನು ನಾಮಧಾರಿಗಳೆಂದು ಗುರುತಿಸುತ್ತಾರೆ. ಆದರೆ ೨೦ನೇ ಶತಮಾನದಿಂದೀಚೆಗೆ ಇವರನ್ನು ಈ ಹೆಸರಿನಿಂದ ಗುರುತಿಸುತ್ತಿದ್ದಾರೆಂದೂ, ಅದಕ್ಕಿಂತಲೂ ಹಿಂದೆ ಇವರನ್ನು 'ದೀವರು' ಎಂದು ಕರೆಯಲ್ಪಡುತ್ತಿದ್ದರೆಂದೂ ಹೇಳಲಾಗಿದೆ (ವಿವರಕ್ಕೆ ನೋಡಿ: 'ಈಡಿಗ' ಸುವರ್ಣಮಹೋತ್ಸವ ಸಂಚಿಕೆ, ೧೯೯೫, ಕ.ಅ.ಈಡಿಗರ ಸಂಘ). ಈ ಮುಂಚಿನ ಕೆನರಾ ಗೆಜೆಟಿಯರ್ ನಲ್ಲಿ ಈ ಹೆಸರು ದಾಖಲಾಗಿಲ್ಲವೆಂದು ಸೂಚಿಸಿದೆ. ಈ ಪ್ರದೇಶದ ಈಡಿಗರು ತೆಂಗಿನ ಮರದಿಂದ ಕಳ್ಳು ಇಳಿಸುತ್ತಿದ್ದುದರಿಂದ ಇವರನ್ನು "ತೆಂಗಿನ ದೀವ"ರೆಂದು ಕರೆಯುತ್ತಾರೆ.

ಶಿವಮೊಗ್ಗ ಜಿಲ್ಲೆಯ ಸೊರಬ, ಸಾಗರ, ಹೊಸನಗರ, ತೀರ್ಥಹಳ್ಳಿ ತಾಲ್ಲೂಕುಗಳಲ್ಲಿ ಈ ಸಮುದಾಯದವರನ್ನು ದೀವರು ಎಂದು ಕರೆಯಲಾಗುತ್ತಿದೆ. ಉತ್ತರ ಕನ್ನಡದವರು ಇವರನ್ನು "ಕಾನು ದೀವ"ರೆಂದು ಕರೆಯುತ್ತಾರೆ. ಕಾಡಿನ 'ಬಗಿನೆ' ಮರಗಳಲ್ಲಿ ಕಳ್ಳು ತೆಗೆಯುವ ವೃತ್ತಿಯವರಾಗಿದ್ದ

ಇವರನ್ನು ಕಾನುದೀವರೆಂದು ಕರೆಯಲಾಗುತ್ತದೆಂದು ಸ್ಥಳೀಯರು ಹೇಳುತ್ತಾರೆ. ಇವರು ಹೀಗೆ ಕಾನುದೀವರಾಗಿ ಕರೆಸಿಕೊಳ್ಳಲು ಬೇರೆಬೇರೆ ಕಾರಣಗಳಿವೆ(ವಿವರಗಳಿಗೆ ನೋಡಿ, ಈಡಿಗ ಸ್ವರ್ಣ ಸಂಚಿಕೆ -೧೯೯೫). ಇಲ್ಲಿಯ ಜನರು ಬಹು ಹಿಂದೆಯೇ ಈ ವೃತ್ತಿಯಿಂದ ದೂರ ಉಳಿದಿದ್ದಾರೆ. ಬಹುತೇಕ ಕೃಷಿ ಅವಲಂಬಿಗಳಾಗಿದ್ದಾರೆ. ಜೊತೆಗೆ ಬೇಟೆ ಮೊದಲಾದ ಉಪಕಸುಬುಗಳು ಇವರಲ್ಲಿ ಉಳಿದುಕೊಂಡಿವೆ. ಇವರು ಈ ವೃತ್ತಿಯಿಂದ ಬಹು ಹಿಂದೆಯೇ ವಿಮುಖರಾಗಲು ಅನೇಕ ಚಾರಿತ್ರಿಕ ಮತ್ತು ಭೌಗೋಳಿಕ ಕಾರಣಗಳಿವೆ(ವಿವರಗಳಿಗೆ ನೋಡಿ: "ಶಿವಮೊಗ್ಗ ಜಿಲ್ಲೆಯ ಸಮಾಜವಾದಿ ಚಳುವಳಿಗಳು"- ಜಿ.ಎನ್ .ಕೀರ್ತಿನಾಥ,೧೯೯೫, ಅಪ್ರಕಟಿತ, ಎಂ.ಫಿಲ್ .ಪ್ರಬಂಧ) ತೀರ್ಥಹಳ್ಳಿ ತಾಲ್ಲೂಕಿನ ಮಲೆನಾಡು ಪ್ರದೇಶಗಳಲ್ಲಿ ಇವರನ್ನು ಹಳೆ ಪೈಕರೆಂದು ಕರೆಯುತ್ತಾರೆ. ಇದಕ್ಕೆ "ಹಳೆಯ ಸಿಪಾಯಿಗಳು" ಎಂಬ ಅರ್ಥವೂ ಇದೆ. ಇವರ ಹಿಂದಿನವರು, ವಿಜಯನಗರ ಮತ್ತು ಚಿತ್ರದುರ್ಗ ರಾಜರ ಸೈನ್ಯದಲ್ಲಿ ಸೈನಿಕರಾಗಿದ್ದರೆಂಬ ಅಂಶವೂ ತಿಳಿದುಬರುತ್ತದೆ(ನೋಡಿ: "ಕಾನೂರು ಹೆಗ್ಗಡತಿ"- ಕುವೆಂಪು ಮತ್ತು "ಈಡಿಗರ ಜನಾಂಗದ ಚರಿತ್ರೆ"-ಇ.ಹನುಮಂತಯ್ಯ).

ಮೈಸೂರಿನ ಕೆಲವು ಭಾಗಗಳಲ್ಲಿ ಇವರನ್ನು 'ಹಳೆ ಪೈಕ' ಮತ್ತು ದಂಡು ಈಡಿಗರೆಂದು ಕರೆಯುತ್ತಾರೆ. ಸೈನ್ಯಕ್ಕೆ ಕಳ್ಳು ಒದಗಿಸುವ ವೃತ್ತಿ ಮಾಡುತ್ತಿದ್ದವರು ದಂಡು ಈಡಿಗರೆಂದು ಕರೆಯಲ್ಪಡುತ್ತಿದ್ದರು. ಈ ಭಾಗದಲ್ಲಿಯೇ ಈಡಿಗರನ್ನು ೨ ಗುಂಪುಗಳಲ್ಲಿ ಗುರ್ತಿಸಿಕೊಂಡಿದ್ದಾರೆ. (೧) ಬೆಲ್ಲದ ಈಡಿಗರು (೨)ಮಡ್ಡಿ ಈಡಿಗರು. ಬೆಲ್ಲ ಮಾಡುತ್ತಿದ್ದವರು ಬೆಲ್ಲದ ಈಡಿಗರಾದರೆ, ಸೇಂದಿ ಮಾರುತ್ತಿದ್ದವರು ಮಡ್ಡಿ ಈಡಿಗರಾದರು. ಕರ್ನಾಟಕದ ಕೈಫಿಯತ್ತಿನಲ್ಲಿ ಹಳೇಪೈಕದ ಜಾತಿ ರಿವಾಜಿಗೆ ಸಂಬಂಧಿಸಿದ ದಾಖಲೆಯಿದೆ. ಉತ್ತರ ಕನ್ನಡ ಜಿಲ್ಲೆಯಲ್ಲೂ ನಾಮಧಾರಿ ದೀವರನ್ನು ಹಿಂದೆ ಹಳೇಪೈಕರರೆಂದೇ ಕರೆಯಲಾಗುತ್ತಿತ್ತು. ಜೊತೆಗೆ ಕೊಮಾರ ಪಂಥದವರು, ಕುಮಾರ ಕ್ಷತ್ರಿಯರು, ಮೊದಲಾದ ಹೆಸರಿನಿಂದ ಈಗ ಕರೆಯಲ್ಪಡುತ್ತಿದ್ದಾರೆ.

ಕೊಡಗು ಪ್ರದೇಶದಲ್ಲಿ ಕುಡಿಯರು ಎನ್ನುವ ಸಮುದಾಯ ಕಳ್ಳು ಇಳಿಸುವುದನ್ನು ಮೂಲ ವೃತ್ತಿಯಾಗಿಸಿಕೊಂಡು ಬಂದವರು. ಅವರ ಈ ವೃತ್ತಿಗೆ ಸಂಬಂಧಿಸಿದಂತೆ ಸಾಕಷ್ಟು ಜನಪದ ಕತೆಗಳು ಪುರಾಣ ರೂಪದಲ್ಲಿವೆ. ಈ ಕತೆಗಳು ಈಡಿಗರ ವೃತ್ತಿ ಮೂಲದ ಕಥೆಗಳಿಗೆ ಸಾಮ್ಯವನ್ನು ಪಡೆದುಕೊಂಡಿವೆ. ಈಡಿಗರು ಇವರನ್ನು ತಮ್ಮ ಸಮುದಾಯವೆಂದು ಗುರುತಿಸಿಕೊಂಡಿಲ್ಲದಿದ್ದರೂ. ಅಲ್ಲಿಯ ಕೆಲವರು ಹಿರಿಯರು ನಾವು ಈಡಿಗರ ಮೂಲದವರೇ ಎಂದು ಹೇಳಿಕೊಂಡಿದ್ದಾರೆ( ವಿವರಗಳಿಗೆ ನೋಡಿ: ಕುಡಿಯರ ಸಂಸ್ಕೃತಿ- ಡಾ:ಡಿ.ಬಿ.ರಾಮಚಂದ್ರಚಾರ್ )

ಉತ್ತರ ಕರ್ನಾಟಕದಲ್ಲಿ ಇವರನ್ನು ಈಳಿಗರು, ಈಡಿಗರು ಕಲಾಲ್ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿದೆ. ಇವರ ಪ್ರಮುಖ ಕಸುಬು ಸಹ ಕಳ್ಳು ಇಳಿಸುವುದೇ ಆಗಿದೆ(ವಿವರಗಳಿಗೆ ನೋಡಿ: GLASSARY OF JUDICIAL AND RVNVE TERMS, BY H.H.WILLSON p-೨೫೦).

ಆಂಧ್ರದಲ್ಲಿ ಇವರನ್ನು ಈಡಿಗ, ಗೌಂಡ್ಲ, ಗೌಡ ಎಂದು ಕರೆಯಲಾಗುತ್ತಿದೆ. ಇವರು "ಬಲಿಜ" ಸಮುದಾಯದಿಂದ ಹೊರಬಿದ್ದು ಸೇಂದಿ ಇಳಿಸುವುದನ್ನು ವೃತ್ತಿಯಾಗಿಸಿಕೊಂಡ ನಂತರ ಈ ಹೆಸರನ್ನು ಪಡೆದುಕೊಂಡು ಪ್ರತ್ಯೇಕರಾಗಿದ್ದಾರೆಂದು ಥರ್ಸ್ಟನ್ ತನ್ನ "CASTE AND TRIBS"ಕೃತಿಯಲ್ಲಿ ಹೇಳಿದ್ದಾನೆ. ಮಹಾರಾಷ್ಟ್ರದಲ್ಲಿ ಇವರನ್ನು ಕಲಾಲ್ ಎಂದು ಕರೆಯುತ್ತಾರೆ. ಇವರು ಪ್ರಮುಖವಾಗಿ ತಾಳೆ, ಮತ್ತು ಈಚಲು ಮರದಲ್ಲಿ ಸೇಂದಿ ಇಳಿಸುವವರಾಗಿದ್ದಾರೆ.

ಉತ್ತರ ಆರ್ಕಾಟ್ ನ ಪ್ರದೇಶದಲ್ಲಿ ಇವರನ್ನು "ಈಡಿಗರು" ಅಥವಾ "ಇಂದ್ರ"ರು ಎಂದು ಕರೆಯಲಾಗುತ್ತಿದೆ. ಈಗ ತಮಿಳು ನಾಡಿನಾದ್ಯಂತ ಇವರು "ನಾಡಾರ್ "ಎಂಬ ಹೆಸರಿನಿಂದ ಗುರ್ತಿಸಿಕೊಳ್ಳುತ್ತಿದ್ದಾರೆ. ಇವರ ವೃತ್ತಿಯೂ 'ಕಳ್ಳು' ತೆಗೆಯುವುದೇ ಆಗಿತ್ತು (ಇವರ ವೃತ್ತಿ ಮತ್ತು ಜಾತಿಯ ಬಗ್ಗೆ ಹೆಚ್ಚು ವಿವರಗಳು NORTH ARCOT MANUAL ಮತ್ತು MADRAS CENSUS REPORT ೧೯೦೧ ರಲ್ಲಿ ದಾಖಲಾಗಿವೆ).

ಕೇರಳದಲ್ಲಿ ಇವರನ್ನು ಈಳವರು, ತಿಯ್ಯಾನ್ , ಬೆಳ್ಳತ್ತಾಡರು, ಮೊದಲಾದ ಹೆಸರಿನಿಂದ ಕರೆಯಲಾಗುತ್ತಿದೆ. ಇವರ ಪ್ರಮುಖ ಕಸುಬು ತೆಂಗು ಮತ್ತು ತಾಳೆ ಮರಗಳಿಂದ ಕಳ್ಳು ತೆಗೆಯುವುದಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಬಿಲ್ಲವರಿಗೂ ಇವರಿಗೂ ವೃತ್ತಿ ಮತ್ತು ಸಾಂಸ್ಕೃತಿಕವಾಗಿ ಸಾಕಷ್ಟು ಸಾಮ್ಯಗಳು ಕಾಣುತ್ತವೆ.

ಭಾರತಾದ್ಯಂತ ಹರಡಿಕೊಂಡಿರುವ ಇವರನ್ನು ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವುದನ್ನು ಗುರುತಿಸಲು ಸಾಧ್ಯವಾಗಿಲ್ಲ. ಈ ಪ್ರಬಂಧದ ಮಿತಿಗೆ ಅಗತ್ಯವಾದಷ್ಟನ್ನು ಬಳಸಿಕೊಳ್ಳಲಾಗಿದೆ. ಒಟ್ಟಾರೆ ಹೀಗೆ ಬೇರೆ ಬೇರೆ ಭೌಗೋಳಿಕ ಪ್ರದೇಶದಲ್ಲಿ ಬದುಕನ್ನು ಕಂಡುಕೊಂಡಿರುವ ಸಮುದಾಯದವರ ಎಲ್ಲಾ ವಿಚಾರಗಳಲ್ಲಿ ಸಾಮ್ಯವನ್ನು ಕಾಣಲಾಗುವುದಿಲ್ಲ. ಆದರೆ ಇವರೆಲ್ಲರಲ್ಲಿ ಎದ್ದು

ಕಾಣುವ ಪ್ರಧಾನ ಸಮಾನ ಲಕ್ಷಣವೆಂದರೆ, ಜೀವನ ನಿರ್ವಹಣೆಗಾಗಿ ಈಚಲು, ತೆಂಗು, ಬಗಿನೆ, ತಾಳೆ, ಕರ್ಜೂರದ ಮರಗಳಿಂದ ಸೇಂದಿ ತೆಗೆಯುವುದು ಮತ್ತು ಮಾರುವುದು. ಈ ವೃತ್ತಿಯನ್ನು ಅನುಸರಿಸುತ್ತಿರುವ ಕಾರಣಕ್ಕಾಗಿಯೇ ಇವರ ಸಮುದಾಯದ ಅಥವಾ ಜಾತಿಯ ಹೆಸರು ಎಲ್ಲಾ ಬುಡಕಟ್ಟಿನಲ್ಲಿಯೂ ವೃತ್ತಿ ಸಂಬಂಧವಾಗಿಯೇ ರೂಪಗೊಂಡಿದೆ. ಒಂದೇ ವೃತ್ತಿಯನ್ನು ಅನುಸರಿಸುತ್ತಿರುವ ಕಾರಣಕ್ಕಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಚಾರಗಳಲ್ಲೂ ಕೆಲವು ಸಮಾನ ಲಕ್ಷಣಗಳನ್ನು ಈ ಗುಂಪುಗಳು ಪಡೆದುಕೊಂಡಿರಲು ಸಾಧ್ಯವಾಗಿದೆ. ಮೇಲೆ ಸೂಚಿಸಿದ ಎಲ್ಲಾ ಹೆಸರಿನ ಗುಂಪುಗಳಲ್ಲೂ ವೃತ್ತಿ ಮತ್ತು ಕೆಲವು ಸಾಂಸ್ಕೃತಿಕ ಆಚರಣೆಗಳಲ್ಲಿ ಸಾಮ್ಯಗಳು ರೂಪುಗೊಂಡಿವೆ.

೧. ಹೆಸರಿನವ್ಯುತ್ಪತ್ತಿ

ಕಳ್ಳು ತೆಗೆಯುವ ಈ ಸಮುದಾಯವನ್ನು ಭಾರತಾದ್ಯಂತ ಬೇರೆಬೇರೆ ಹೆಸರುಗಳಿಂದ ಕರೆಯುತ್ತಿರುವುದನ್ನು ವಿವರಿಸಿರುವುದು ಸರಿಯಷ್ಟೆ. ಇವರನ್ನು ಈಡಿಗ ಜಾತಿಯವರು ಎಂದು ಕರ್ನಾಟಕದಲ್ಲಿ ಗುರ್ತಿಸಲಾಗುತ್ತಿದೆ. ಆದರೆ 'ಜಾತಿ' ಎನ್ನುವ ಪದಕ್ಕೆ ಅದರದ್ದೇ ಆದ ಸ್ವಂತ ಅಸ್ತಿತ್ವವಿಲ್ಲ. (ಅದು ಇಂದು ಪಡೆದು ಕೊಂಡಿರುವಂತೆ) ಪ್ರತಿ ಜಾತಿ, ಅಥವಾ ಸಮೂಹದ ಹೆಸರುಗಳು ಆಯಾ ಸಮುದಾಯಗಳು ನಿರಂತರವಾಗಿ ನಿರ್ವಹಿಸುತ್ತ ಬಂದಿರುವ ವೃತ್ತಿ ಸಂಬಂಧವಾಗಿಯೇ ರೂಪ ಪಡೆದಿವೆ. ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಈ ಅಂಶ ಸ್ಪಷ್ಟವಾದ ಸಂಗತಿ.

ಉದಾ:- ಅಗಸ ಬಟ್ಟೆ ತೊಳೆಯುವ ಕಾರಣಕ್ಕಾಗಿ ಅಗಸನಾಗಿದ್ದಾನೆ, ಬೆಸ್ತ ಮೀನು ಹಿಡಿಯುವ ಕಾರಣಕ್ಕೆ, ಬಡಗಿ ಮರಕೆತ್ತುವ ಕೆಲಸಕ್ಕೆ,ಅಕ್ಕಸಾಲಿಗ ಆಭರಣ ಮಾಡುವ ಕೆಲಸಕ್ಕೆ ಅಯಾ ಹೆಸರನ್ನು ಆಯಾ ಸಮೂಹ ಪಡೆದುಕೊಂಡಿದೆ. ವೃತ್ತಿಯೇ ಜಾತಿಯಾಗಿ ರೂಪಗೊಂಡಿದೆ.

ಈಡಿಗ, ಎನ್ನುವ ಹೆಸರು ವೃತ್ತಿ ಸೂಚಕವಾಗಿ ಬಂದಿರುವುದು ಸ್ಪಷ್ಟಸಂಗತಿ. ಈಡಿಗ ಎನ್ನುವ ಹೆಸರನ್ನು ಬಿಡಿಸಿನೋಡಿದರೆ ಹೀಗೆ ತನ್ನ ಅರ್ಥವನ್ನು ಬಿಚ್ಚಿಕೊಳ್ಳುತ್ತದೆ.

೧). ಈಡಿಗ ಈಡು+ ಇಗ -ಈಡು ಎಂದರೆ ಹೆಂಡ ಎಂಬ ಅರ್ಥವಿದೆ. ತಮಿಳು ಭಾಷೆಯ 'ಇಳ' ಮತ್ತು'ಏಲಿ' ಪದಗಳು, ತೆಲುಗಿನ ಇಂದ್ರ ಎಂಬ ಪದವೂ ಹೆಂಡ ಎಂಬ ಅರ್ಥವನ್ನು ಕೊಡುತ್ತವೆ. 'ಇಗ'

ಎನ್ನುವ ಪ್ರತ್ಯಯ ಸೇರಿದರೆ ಈಡಿಗ, ಎಂದಾಗುತ್ತಿದೆ. ಇದರ ಅರ್ಥ ಹೆಂಡ ಇಳಿಸುವವನು ಎಂದಾಗುತ್ತದೆ. ಈ ಕಾರಣಕ್ಕೆ ಇವರು ಈಡಿಗರಾಗುತ್ತಾರೆ. (ವಿವರಕ್ಕೆ Madras Census Repor-೧೯೦೧).

೨) ಹಳೇಪೈಕ: ಹಳೆಯ + ಪೈಕ - ಹಳೆಯ ಸೈನಿಕ, ಹಿಂದೆ ಸೈನಿಕರಾಗಿದ್ದ ಕಾರಣಕ್ಕೆ ಈ ಹೆಸರು ಪ್ರಾಪ್ತವಾಗಿದೆಉತ್ತರಕನ್ನಡದ ಈಗಿನ ನಾಮಧಾರಿಗಳು ಹಿಂದೆ ಹಳೆ ಪೈಕರಾಗಿದ್ದರು. ಎನ್ನುವುದಕ್ಕೆ ಆಧಾರಗಳಿವೆ.

೩) ಬಿಲ್ಲವ- ಬಲ್ಲಾಳು ಎನ್ನುವುದಾಗಿದೆ. ಕಾಡಿನಲ್ಲಿದ್ದ ಇವರು- ಬೇಟೆ ಇತ್ಯಾದಿಗಳಿಗೆ ಬಿಲ್ಲು-ಬಾಣ ಬಳಸುತ್ತಿದ್ದಂತೆಯೇ, ಶೂರರು ಪರಾಕ್ರಮಿಗಳೂ ಆಗಿದ್ದರೆನ್ನುವುದನ್ನು ಸೂಚಿಸುತ್ತದೆ. ಕೋಟಿ-ಚೆನ್ನೆಯ್ಯರು ಇದಕ್ಕೆ ನಿದರ್ಶನ ಇವರ ಮಾವ ಸಾಯಿ ಬೈದ್ಯ ಮೂರ್ತೆಕಸುಬನ್ನು ಮಾಡುತ್ತಿದ್ದುದಕ್ಕೆ ಕಥೆಯಲ್ಲೂ ವಿವರಗಳಿವೆ. ಕೊಯ್ಯು ಎನ್ನುವ ಅರ್ಥವಿದೆ.

೪) ಮೂರ್ತೆದಾರ- ಮೂರ್ತೆ ಎನ್ನುವ ಪದ ಸೇಂದಿ ಕಳ್ಳು ಎನ್ನುವ ಅರ್ಥವನ್ನು ಕೊಡುತ್ತದೆ. ಕಳ್ಳು ತೆಗೆದು ಮಾರುವವನೆ ಮೂರ್ತೆದಾರನಾಗಿದ್ದಾನೆ.

೫) ಬೈದ್ಯ (ಬಿಲ್ಲವರ ಇನ್ನೊಂದು ಹೆಸರು) ವೈದ್ಯ ಎನ್ನುವ ಅರ್ಥವಿದೆ. ಹಿಂದೆ ಬಿಲ್ಲವರು ವೈದ್ಯರೂ ಆಗಿದ್ದರೆನ್ನುವುದು ಕೋಟಿಚೆನ್ನಯ್ಯರ ಕಥೆಯಲ್ಲಿ ತಿಳಿದು ಬರುತ್ತದೆ. ಇವರ ತಾಯಿಯು ಮಾವನೂ ಬೈದ್ಯಕಸುಬುತಿಳಿದಿದ್ದವರು.

೬) ಪೂಜಾರರು ದಕ್ಷಿಣ ಕನ್ನಡದ ಭೂತಾರಾಧನೆ ಇವರ ಕರ್ತವ್ಯವಾಗಿರುವುದರಿಂದ ಪೂಜಾರರು ಎನ್ನುವ ಹೆಸರು ಪ್ರಾಪ್ತವಾಗಿದೆ.

೭) ದೀವರು, ದೀವ ಎನ್ನುವ ಪದ ಅನೇಕ ಅರ್ಥಗಳನ್ನು ಧ್ವನಿಸುತ್ತದೆ. ಪ್ರಸ್ತುತ ಅವರ ವೃತ್ತಿಗೆ ಸಾಮ್ಯತೆಯನ್ನು ಕಂಡುಕೊಳ್ಳುವ ಅರ್ಥವೂ ಈ ಪದದಲ್ಲಿರುವುದು ಗಮನಾರ್ಹ.

ಧೀವರ- ಜಾಣ,ಧೈರ್ಯಶಾಲಿ ಪರಾಕ್ರಮಿ, 'ಮೀನು ಹಿಡಿಯುವವನು'ಎನ್ನುವ ಅರ್ಥ ಅವರ ಇಂದಿನ ವೃತ್ತಿಗೂ ಅನ್ವಯಿಸುತ್ತದೆ. ಇಂದಿಗೂ ದೀವರು ಹತ್ತು ಮೀನು ಬೇಟೆ, ಕುಣಿಮೀನು ಬೇಟೆ, ಮೊಲದ ಬೇಟೆ, ಹಂದಿ ಬೇಟೆಯನ್ನು ನಿತ್ಯ ವೃತ್ತಿಗಳ ಅವಿಭಾಜ್ಯ ಅಂಗವಾಗಿಸಿಕೊಂಡಿದ್ದಾರೆ. ಇವರು ಜಾಣ ಮತ್ತು

ಪರಾಕ್ರಮಿಗಳು ಎನ್ನುವ ಗುಣವಾಚಕಕ್ಕೂ ಅನ್ವರ್ಥವಿದೆ. ಈ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಇಂದಿಗೂ ತಿಳಿಯುತ್ತದೆ. ಕುಮಾರವ್ಯಾಸ ಭಾರತ, ಬಸವಪುರಾಣ, ಜಗನ್ನಾಥವಿಜಯ ಮತ್ತು ಕೆಲವು ಶಾಸನಗಳಲ್ಲಿ 'ದೀವರ' ಉಲ್ಲೇಖನಗಳು ಸಿಗುತ್ತವೆ.

ಆ). ನಾಮಧಾರಿಗಳು- ಇವರು ಹಳೆಪೈರ ರೆಂದು ತರ್ಕಿಸಲಾಗಿದೆ. (ಕಾರವಾರ ಜಿಲ್ಲಾ ದರ್ಶನ-ಪು-೯೯ರಿಂದ-೨೧) ಇವರು ನಾಮಧಾರಿಗಳಾದುದುದರ ಬಗ್ಗೆ ಅನೇಕ ಕಥೆಗಳಿವೆ. ಇವರು ವಿಷ್ಣು ಭಕ್ತರಾಗಿದ್ದು-ನಾಮಗಳನ್ನು ಧರಿಸುತ್ತಿರುವುದರಿಂದ ನಾಮಧಾರಿಗಳೆಂಬ ಹೆಸರು ಬಂದಿರುವ ಸಾಧ್ಯತೆಯಿದೆ.

ಈಡಿಗರ್ - ಎನ್ನುವಪದ ಇಳಿಸೋರು ಎನ್ನುವ ಪದದ ರೂಪಾಂತರವೇ ಇರಬಹುದು ಎಂದು ಹೋಮ ಸತ್ಯನಾರಾಯಣ ಅಭಿಪ್ರಾಯ ಪಡುತ್ತಾರೆ. (ನೋಡಿ: ಈಡಿಗ ಜನಾಂಗ ಒಂದು ಅಧ್ಯಯನ-ಲೇ-ಹೋಮ.ಸತ್ಯನಾರಾಯಣ. ಲಾವಣ್ಯ ಪ್ರಕಾಶನ ಮೈಸೂರು-೧೯೯೧).

ಈಗಾಗಲೇ ಕರೆಯಲ್ಪಡುತ್ತಿರುವ ಈಡಿಗ, ಈಳಿಗ, ಈಳವ, ಇಂದ್ರ, ಬಿಲ್ಲವ, ಪೂಜಾರಿ, ಬೈಧ್ಯ, ಮೂರ್ತೆದಾರ,ಬೆಳ್ಳಪ್ಪಾಡ, ತಿಯ್ಯಾ, ಗೌಂಡ್ಲ, ಕಲಾಲ್ , ಹಳೇಪೈಕ, ಕುಮಾರ ಪಂಥ, ದೀವರು, ನಾಮಧಾರಿ ಮೊದಲಾದ ೨೪ ಉಪ ಪಂಗಡಗಳ ಹೆಸರುಗಳ ವ್ಯುತ್ಪತ್ತಿಯನ್ನು ಗಮನಿಸಿದರೆ, ನಾಮಧಾರಿಯೊಂದನ್ನು ಹೊರತು ಪಡಿಸಿ ಉಳಿದೆಲ್ಲಾ ಹೆಸರುಗಳೂ ವೃತ್ತಿ ಮೂಲದಿಂದಲೇ ತಮ್ಮ ಅಸ್ತಿತ್ವವನ್ನು ಪಡೆದುಕೊಂಡಿರುವುದು ತಿಳುಯುತ್ತದೆ. ನಾಮಧಾರಿಗಳು ಇಂದಿನ ಅವರ ಧಾರ್ಮಿಕ ಆಚರಣೆಗಳ ಕಾರಣಕ್ಕೆ ಹಾಗೆ ಕರೆಯಲ್ಪಡುತ್ತಿರುವುದು ಕಂಡು ಬರುತ್ತದೆ.

## ೩. ಈಡಿಗರ ಪ್ರಸರಣ ಮತ್ತು ಜನಸಂಖ್ಯೆ

ಕಳ್ಳು ಆಹಾರದ ಒಂದು ಭಾಗವಾಗಿದ್ದು. ಆದಿಮಾವಸ್ಥೆಯಲ್ಲೇ ಇದು ಅವಿಷ್ಕಾರಗೊಂಡದ್ದು.ಎನ್ನುವುದಕ್ಕೆ ಆಧಾರವಿದೆ. ಕಳ್ಳು ಇಳಿಸಲು ಅಥವಾ ಕಳ್ಳು ಉತ್ಪಾದನೆಗೆ ಅಗತ್ಯವಾದ, ಪರಿಕರಗಳು ಎಲ್ಲೆಲ್ಲಿ ಲಭ್ಯವೋ ಅಲ್ಲೆಲ್ಲಾ ಕಳ್ಳು ಇಳಿಸುವ ಕೆಲಸ ಪ್ರಾರಂಭವಾಗಿರಲು ಸಾಧ್ಯ.ಭಾರತದ ಮಟ್ಟಿಗೆ ಹೇಳುವುದಾದರೆ ಭಾರತಾದ್ಯಂತ ಕಳ್ಳು ಇಳಿಸಲು ಅಗತ್ಯವಾದ ಈಚಲು ಕರ್ಜೂರ, ತೆಂಗು,ತಾಳೆ, ಬಗನೆ ಮರಗಳು, ಬೆಳೆಯುವ ಹವಾಗುಣ ಇದೆ. ಅಸ್ಸಾಂನಲ್ಲಿ ಕರ್ಜೂರದ ಮರಗಳಿಂದ ಕಳ್ಳೂ ಇಳಿಸುವ

ವಿಷಯವನ್ನು ಪ್ರತ್ಯಕ್ಷ ದರ್ಶಿಗಳು ಹೇಳುತ್ತಾರೆ.

ದಕ್ಷಿಣ ಭಾರತಕ್ಕೆ ಮಿತಿಗೊಳಿಸಿ ಹೇಳುವುದಾದರೆ ಪ್ರಮುಖ ರಾಜ್ಯಗಳಾದ, ಆಂಧ್ರ, ತಮಿಳುನಾಡು, ಕರ್ನಾಟಕ, ಕೇರಳ, ಮಹಾರಾಷ್ಟ್ರಗಳಲ್ಲಿ ಸ್ವಾಭಾವಿಕವಾಗಿ ಈ ಮರಗಳು ಬೆಳೆಯುತ್ತಿದ್ದವು. ಈಗಲೂ ಇವೆ. ಈ ರಾಜ್ಯಗಳಲ್ಲೆಲ್ಲಾ ಈಡಿಗರು ಸಾಕಷ್ಟು ಸಂಖ್ಯೆಯಲ್ಲಿದ್ದು, ಸೇಂದಿ ಮಾರಾಟ ಮಾಡುತ್ತಿದ್ದುದೇ ಈ ಮಾತಿಗೆ ನಿದರ್ಶನವಾಗುತ್ತದೆ.

"ತಮಿಳು ನಾಡು- ಆಂಧ್ರ ಪ್ರದೇಶದಲ್ಲಿ ವಾಸವಾಗಿರುವ ಈಡಿಗರಿಗೆ ಬಗೆ ಬಗೆಯ ಹೆಸರುಗಳಿವೆ. ಸೇಲಂ. ಉತ್ತರ ಆರ್ಕಾಟ್ , ಮತ್ತು ಚಂಗಲ್ ಪೇಟೆಗಳಲ್ಲಿ ವಾಸವಾಗಿರುವವರಿಗೆ, 'ಈಡಿಗರು' 'ಇಂದ್ರರು' ಎಂಬ ಹೆಸರುಗಳಿವೆ. ನೆಲ್ಲೂರು ಜಿಲ್ಲೆಯವರಿಗೆ 'ಗಾಮಲರು', 'ಗ್ರಾಮಂಡ್ಲರು', ಎಂದೂ ತಿನ್ನವೇಲಿ ಜಿಲ್ಲೆಯವರಿಗೆ 'ಶಣ್ಣಾರು', 'ಕಡಪ', ಜಿಲ್ಲೆಯವರಿಗೆ 'ಅಸಲಿ',ಗಳು ನಾಗರಕೊಯಿಲ್ ಸುತ್ತ ಮುತ್ತಲ ಪ್ರದೇಶದವರಿಗೆ ನಾಡಾರ್ ಎಂದೂ ಹೆಸರುಂಟು." (ಈಡಿಗ ಜನಾಂಗ ಒಂದು ಅಧ್ಯಯನ ೨೦- ಹೋಮಸ).

ಕೇರಳದಲ್ಲಿರುವವರಿಗೆ ಈಳಿಗರು ಎಂದೂ ಉತ್ತರ ಮಲಬಾರ್ ನಲ್ಲಿರುವವರಿಗೆ ತಿಯ್ಯಾರೆಂದೂ ಕೊಚ್ಚಿನ್ ಮತ್ತು ತಿರುವಾಂಕೂರು ಕಡೆಯವರಿಗೆ ಚೇವನರು ಎಂದೂ ಕರೆಯುತ್ತಾರೆ.

ಜನಸಂಖ್ಯೆ-

(೧). ಆಂಧ್ರದಲ್ಲಿ ಸುಮಾರು ೬೦ ಲಕ್ಷಕ್ಕೂ ಹೆಚ್ಚು ಜನಸಂಖ್ಯೆ ಇದೆ.

೨). ಕರ್ನಾಟಕದಲ್ಲಿ ೩೫,ಲಕ್ಷ.

೩). ಕೇರಳದಲ್ಲಿ ೪೦ಲಕ್ಷ.

೪). ತಮಿಳು ನಾಡಿನಲ್ಲಿ ೧ಕೋಟಿ ಮೀರಿದ ಸಂಖ್ಯೆ ಇದೆ.

(ನೋಡಿ: ಕರಪತ್ರ: ಕರ್ನಾಟಕ ಆರ್ಯ ಈಡಿಗರ ಸಂಘ- ೧೯೯೫,

ಸುವರ್ಣಮಹೋತ್ಸವದ ಅಂಗವಾಗಿ ಪ್ರಕಟಿಸಿದ್ದು).

ಒಟ್ಟು ದಕ್ಷಿಣಭಾರತದಲ್ಲಿ - ೨ಕೋಟಿಗೂ ಮೀರಿದ ಈಡಿಗರ ಸಂಖ್ಯೆಯಿದೆ. ಪ್ರಧಾನವಾಗಿ ತಮಿಳುನಾಡಿನಲ್ಲಿ- ಡಾರ್ ಎಂದೂ ಕೇರಳದಲ್ಲಿ ಈಳವ, ತಿಯ್ಯಾ, ಎಂದೂ, ಕರ್ನಾಟಕದಲ್ಲಿ

ಈಡಿಗ,ಆಂಧ್ರದಲ್ಲಿ ಗೌಂಡ್ಲ- ಈಡಿಗ ಎಂದೂ ಗುರ್ತಿಸಲ್ಪಡುತ್ತಿದ್ದಾರೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಮಿತಿಗೊಳಿಸಿ ಹೇಳುವುದಾದರೆ, ಒಟ್ಟು ೩೫ ಲಕ್ಷ ಜನರಿದ್ದಾರೆ ಎಂದು ಕರ್ನಾಟಕ ಆರ್ಯ ಈಡಿಗರ ಸಂಘ ಗುರ್ತಿಸಿದೆ.

ಕರ್ನಾಟಕದ ಈ ಕೆಳಕಂಡ ಜಿಲ್ಲೆಗಳಲ್ಲಿ ಬಹುಸಂಖ್ಯಾತರಾಗಿದ್ದು ರಾಜಕೀಯವಾಗಿ ಗುರ್ತಿಸಿಕೊಂಡಿದ್ದಾರೆ.

**ಲೋಕಸಭಾಕ್ಷೇತ್ರಗಳು**

೧). ಶಿವಮೊಗ್ಗ, ೨). ಕಾರವಾರ, ೩). ಕೊಪ್ಪಳ, ೪). ಚಿಕ್ಕಬಳ್ಳಾಪುರ,೫). ಮಂಗಳುರು,
೬). ಉಡುಪಿ, ೭). ಗುಲ್ಬರ್ಗ.

ಕೆಳಕಂಡ ವಿಧಾನ ಸಭಾ ಕ್ಷೇತ್ರಗಳಲ್ಲಿ ರಾಜಕೀಯವಾಗಿ ಗುರ್ತಿಸಿಕೊಂಡಿದ್ದಾರೆ.

೧). ಶಿವಮೊಗ್ಗ ಜಿಲ್ಲೆಯ ಸೊರಬ, ಸಾಗರ, ಹೊಸನಗರ ತೀರ್ಥಹಳ್ಳಿ.

೨). ಉತ್ತರಕನ್ನಡ ಜಿಲ್ಲೆ: ಬಟ್ಕಳ ಅಂಕೋಲ, ಕುಮಟ.

೩). ದಕ್ಷಿಣ ಕನ್ನಡ : ಕಾಪು, ಮೊಡಬಿದರೆ, ವಿಠಲ, ಬೆಳ್ತಂಗಡಿ, ಬ್ರಹ್ಮಾವರ, ಪುತ್ತೂರು ,ಬೈಂದೂರು.

೪). ಗುಲ್ಬರ್ಗ ಜಿಲ್ಲೆ: ಅಫ್ ಜಲ್ ಪುರ, ಆಳಂದ.

೫). ರಾಯಚೂರು ಜಿಲ್ಲೆ: ಸಿಂಧನೂರು ಕೊಪ್ಪಳ, ಗಂಗಾವತಿ.

೬). ಬಳ್ಳಾರಿ ಜಿಲ್ಲೆ: ಕೊಟ್ಟೂರು.

೭). ಮಂಡ್ಯಜಿಲ್ಲೆ : ನಾಗಮಂಗಲ.

೮). ಮೈಸೂರು: ಹುಣಸೂರು.

೯). ಬೆಂಗಳೂರು ಗ್ರಾಮಾಂತರ: ದೊಡ್ಡಬಳ್ಳಾಪುರ, ಕನಕಪುರ.

೧೦). ಬೆಂಗಳೂರು ನಗರ: ಗಾಂಧಿನಗರ,ಚಾಮರಾಜಪೇಟೆ, ಜಯನಗರ.

೧೧). ತುಮಕೂರು ಜಿಲ್ಲೆ: ಕೊರಟಗೆರೆ, ಬೆಳ್ಳಾವಿ.

ಮೇಲ್ಕಂಡ, ಲೋಕಸಭಾ ಮತ್ತು ವಿಧಾನ ಸಭಾ ಕ್ಷೇತ್ರಗಳು ರಾಜಕೀಯವಾಗಿ ಈಡಿಗರು ಪ್ರಬಲಗೊಂಡಿರುವ ಕ್ಷೇತ್ರಗಳಾಗಿವೆ. (ಶ್ರೀ ಎ.ಎನ್ . ಪಾಪಯ್ಯನವರು ಮೇಲ್ಕಂಡ ವಿವರಗಳನ್ನು 'ಈಡಿಗ' ಸ್ವರ್ಣಮಹೋತ್ಸವ ಸಂಚಿಕೆಯಲ್ಲಿ ನೀಡಿದ್ದಾರೆ.) ಈ ಸಮುದಾಯದ ರಾಜಕೀಯ ನಾಯಕರುಗಳು, ರಾಜ್ಯದ ರಾಜಕೀಯದಲ್ಲಿ ಬಹುಮುಖ್ಯ ಪಾತ್ರವಹಿಸುತ್ತಿದ್ದಾರೆ.

ಇಂದಿನ ಸಾಮಾಜಿಕ ರಾಜಕೀಯ ವ್ಯವಸ್ಥೆಯೊಳಗಡೆ, ರಾಜಕೀಯ ನಾಯಕರಾಗಲಿ, ಕಲಾವಿಧರಾಗಲಿ ಬಂಡವಾಳ ಶಾಹಿಗಳಾಗಲಿ ಈ ಸಮುದಾಯದೊಂದಿಗೆ ಯಾವ ಬಗೆಯ ಸಂಬಂಧವನ್ನು ಯಾವಕಾರಣಕ್ಕೆ ಇಟ್ಟುಕೊಂಡಿದ್ದಾರೆ, ಎನ್ನುವ ಅಂಶ ಪ್ರಮುಖವಾಗಿ ಚರ್ಚೆಗೆ ಒಳಪಡಬೇಕಿದೆ. ಈ ಸಮುದಾಯ ಸಹ ಇಂತಹ ನಾಯಕರಮೇಲೆ ಅಥವಾ ಈಗಾಗಲೇ ಶ್ರೀಮಂತರಾಗಿ ಎಲ್ಲ ಬಗೆಯ ಸಾಮಾಜಿಕ ಅಥವಾ ಆರ್ಥಿಕ ಸ್ಥಾನಮಾನಗಳಲ್ಲಿ ಪಡೆದಿರುವ ಸಮೂಹದ ವ್ಯಕ್ತಿಗಳಿಂದ ಯಾವ ಬಗೆಯ ಅಪೇಕ್ಷೆಯನ್ನು ಇಟ್ಟುಕೊಳ್ಳಲು ಸಾಧ್ಯ? ಯಾವ ಬಗೆಯ ಸಂಬಂಧ ಇವರೊಂದಿಗೆಸಾಧ್ಯ? ಹೀಗೆ ಇಟ್ಟುಕೊಳ್ಳುವ ಅಪೇಕ್ಷೆ ಅಥವಾ ಸಂಬಂಧಗಳು ವಾಸ್ತವದಲ್ಲಿ ನಿಜವಾದ ಅರ್ಥದಲ್ಲಿ ಬೇರೂರಲು ಸಾಧ್ಯವೇ ಎನ್ನುವುದು ಚರ್ಚೆಗೊಳಪಡಬೇಕಿರುವ ಪ್ರಮುಖ ಅಂಶಗಳು.

### ೪) ಪೌರಾಣಿಕ ಹಿನ್ನೆಲೆ

ಈಡಿಗ ಸಮುದಾಯಕ್ಕೆ ಪೌರಾಣಿಕ ಹಿನ್ನೆಲೆ ಉಂಟು. ಆದಿಗೌಡ ಪುರಾಣವು ಈ ಸಮುದಾಯದ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತದೆ. ಈ ಸಮುದಾಯದ ಪೂರ್ವಜರನ್ನು ಕುರಿತ ಪುರಾಣವೇ ಇದಾಗಿದೆ. ಈ ಪುರಾಣಕತೆಯ ಸಂಕ್ಷಿಪ್ತ ರೂಪ ಇಂತಿದೆ.

"ನೈಮಿಷ್ಯಾರಣ್ಯದಲ್ಲಿ ತಪಸ್ಸಾಚರಿಸುತ್ತಿದ್ದ ಶೌನಿಕಾದಿ ಮಹಾಮುನಿಗಳಿಗೆ ಅವರ ಅಪೇಕ್ಷೆಯಂತೆ ಅಲ್ಲಿಗೆ ಆಗಮಿಸಿದ ಸೂತ ಪುರಾಣಿಕರು ಗೌಡಪುರಾವನ್ನು ಹೇಳುತ್ತಾರೆ".

"ಕೃತಯುಗದ ಆದಿಯಲ್ಲಿ ಪಾರ್ವತಿ ಪರಮೇಶ್ವರ ಸಮ್ಮುಖದಲ್ಲಿ ಸುರ ಸಮೂಹವು ಸಭೆಸೇರಿರುತ್ತದೆ. ಸಭೆಯ ಮಧ್ಯದಲ್ಲೇ ಪಾರ್ವತಿಗೆ ದಾಹವಾಗುತ್ತದೆ. ಪರಮೇಶ್ವರನಿಗೆ ತನ್ನ ದಾಹಬಾದೆಯನ್ನು ತಿಳಿಸುತ್ತಾಳೆ. ಪರಮೇಶ್ವರ, ಕೌಂಡಿಣ್ಯ ಮಹರ್ಷಿಯನ್ನು ಸ್ಮರಿಸಿ ಬರಮಾಡಿಕೊಂಡು ಪಂಚವೃಕ್ಷಗಳಾದ, ತೆಂಗು,ತಾಳೆ,

ಈಚಲು,ಭಗಿನೆ, ಖರ್ಜೂರದ ಮರಗಳಿಂದ ಸಿದ್ಧಿರಸವನ್ನು ತರಲು ತಿಳಿಸುತ್ತಾನೆ. ಕೌಂಡಿಣ್ಯ ಮಹರ್ಷಿ ಪಂಚವೃಕ್ಷಗಳಿಂದ ಸಿದ್ಧಿರಸವನ್ನು ತಂದು, ಪಾರ್ವತಿ ಪರಶಿವರಾದಿಯಾಗಿ ಇಡೀ ದೇವತಾ ಸಮೂಹಕ್ಕೆ ಹಂಚುತ್ತಾನೆ. ಕುಡಿದವರು ಮತ್ತೇರಿ ತೂರಾಡುತ್ತಾರೆ. ಅವರನ್ನು ಎಳೆತಂದು ಅವರವರ ಸ್ಥಾನಕ್ಕೆ ಕೂಡಿಸುತ್ತಾನೆ. ದೇವತೆಗಳು ಮತ್ತಿನಲ್ಲಿ ಈ ಕೌಂಡಿಣ್ಯ ಮಹರ್ಷಿಯನ್ನು "ಈಡ್ಯ ಕುಮಾರನೀಡುಗೌಡ" ಎಂದದರಿಂದ 'ಗೌಡ' ಸಾಮಾನ್ಯಜನಕ್ಕೆ ಅನ್ವಯವಾದುದೆಂದೂ ಇದರಿಂದ ನನಗೆ ವ್ಯಥೆಯಾಗಿದೆಯೆಂದೂ ಶಿವನಲ್ಲಿ ಕೌಂಡಿಣ್ಯ ಮಹರ್ಷಿ ದೂರುತ್ತಾನೆ.ಅದಕ್ಕೆ ಶಿವನು, ಗೌಡ ಮಂತ್ರ ಶಕ್ತಿಯನ್ನು ಪಡೆದು 'ಸಿದ್ಧಿರಸ' ತೆಗೆಯುವ ಶಕ್ತಿಯನ್ನು ಪಡೆದ ಕೌಂಡಿಣ್ಯನಿಗೆ ಈ ಹೆಸರು ಅನ್ವರ್ಥವೆಂದು ಹೇಳಿ ಕೌಂಡಿಣ್ಯ ಋಷಿಯನ್ನು ಸಮಾಧಾನ ಪಡಿಸುತ್ತಾನೆ. (ಈಕಾರಣಕ್ಕೆ ಈಡಿಗರು ಆಂಧ್ರದಾದ್ಯಂತ ಈಡಿಗಗೌಡರೆಂದು ಗುರ್ತಿಸಲ್ಪಡುತ್ತಾರೆ).

ಸಭೆಯವರಿಗೆ ಹಂಚಿದ ಸಿದ್ಧಿರಸ ಕೌಂಡಿನ್ಯ ಋಷಿಗೆ ಸಿಗಲಿಲ್ಲ. ಈ ಕಾರಣಕ್ಕೆ ನಿನ್ನ ವಂಶಕ್ಕೆ ಸಿಗದಿರಲಿ,ಎಂದು ಈ ಸಿದ್ಧಿರಸವನ್ನು ದೇವತೆಗಳಿಗೆ ಸಮರ್ಪಿಸುತ್ತಾ ಬರಬೇಕೆಂದೂ ನಿನ್ನ ಗುಹದಲ್ಲಿ ವಜ್ರ ವೈಢೂರ್ಯ ಸೇರಲೆಂದೂ ಅಪ್ಪಣೆ ಕೊಡಿಸುತ್ತಾನೆ (ಗೌಡಪುರಾಣದ ಕಥೆಯನ್ನು ಇ. ಹನಮಂತಯ್ಯನವರು ಆಧಿಗೌಡ ಪೀಠಿಕೆಯಿಂದ (ಹಿಂದಿ)ಅನುವಾದಿಸಿಕೊಂಡಿದ್ದಾರೆ. ಅವರ ಈಡಿಗ ಜನಾಂಗದ ಚರಿತ್ರೆ, ೧೯೭೯, - ಕೃತಿಯಲ್ಲಿ ಈ ಅನುವಾದವಿದೆ. ಅದನ್ನು ಇಲ್ಲಿ ಬಳಸಿಕೊಳ್ಳಲಾಗಿದೆ). ಕೌಂಡಿಣ್ಯ ಮುನಿಯು ಅತ್ರಿಮಹರ್ಷಿಯ ಮಾನಸಪುತ್ರನು. ಈತನು ನಾಲ್ಕು ಗೋತ್ರಗಳನ್ನು ಸೃಷ್ಟಿಸಿದನು. ಅವುಗಳೇ ಕೌಂಡಿಣ್ಯ- ಕಾರುಣ್ಯ, ಕಮಂಡಲ, ವಾತ್ಸಲ್ಯ ಗೋತ್ರಗಳಾಗಿವೆ.

"ಕೌಂಡಿಣ್ಯ ಗೋತ್ರ ವಂಶಕ್ಕೆ ಗೋಪಾಲ ಗೌಡನು ವಂಶೋದ್ಧಾರಕನಾಗಿದ್ದು, ಗೋಪಾಲಗೌಡ ಮತ್ತು ಮೀರಮಾಂಬರಿಗೆ ಜನಿಸಿದ (ಕಾಟಮಗೌಡ) ಕಾಟಮ ರಾಜನು ಪ್ರಸಿದ್ಧನಾಗಿದ್ದಾನೆ." ಕಾರುಣ್ಯಗೋತ್ರದಲ್ಲಿ 'ದಾನಾರ, ಗೌಡ,'ನೂ ಕಮಂಡಲ ಗೋತ್ರಕ್ಕೆ 'ಚೆನ್ನಾರಗೌಡ', ನೂ ವಾತ್ಸಲ್ಯಗೋತ್ರಕ್ಕೆ 'ನಿರ್ವಾಣಗೌಡ',ನೂ ವಂಶೋದ್ಧಾರಕರಾಗಿ ಪ್ರಸಿದ್ಧರಾಗಿದ್ದಾರೆ." (ಇ ಹನುಮಂತಯ್ಯನವರು ತಮ್ಮ " ಈಡಿಗ ಜನಾಂಗದ ಚರಿತ್ರೆ" ಕೃತಿಯಲ್ಲಿ ಮೇಲಿನ ವಿವರಣೆಯನ್ನು ಕೊಡುತ್ತಾರೆ.

೨). ಶಿವನಂದೀಶ್ವರ ಸಂವಾದ, ಶಿವತತ್ವ ಸಾರ ಗ್ರಂಥಗಳ ಆಧಾರದಿಂದ ಲಕ್ಷ್ಮಣ ಕೊಡಸೆಯವರು, ಮೇಲಿನ ಕಥೆಗೆ ಸಾಮ್ಯವಾದ ಮತ್ತೊಂದು ಕಥೆಯನ್ನು ಹೆಕ್ಕಿ ತೆಗೆದಿದ್ದಾರೆ." ಈಕಥೆಯು ನಂದೀಶ್ವರನಿಗೆ

ಶಿವನು ಕೌಂಡಿಣ್ಯವಂಶ ಜಾತಿಯ ಕಥೆ ಹೇಳಿದಂತೆ ನಿರೂಪಿತವಾಗಿದೆ ಇಲ್ಲಿ ಗೌಡವಂಶದ ಕಥೆ ಗೋಪಾಲ ಗೌಡ, ಕಾಟಮಗೌಡನ ಕಥೆ ಇತ್ಯಾದಿ ವಿವರಗಳು ದೊರೆಯುತ್ತವೆ.

೩). ವೇದಗಳಲ್ಲಿಯೂ ಕೌಂಡಿಣ್ಯ, ಕಾರುಣ್ಯ ಕಮಂಡಲ ಋಷಿಗಳು, ತಾಳೆ, ಗೀತದ 'ಸಿದ್ಧಿರಸ',ವನ್ನು ಪಡೆಯಲು ಮಂತ್ರಶಕ್ತಿಯ ಬಳಸುತ್ತಿದ್ದ ಉಲ್ಲೇಖಗಳಿವೆ. ಈ ರಸವನ್ನು ಸುರರಿಗೆ ಕೊಡುವ ಉಲ್ಲೇಖಗಳಿವೆ. (ಸಂಗ್ರಹ ಲಕ್ಷಣಕೊಡಸೆ).

೪). ವ್ಯಾಸರೇ ಈಡಿಗರ ಮೂಲ ಪುರುಷರೆಂಬ ಅಭಿಪ್ರಾಯವಿದೆ.

೫). ಮೆಂಕೆಂಜಿ ಬರಹದಲ್ಲಿರುವಂತೆ, ಏಳುಜನ ಗಂಧರ್ವ ಸ್ತ್ರೀಯರು ಪಡೆದ ಏಳುಜನ ಮಹಾ ಪುರುಷರೇ ಈಡಿಗರ ಮೂಲಪುರುಷರು.

೬). ಮತ್ತೊಂದು ಕಥೆ ಹೀಗಿದೆ." ಅಮೃತ ಮಥನ ಕಾಲದಲ್ಲಿ ಆದಿಶೇಷನು ಕಾರಿದ ವಿಷದಿಂದ ನೀರೆಲ್ಲವೂ ವಿಷವಾಗಿ, ಕುಡಿಯಲು ನೀರು ಇಲ್ಲವಾಗುತ್ತದೆ. ಪ್ರಿಯ ಭಕ್ತರಾದ ಕೌಂಡಿಣ್ಯ ಕಾರುಣ್ಯರಿಂದ ಪಂಚವೃಕ್ಷಗಳಲ್ಲಿ 'ಸಿದ್ಧಿರಸ'ತೆಗೆಸಿ ಕೊಡುತ್ತಾನೆ. ಆನಂತರ ದೇವತೆಗಳಿಗೆ ಅದನ್ನು ಸರಬರಾಜು ಮಾಡುವವರಾಗುತ್ತಾರೆ". ಮೇಲಿನ ಎಲ್ಲಾ ಕಥೆಗಳಲ್ಲೂ ಕೌಂಡಿಣ್ಯ ಮುನಿಯ ಕಥೆಯಿದೆ. ಅವನ ವೃತ್ತಿ ಸಿದ್ಧಿರಸತೆಗೆಯುವುದೇ ಆಗಿದೆ. ವೇದ, ಮತ್ತು ಗೌತಪುರಾಣ ಗಳಲ್ಲಿರುವ ಕಥೆಗಳು ಮತ್ತಿತರೆ ಪುರಾಣಕಥೆಗಳು ಕೌಂಡಿಣ್ಯ, ಕಾರಣ್ಯ ಮೊದಲಾದ ವರಬಗ್ಗೆ ವಿವರಗಳನ್ನು ಕೊಡುತ್ತವೆ. ಈ ವಿವರಗಳಿಂದ ಒಂದು ಅಂಶ ಸ್ಪಷ್ಟವಾಗುತ್ತದೆ. ವೇದಪೂರ್ವಕಾಲದಿಂದ ಕಳ್ಳು ಇಳಿಸುವ ವೃತ್ತಿಯು ಅಸ್ತಿತ್ವದಲ್ಲಿದ್ದು ಆವೇಳೆಗಾಗಲೇ ಅದು ಒಂದು ಪಾವಿತ್ರ್ಯ ಸ್ಥಾನವನ್ನು ಪಡೆದುಕೊಂಡು ಆಚರಣೆಯಲ್ಲಿ ರೂಢಿಗೆ ಬಂದಿತ್ತು. ಮತ್ತು ಈ ಕಳ್ಳು ಸುರರಿಗೆ ಅರ್ಪಿತವಾಗುತ್ತಿತು. ಈಡಿಗರಿಗೆ ಇದರ ಸೇವನೆ ನಿಷಿದ್ಧವಾಗಿತ್ತು. (ಇಂದಿಗೂ ಮಡ್ಡಿ ಈಡಿಗರು ಕಳ್ಳನ್ನು ಕುಡಿಯುವುದಿಲ್ಲ).

## ೫) ಜಾನಪದ ಹಿನ್ನಲೆ

ಪುರಾಣ ಕಥೆಗಳೇ ಜಾನಪದ ರೂಪವನ್ನು ಪಡೆದುಕೊಂಡು ಹಿರಿಯ ಈಡಿಗರ ಮತ್ತು ಇತರೆ ಚೌಡಿಕೆ ಕಥೆಗಾರರ ಬಾಯಿಯಲ್ಲಿವೆ. ಜನ ಸಾಮನ್ಯರು ಪುರಾಣವನ್ನು ನೋಡಿರುವ, ಅಥವಾ ಗ್ರಹಿಸಿರುವ ಬಗೆಯನ್ನು ಗುರ್ತಿಸಲು ಈ ಕಥೆಗಳಿಂದ ಸಾಧ್ಯವಿದೆ.

ಒಂದಾನೊಂದು ದಿನ ಪಾರ್ವತಿ ಪರಮೇಶ್ವರರು ವಿಹಾರಾರ್ಥವಾಗಿ ಕಾಡಿಗೆ ಬರುತ್ತಾರೆ. ಪಾರ್ವತಿಗೆ ಬಾಯಾರಿಕೆಯಾಗುತ್ತದೆ. ಹತ್ತಿರದಲ್ಲಿದ ಈಚಲು ಮರವನ್ನು ನೋಡಿ ಈ ಮರದ ರಸದಿಂದ ದಾಹ ತಣಿಯಲು ಸಾಧ್ಯವೆಂದು ಯೋಚಿಸುತ್ತಾಳೆ. ಅದೇಮಾರ್ಗವಾಗಿ ಬಂದ ಬಳೆಮಾರುವ ಬಣಜಿಗನಿಗೆ ಈಚಲು ರಸ ತೆಗೆಯುವುದನ್ನು ಪಾರ್ವತಿ ಹೇಳಿಕೊಟ್ಟು, ತೆಗೆಸುತ್ತಾಳೆ. ಅದನ್ನು ಸೇವಿಸಿ ಸಂತೃಪ್ತಿಗೊಂಡು ಉಂಗುರವೊಂದನ್ನು ಕೊಟ್ಟು, ಅದರ ಗುಟ್ಟುತಿಳಿಸಿ ಹೊರಡುತ್ತಾರೆ. ಆ ಉಂಗುರದ ಸಹಾಯದಿಂದ ಈಚಲು ಮರವನ್ನು ಬಗ್ಗಿಸಿ ಕಳ್ಳು ತೆಗೆಯಲು ಸಾಧ್ಯವಿತ್ತು. ಕ್ರಮೇಣ ಆಚಾರ ತಪ್ಪಿದ್ದರಿಂದ ಆ ಉಂಗುರವನ್ನು ಅಳಿಲು ನುಂಗಿಹಾಕಿತು. ಅನಂತರ ಮರವನ್ನು ಹತ್ತಿಯೇ ರಸತೆಗೆಯಬೇಕಾಯಿತು". ಇದಿಷ್ಟು ಕಥೆಯ ಸ್ಥೂಲ ರೂಪ. (ನಿರೂಪಕ, ದೊಡ್ಡ ಗಂಗಪ್ಪ, ಕಗ್ಗಲಕಟ್ಟೆ ಹೊಸದುರ್ಗ ತಾ||).

ಇಲ್ಲಿ ಪಾರ್ವತಿ ಪರಶಿವರೂ ಸಹ ಸಾಮಾನ್ಯ ಜನರಂತೆಯೇ ನಿರೂಪಿತರಾಗಿದ್ದಾರೆ. ಈಡಿಗರು ಬಲಿಜ ಗುಂಪಿನಿಂದ ಹೊರಬಿದ್ದು ಈ ವೃತ್ತಿಯನ್ನು ಅನುಸರಿಸಿ ಈಡಿಗರಾದರು ಎನ್ನುವ ಇತಿಹಾಸ ಸತ್ಯ ಈ ಕಥೆಯಲ್ಲಿದೆ. ಹೀಗೆ ಚಾರಿತ್ರಿಕ ಸತ್ಯಗಳೇ ಅಲ್ಪಸ್ವಲ್ಪ ವೆತ್ಯಾಸದೊಂದಿಗೆ ಜನಪದ ಕತೆಗಳಾಗಿ ರೂಪಗೊಂಡಿರಲು ಸಾಧ್ಯವೆನ್ನುವ ಮಾತನ್ನು ಒಪ್ಪಲು ಈ ಕಥೆ ಆಧಾರವಾಗಿದೆ.

೧).ಕಾಟಮೇಶ್ವರನ ಕಥೆಯು ಈಡಿಗ ಜನರ ಹಿರಿಯರಲ್ಲಿ ಸಾಮಾನ್ಯ ಜನರ ಬದುಕಿನ ವಿವಿರಗಳ ಜೊತೆಯಲ್ಲಿ ರೂಪಪಡೆದಿದೆ. ಹೀಗೆ ಇನ್ನು ಹಲವಾರು ಕಥೆಗಳಿವೆ.

೨). ಕೋಟಿ- ಚೆನ್ನಯ್ಯರ ಕಥೆ. ತುಳು ಜನಪದ ಕಥೆಗಳಲ್ಲಿ ಇದು ಮಹತ್ವದ ಸ್ಥಾನ ಪಡೆದುಕೊಂಡಿದೆ. ಕೋಟಿಚನ್ನಯ್ಯರ ಕಥೆ ಇಡೀ ಬಿಲ್ಲವರ ಬದುಕಿನ ಸ್ವರೂಪದ ಕಥೆಯೂ ಆಗಬಹುದು. ಅವರ ವೃತ್ತಿ, ಸಮಾಜದಲ್ಲಿ ಅವರು ಎದುರಿಸಿದ ಪ್ರತಿಭಟನೆ, ತಮ್ಮ ಅಸ್ತಿತ್ವಕ್ಕಾಗಿ ನಡೆಸಿದ ಹೋರಾಟ, ಇವುಗಳು ಬಿಲ್ಲವರ

ಜನಜೀವನದ ಕಥೆಯನ್ನೆ ಪ್ರಾತಿನಿಧಿಕವಾಗಿ ಬಿಂಬಿಸುತ್ತವೆ. ಕೋಟಿ-ಚೆನ್ನಯ್ಯರು ಬಿಲ್ಲವರ ಸಾಂಸ್ಕೃತಿಕ ವ್ಯಕ್ತಿತ್ವಗಳೂ ಆಗಿದ್ದಾರೆಂಬುದು ಗಮನಾರ್ಹ.

೩). ಮೇಲಿನ ಪುರಾಣ ಮತ್ತು ಜನಪದಕಥೆಗಳು ಈ ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಚರಿತ್ರೆಯ ವಿವರಗಳನ್ನು ನೀಡಲು ಯೋಗ್ಯವಾಗಿವೆ. ವಾಸ್ತವ ಚರಿತ್ರೆಯನ್ನು ಕಟ್ಟಿಕೊಳ್ಳಲು ಅಗತ್ಯವಾದ ಮಾಹಿತಿಗಳು ಹೀಗೆ ಪುರಾಣ ಮತ್ತು ಜನಪದ ಕಥೆಗಳಲ್ಲಿ ಉಡುಗಿಕೊಂಡಿರುತ್ತವೆ. ಇವು ಅತಿಮಾನುಷ ರೂಪ ಪಡೆಯಲು ಬೇರೆಬೇರೆ ಕಾರಣಗಳಿದ್ದರೂ ಅವುಗಳ ತೆರೆಗಳನ್ನು ಸರಿಸಿ ನೋಡುವುದು ಸಾಧ್ಯವಾಗುತ್ತದೆ. (ಮಲೆಕುಡಿಯರ ಕಳ್ಳು ಇಳಿಸುವ ವೃತ್ತಿಗೆ ಸಂಬಂಧಿಸಿದ ಜನಪದಕತೆಯು ಈಡಿಗರ ಕತೆಗೆ ನೇರಾಸಾಮ್ಯತೆಯನ್ನು ಪಡೆದುಕೊಂಡಿದೆ. ಹಾಗಾಗಿ ಇವರೂ ಈ ಸಮುದಾಯದ, ಸಮೀಪ ವರ್ತಿಗಳಾಗಿರಲು ಸಾಧ್ಯವೇ ಎನ್ನುವುದನ್ನು ಆಲೋಚಿಸಲು ಸಾಧ್ಯವಿದೆ).

## ೬. ಚಾರಿತ್ರಿಕ ಹಿನ್ನೆಲೆ

ಯಾವುದೇ ದೇಶ, ವ್ಯಕ್ತಿ ವಸ್ತು ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಯಲು ನಾವು ಲಿಖಿತ ದಾಖಲೆಗಳಿಗೆ ಮೊರೆ ಹೋಗುವುದು ರೂಢಿ. ವಸಾಹತು ಶಾಹಿ ವ್ಯವಸ್ಥೆಯು ಈ ಮಾದರಿಯನ್ನು ಭಾರತೀಯರ ಮೇಲೆ ಹೇರಿರುವುದು ಸ್ಪಷ್ಟಸಂಗತಿ, ಈಚೆಗೆ ಓರಿಯೆಂಟಲಿಸ್ಟರ ಅಧ್ಯಯನ ಮಾದರಿಯನ್ನು ಮೀರಿದ ಅಧ್ಯಯನ ಮಾದರಿಗಳು ಹುಟ್ಟಿಕೊಂಡಿವೆ. ಇದುವರೆಗೂ ಚರಿತ್ರೆಯನ್ನು ಕಟ್ಟಿಕೊಡಲು ಅನರ್ಹ ಆಧಾರಗಳೆಂಬ ಅಲಕ್ಷಿತ ಭಾವನೆಗೆ ಒಳಗಾಗಿದ್ದ ಪುರಾಣ ಮತ್ತು ಮೌಖಿಕ ಪರಂಪರೆಯ ಕಥೆ, ಆಹಾಡುಗಳು ಚರಿತ್ರೆಯನ್ನು ಕಟ್ಟಲು ಯೋಗ್ಯ ಆಧಾರಗಳನ್ನು ನೀಡುತ್ತವೆ ಎನ್ನುವ ತಿಳುವಳಿಕೆ ಬಂದಿದೆ. ಇವುಗಳು ಹೆಚ್ಚಿನ ಮಟ್ಟಿಗೆ ಜನಸಮೂಹದಲ್ಲಿ ಉಳಿದುಕೊಂಡು ಬಂದಿರುವುದರಿಂದ ಜನಸಾಮಾನ್ಯರ ಚರಿತ್ರೆಯನ್ನು ಅವರದ್ದೇ ಆದ ಅನುಭವ ಮತ್ತು ತಿಳುವಳಿಯ ಹಿನ್ನೆಲೆಯಲ್ಲಿ ಕಟ್ಟಿಕೊಡಲು ಸಾಧ್ಯಾವಾಗಿದೆ. ದೇಶೀಯ ಚಿಂತನೆಯ ನೆಲೆಗಟ್ಟಿನಲ್ಲಿ ಇಂದು ಕನ್ನಡದ ಮಂಟೇಸ್ವಾಮಿ ಕಥೆ ಕುಮಾರರಾಮನಕಥೆ. ಮಲೆಯ ಮಾದಪ್ಪನ ಕತೆಗಳು ಅಧ್ಯಯನಕ್ಕೆ ಒಳಗಾಗುತ್ತಿವೆ. ಇದು ಚಾರಿತ್ರಿಕ ಅಧ್ಯಯನದ ಗುಣಾತ್ಮಕ ಬೆಳೆವಣಿಗೆಯೂ ಹೌದು.

ಈಡಿಗರ ಚಾರಿತ್ರಿಕ ಹಿನ್ನೆಲೆಯನ್ನು ಗುರುತಿಸುವಲ್ಲಿ ಅವರಲ್ಲಿ ಲಭ್ಯವಿರುವ ಪುರಾಣಕಥೆಗಳು, ಜಾನಪದ ಕತೆಗಳು ಉಪಯೋಗಕ್ಕೆ ಬರುತ್ತವೆ. ಹಾಗೆಯೇ ಕೆಲವು ಲಿಖಿತ ಧಾಖಲೆಗಳೂ ದೊರೆಯುತ್ತವೆ. ಲಿಖಿತ ಧಾಖಲೆಗಳು ಸಾಮಾನ್ಯವಾಗಿ ಪ್ರಬಲವಾದ ಒಂದು ವರ್ಗ ಅಥವಾ ವ್ಯಕ್ತಿಯ ಕಥೆಗಳನ್ನೋ ಅಥವಾ ಚರಿತ್ರೆಯನ್ನೋ ಎತ್ತಿ ಹಿಡಿಯುವುದರಿಂದ ಜನಸಾಮಾನ್ಯರ ಮೇಲೆ ಬೆಳಕು ಚೆಲ್ಲಲಾರವು. ಹಾಗೆ ನೋಡಿದರೆ ಮೌಖಿಕ ಆಧಾರಗಳೇ ಈದಿಸೆಯ ಲ್ಲಿ ಹೆಚ್ಚು ಉಪಯುಕ್ತವಾಗಬಹುದು.(ಅಕ್ಷರ,ಬಳಕೆಯು ಹಿಂದಿನಿಂದಲೂ ಪ್ರಬಲ ವರ್ಗದ ಹಿಡಿತದಲ್ಲಿತ್ತು ಎನ್ನುವುದು ಗಮನಾರ್ಹ).

೧). ಗೌಡಪುರಾಣದಲ್ಲಿ ದೊರೆಯುವ ವಿವರಗಳ ಪ್ರಕಾರ, ಈಡಿಗರು ವೇದ ಕಾಲಗಳಿಂದಲೂ ಇದ್ದರು. ಅಂದಿನಿಂದಲೂ ಮತ್ತು ಅದಕ್ಕೂ ಹಿಂದಿನಿಂದ ಲೂ ಇವರ "ಕುಳ್ಳುವೃತ್ತಿ" ಯು ಒಂದು ಸಾಮಾಜಿಕ ಸ್ಥಾನಮಾನವನ್ನು ಪಡೆದುಕೊಂಡ ವೃತ್ತಿಯಾಗಿತ್ತು ಎನ್ನುವುದು ತಿಳಿಯುತ್ತದೆ.

ಮೂಲಪುರುಷರೆಂದು ತಿಳಿದು ಬರುವ ಕೌಂಡಿಣ್ಯ ಋಷಿಯು ಕಳ್ಳನ್ನು ದೇವತೆಗಳಿಗೆ ಸರಬರಾಜು ಮಾಡುತ್ತಿದ್ದು, ಅದರಿಂದ ಸಂಪತ್ತನ್ನೂ ಸಂಗ್ರಹಿಸುತ್ತಿದ್ದ, ಎನ್ನುವುದು ವಿವರಗಳಿಂದ ತಿಳಿದು ಬರುತ್ತದೆ. ಅಂದು ಈ ವೃತ್ತಿಯು ಪ್ರಬಲರಾದ ದೇವತೆಗಳಿಗೆ ಪ್ರಿಯವಾಗಿದ್ದರಿಂದ ಕಳ್ಳು ಪವಿತ್ರವಾಗಿತ್ತು ಆ ವೃತ್ತಿಯನ್ನು ಅನುಸರಿಸುತ್ತಿದ್ದ ಈಡಿಗನಿಗೂ ಸಮಾಜದ ಮನ್ನಣೆಗಳು ದೊರೆತ್ತಿದ್ದವು ಎನ್ನುವುದು ತಿಳಿಯುತ್ತದೆ.

ಕೃತಯುಗದಲ್ಲಿ ಕಳ್ಳನ್ನು' ಸಿದ್ಧಿರಸ', ವೆಂದೂ ಅಮೃತಕ್ಕೆ ಸಮಾನವೆಂದೂ ಭಾವಿಸಲಾಗುತ್ತಿತ್ತು. "ತ್ರೇತಾಯುಗದಲ್ಲಿ 'ವಾರುಣಿ', ದ್ವಾಪರದಲ್ಲಿ 'ಮಧು' ಕಲಿಯುಗದ್ಲಲಿ 'ಹೆಂಡ'ವೆಂದು ಇದು ಕರೆಯಲ್ಪಟ್ಟಿತು", ಎನ್ನವ ವಿವರ ಗೌಡಪುರಾಣದಲ್ಲಿ ಸಿಗುತ್ತದೆ. ಕಳ್ಳು ಚರಿತ್ರೆಯ ವಿಕಾಸದೊಂದಿಗೆ ತನ್ನ ವ್ಯಾಪಾರಿ ಗುಣವನ್ನು ಹೆಚ್ಚಿಸಿಕೊಂಡಂತೆ, ಅದರ ಗುಣಮಟ್ಟ ಕೆಡಲಾರಂಭಿಸಿತು. ಮೇಲ್ವರ್ಗದವರಿಂದ ಇದು ಈ ಕಾರಣಕ್ಕೆ ತಿರಸ್ಕಾರಕ್ಕೆ ಒಳಪಟ್ಟಿತು.ಹೀಗೆ ತಿರಸ್ಕಾರಕ್ಕೆ ಒಳಪಡಲು ಚಾರಿತ್ರಿಕ ಕಾರಣಗಳಿವೆ. ವೈಧಿಕ ಧರ್ಮಕ್ಕೆ ಎದುರಾಗಿ ಹುಟ್ಟಿದ ಜೈನ ಬೌದ್ಧ ಧರ್ಮಗಳ ಹಿನ್ನೆಲೆಯಲ್ಲಿ ಇದಕ್ಕೆ ಕಾರಣಗಳಿವೆ. ನಂತರ ಇದು ಕೆಳವರ್ಗಕ್ಕೆ (ದುಡಿವಜನರಿಗೆ) ಲಭ್ಯವಾಗಲಾರಂಭಿಸಿತು. ಕೆಳವರ್ಗದವರಿಗೆ ಇದು ಪೂಜ್ಯನೀಯವಾಯಿತು. ಮೇಲ್ವರ್ಗದವರಿಗೆ ಹೆಂಡವಾಯಿತು. ಹೀಗೆ ಕಳ್ಳು ವೃತ್ತಿಯ ವಿಕಾಸದೊಂದಿಗೆ ಈಡಿಗ ಜನಾಂಗದ ಸಾಮಾಜಿಕ ಸಾಂಸ್ಕೃತಿಕ ಇತಿಹಾಸವೂ ತನ್ನ ವಿಕಾಸವನ್ನು ಪಡೆದುಕೊಂಡಿದೆ.

ಗೌಡ್ಡಪುರಾಣದಲ್ಲೇ ವಿವರಗಳು ದೊರೆಯುವಂತೆ, ಗೋಪಾಲಗೌಡ, ಕಾಟಮೇಶ್ವರ ದಾನಾರಗೌಡ, ಮೊದಲಾದ ಪ್ರಸಿದ್ಧ ರಾಜರೂ'ಗೌಡ' ರಾಜ್ಯವನ್ನು ಆಳಿದ್ದಾರೆ. (ಗೌಡದೇಶವೆನ್ನುವುದು ಆರ್ಯಾವರ್ತದ ಒಂದು ಭಾಗ, ( ಪ್ರಾಚೀನ) ಇದು ವಂಗ (ಬಂಗಾಳ) ದೇಶದಿಂದ ಅಮರ ನಾಥದವರೆಗೆ ವಿಸ್ತರಿಸಿತ್ತೆಂದು ತಿಳಿದುಬರುತ್ತದೆ. ಉತ್ತರ ಹಿಂದೂ ಸ್ಥಾನದಲ್ಲಿರುವ ಹಿಮವತ್ಪರ್ವತ ಮತ್ತು ವಿಂಧ್ಯ ಪರ್ವತಗಳ ಮಧ್ಯೆ ಇರುವ ರಾಜಸ್ಥಾನ, ದೆಹಲಿ, ಆಗ್ರಾ, ಮಥುರಾ, ಪ್ರಯಾಗ, ಕಾಶಿ ಗಯಾಗಳು ಗೌಡದೇಶದಲ್ಲಿದ್ದವು ). ಗೌಡ ಈಡಿಗರು (ಆರ್ಯಮೂಲದವರು ) ರಾಜರಾಗಿದ್ದು ಪ್ರಸಿದ್ಧಿ ಹೊಂದಿದವರೆಂದೂ ತಿಳಿದುಬರುತ್ತದೆ. ಇಷ್ಟು ಮಾತ್ರಕ್ಕೆ ಇಂದಿನ ಈಡಿಗ, ಒಳಪಂಗಡಗಳೆಲ್ಲವೂ ಇದೇ ಮೂಲದಿಂದ ಹೊರಬಿದ್ದವುಗಳೆಂದು ಹೇಳಲಾಗದು. ಉಳಿದೆರಡು ಪಂಗಡಗಳಲ್ಲಿ ಸಿಗುವ ವಿವರಗಳ ಪ್ರಕಾರ ಇವರು (ಉದಾ: ದೀವರು+ ಬಲ್ಲವರು) ಸಿಂಹಳ ಮೂಲದವರು ಆಗಿರಬಹುದೆಂದು ತಿಳಿಯುತ್ತದೆ. ಮಲೆಕುಡಿಯುವರಂತಹ ಬುಡಕಟ್ಟು ಲಕ್ಷಣಗಳುಳ್ಳ ಜನರನ್ನು ಈ ಮೂಲಕ್ಕೆ ಹೋಲಿಸಿ ಮಾತನಾಡುವುದು ಕಷ್ಟ.

ಗೌಡದೇಶವನ್ನಾಳಿದ ಜನರೇ ಆಂಧ್ರದ ಗೌಂಡ್ಲ- ಈಡಿಗರೆಂದೂ ಅಲ್ಲಿಂದ ವಲಸೆ ಬಂದವರೇ ಕರ್ನಾಟಕದ ಬಯಲು ಸೀಮೆಯ ಈಡಿಗರೆಂದು ಹೇಳಲು ಆಧಾರಗಳಿವೆ. ಅವರ ಮಾತೃಭಾಷೆ ತೆಲುಗು, ಆರಾಧ್ಯದೈವ ಕಾಟಮೇಶ್ವರರಾಗಿರುವುದರಿಂದ ಹೀಗೆ ಹೇಳಲು ಸಾಧ್ಯವಾಗುತ್ತದೆ. ಇವರು ಬಹುತೇಕ ಆಂಧ್ರದ ದೈವಗಳಿಗೆ ಇಂದೂ ನಡೆದು ಕೊಳ್ಳುತ್ತಾರೆ. ಉದಾ: ಓಬಳನರಸಿಂಹ, ಉರ್ಕುಂದಿ ಈರಣ್ಣ ಇತ್ಯಾದಿ.

ಯಲ್ಲಮ್ಮನನ್ನು ಕುರಿತ ಜನಪದ ಮೂಲದ ಕತೆಯೊಂದರಲ್ಲಿ ಈಡಿಗರ ಮಧ್ಯಕಾಲೀನ ಸಾಮಾಜಿಕ ಜೀವನದ ವಿವರಗಳ ತುಣುಕುಗಳು ಸಿಗುತ್ತವೆ. (ವಿವರಕ್ಕೆ ನೋಡಿ. ದಕ್ಷಿಣಕರ್ನಾಟಕದ ಜನಪದ; ಕಾವ್ಯ ಪ್ರಕಾರಗಳು. ಜಿ.ಶಂ. ಪರಮಶಿವಯ್ಯ). ಇಲ್ಲಿ ಸಿಗುವ ವಿವರಗಳ ಪ್ರಕಾರ,"ಈಡಿಗರ ಮಾತಾಳಡಗೌಡ, ಮತ್ತು ಬಲ್ಲೇಗೌಡ ರೆಂಬ ಸಹೋದರರು, ಈಚಲು ವನದಲ್ಲಿ ಕಳ್ಳು ತೆಗೆಯುವ ವೃತ್ತಿಯಲ್ಲಿದ್ದಾರೆ. ಓರಂಗಲ್ಲು ರಾಜ್ಯದ ಓರಗಲ್ಲುರಾಯನ ಅಹಂಕಾರ ಅಡಗಿಸಲು ಮಾತಂಗಿಯೊಂದಿಗೆ ಹೊರಟ ಯಲ್ಲಮ್ಮ ಆ ಸ್ಥಳದಲ್ಲಿ ತಂಗುತ್ತಾಳೆ. ಮಾತಂಗಿ ದಾಹತೀರಿಸಿಕೊಳ್ಳಲು ಚಂದ್ರಗುತ್ತಿವನಕ್ಕೆ ನುಗ್ಗಿ, ಕಳ್ಳು ಕೇಳುತ್ತಾಳೆ. ಇವಳನ್ನು ಕೀಳೆಂದು ತಿಳಿದು ಮಾತಾಳಡಗೌಡ ಓಡಾಡಿಸಿಕೊಂಡು ಹೊಡೆಯುತ್ತಾನೆ. ಬಡವನಾದ ಬಲ್ಲೇಗೌಡನ ಮನೆಗೆ ಹೋಗುತ್ತಾಳೆ. ಅವನು ಆದರದಿಂದ 'ಕಳ್ಳ'ನ್ನು ಕೊಟ್ಟು ಸತ್ಕರಿಸಿದ್ದಕ್ಕೆ ಸಂಪತ್ತನ್ನು ಕರುಣಿಸುತ್ತಾಳೆ." ಇತ್ಯಾದಿ ವಿವರಗಳು ದೊರೆಯುತ್ತವೆ.

ಇಲ್ಲಿ ಓರಂಗಲ್ಲು ರಾಜ, ಚಂದ್ರಗುತ್ತಿವನ, ಈಡಿಗರ ಮಾರ್ಶಾಡಗೌಡ ಉಲ್ಲೇಖಗಳು ದೊರೆಯುವುದರಿಂದ, ಇದು ಮಧ್ಯಕಾಲೀನ ಚರಿತ್ರೆಯ ಸಂದರ್ಭವಾಗಿದೆ. ಚಂದ್ರಗುತ್ತಿ ಇಂದಿನ ಸೊರಬ ತಾಲ್ಲೂಕಿನ ಚಂದ್ರಗುತ್ತಿಯಾಗಿರಲು ಸಾಧ್ಯ. ಮದ್ಯ ಕಾಲೀನ ವೇಳೆಗಾಗಲೇ 'ಕಳ್ಳು', ಮೇಲ್ವರ್ಗದವರ ಆಕರ್ಷಣೆ ಮತ್ತು ಹಿಡಿತದಿಂದ ಸಡಿಲವಾಗುತ್ತಲೇ ದುಡಿವು ವರ್ಗದ ಪ್ರತಿನಿಧಿಯಾದ, ಬಲ್ಲೇಗೌಡ, ಮಾತಂಗಿ ಯವರ ಸಂಬಂಧ ಸೂಚಿಸುವಂತೆ, ದುಡಿವ ವರ್ಗಕ್ಕೆ ಲಭ್ಯವಾಗುವ ಸೂಚನೆಯನ್ನು ಕೊಡುತ್ತದೆ. ಮಾರ್ತಾಣಡ ಗೌಡನು, ಮಾತಂಗಿಯು ಈಚಲು ವನಕ್ಕೆ ಕಾಲಿಟ್ಟಿದ್ದೇ ಅಪವಿತ್ರವಾಯಿತೆಂದು ಆಕೆಯನ್ನು ಹೊಡೆಯುವುದು. ಇದು ಕೆಳವರ್ಗಕ್ಕೆ ಕಳ್ಳು ಅಲಭ್ಯವಾಗಿರುತ್ತೆನ್ನುವುದನ್ನು ಸೂಚಿಸುತ್ತದೆ. ಈಚಿನ ದಿನಗಳಲ್ಲಿ 'ಕಳ್ಳು' ಕೇವಲ ಸಾಮಾಜಿಕ ಮತ್ತು ಆರ್ಥಿಕವಾಗಿ ಕೆಳಮಟ್ಟದಲ್ಲಿರುವವರಿಗೆ ಮಾತ್ರ ಪೂಜ್ಯನೀಯವಾಗಿದೆ. ಮೇಲ್ವರ್ಗದವರಿಗೆ ಅದೊಂದು ಅನಿಷ್ಟವೂ ಕೀಳೂ ಆಗಿದೆ. ಮಾತಂಗಿ ಮತ್ತು ಯಲ್ಲಮ್ಮರು ಇಂದು ಈಡಿಗರು ಮತ್ತು ಮಾದಿಗರಂತಹ ಕೆಳವರ್ಗದವರಿಗೆ ಮಾತ್ರ ಪೂಜ್ಯನೀಯ ಆಗಿದೆ. (ವಿವರಗಳು; ದುರ್ಗಪ್ಪ- ಮಾದಿಗರು, ರತ್ನಮ್ಮ-ಬೋವಿ- ಕಂಚೀಪುರ).

ಬಿಲ್ಲವರ ಚಾರಿತ್ರಿಕ ಮೂಲವನ್ನು ಪುರಾಣಗಳಲ್ಲಿ ಹುಡುಕುವ ಪ್ರಯತ್ನಗಳು ನಡೆದಿವೆಯಾದರೂ ನಿಖರವಾಗಿ ಏನೂ ತಿಳಿಯುವುದಿಲ್ಲ. ಕೋಟಿಚೆನ್ನಯ್ಯರ ಕಥೆ ಅವರ ಸಾಮಾಜಿಕ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತದೆ. ಈ ಕಥೆಯಲ್ಲಿ ಬರುವ ಪಡುಮಲೆ, ಮೂಡಮಲೆ, ಬಲ್ಲಾಳರಾಜರು ಕಾಂತಾಬಾರೆ, ಬುಧಾಬಾರೆ, ಇವೆಲ್ಲ ಐತಿಹಾಸಿಕ, ಸ್ಥಳ ಮತ್ತು ವ್ಯಕ್ತಿಗಳಾಗಿದ್ದಾರೆ. ಬಿಲ್ಲವರ ಆರಾಧ್ಯದೈವಗಳಾದ ಕೋಟಿ ಚೆನ್ನಯ್ಯರ ಮೂಲಕವೇ ತಮ್ಮ ಸಾಮಾಜಿಕ ಸಾಂಸ್ಕೃತಿಕ ಅಸ್ತಿತ್ವವನ್ನು ಗುರ್ತಿಸಿಕೊಳ್ಳಲು ಸಾಧ್ಯವಿದೆ. ಹಾಗು ಇಂದಿಗೂ ಗುರ್ತಿಸಿಕೊಳ್ಳುತ್ತಾರೆ.

ದೀವರ ಚಾರಿತ್ರಿಕ ಹಿನ್ನೆಲೆಯನ್ನು ಗುರ್ತಿಸಲು ಸಾಕಷ್ಟು ಲಿಖಿತ ಉಲ್ಲೇಖಗಳು ಶಾಸನಗಳು ಮತ್ತು ಗ್ರಂಥಗಳಲ್ಲಿ ದೊರಕುತ್ತವೆ. ಇವರೂ ಸಹ ಪುರಾಣ ಮೂಲದಲ್ಲೇ ತಮ್ಮ ಚರಿತ್ರೆಯನ್ನು ಗುರ್ತಿಸಿಕೊಳ್ಳುವ ಪ್ರಯತ್ನ ಪಟ್ಟಿದವಾರೆ. ವೇದ ವ್ಯಾಸರು ದೀವರ ಮೂಲ ಪುರುಷರೆಂದೂ ಹೇಳಿಕೊಂಡಿದ್ದಾರೆ. (ನೋಡಿ ದೀವರ ಮೂಲ ಯಾವುದು? =ಲೇ- ಮದುಗಣಪತಿರಾವ್ ಮಂಡೇನೂರು ಸ್ವರ್ಣ ಸಂಚಿಕೆ-೧೯೯೫) .

ಈ ಬಗ್ಗೆ ಕೆಲವು ಉಲ್ಲೇಖಗಳು ಈ ಕೆಳಗಿನಂತಿವೆ.

೧). ಕರೆಸಿದನು ಧೀವರನಯ್ಯ ನಂಗರಸಿಯಾಗಲಿ ನಿನ್ನ ಮಗಳೆನಲು (ಕು-ವ್ಯಾ ೨-೨೭).

೨). ಹರುಷದಿಂ ತಾನು ಬಸವ ಧೀವರನು ಮಖಿಳ ನಿಯೋಗದೋಲಗವೆರೆಸಿ (ಬಸ.ಪು. ೫-೧೯).

೩). ಪಿಡಿದೊಂದ ಪೆರ್ಬುಲಿಯು ನೋರ್ವಲ ಕಕ್ಷದಿಂದೊತ್ತಿ ತನ್ನ ಗೃಹಕ್ಕೆಳ್ತುದುರುರ್ದನೊಂದೆಡೆಯೊಳುದ್ಯದ್ಧೀವರಂ ಧೀವಂ (ಜಗ.ವಿ. ೧೬-೩೦).

೪). ಮೆಕೆಂಜಿ ಸಂಪುಟ -೩೬ರಲ್ಲಿ- ಹಳೆಪೈಕದ ಜಾತಿರಿವಾಜು ಕೈಫಿಯತ್ತು ದೊರಕಿದೆ. ಇದು ಇವರ ಜಾತಿ ಮತ್ತು ಕುಟುಂಬ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲುತ್ತದೆ. (ನೋಡಿ ಕರ್ನಾಟಕದ ಕೈಫಿಯತ್ತುಗಳು-ಪು-೬೦೪ ಎಂ.ಎಂ.ಕಲ್ಬುರ್ಗಿ) ೪ ಶಿವಮೊಗ್ಗ ತಾ॥ ಬಸವನ ಗಂಗೂರು ಶಾಸನ ಸಂಖ್ಯೆ-೫ರಲ್ಲಿ ದೀವರ ಉಲ್ಲೇಖ ಬರುತ್ತದೆ. ಉದಾ: ... ದೇಂತಾಂಕರೆ ದೀವಂ ಮಧುಸೂಧನಂ ಸೊಗಯಿಪಂ ಭೂಲೋಕ ಕಲ್ಪಧ್ರುಮಂ.

ಮೇಲಿನ ಕಾವ್ಯಗಳ ಮತ್ತು ಶಾಸನಗಳ ಉಲ್ಲೇಖಗಳಿಂದ ತಿಳಿವುದಿಷ್ಟೇ " ಮಧ್ಯಕಾಲೀನ ಸಂದರ್ಭದ್ದಲಿ ದೀವರಲ್ಲಿ ಕೆಲವರು ರಾಜಕೃಪೆಗೆ ಒಳಗಾಗಿದ್ದರು. ಸಾಮಾಜಿಕ ವಾಗಿ ಅವರಿಗೂ ಸ್ಥಾನಮಾನಗಳು ಲಭ್ಯವಾಗಿದ್ದವು ಎನ್ನುವುದು". ಇಷ್ಟಲ್ಲದೆ ರಾಷ್ಟ್ರಕೂಟ ಕನ್ನರನ ಕಾಲದ ಶಾಸನವೊಂದರಲ್ಲಿ ದೀವರು ಮೀನು ಹಿಡಿದು ಸೇವಿಸುತ್ತಿದ್ದರು ಎನ್ನುವುದು ತಿಳಿಯುತ್ತದೆ. ಕೆಳದಿ ಸಂಸ್ಥಾನದಲ್ಲಿ ಇವರಲ್ಲಿ ಹೆಚ್ಚು ಸಂಖ್ಯೆ ವಿದ್ಯಾವಂತರಾಗಿದ್ದರೆಂಬುದಕ್ಕೂ ವಿವರಗಳು ದೊರಕುತ್ತವೆ. (ನೋಡಿ, ಸ್ವರ್ಣಸಂಚಿಕೆ. ಈಡಿಗ'- ೧೯೫).

## ೨.೧ ಕೌಟುಂಬಿಕ ನೆಲೆಗಳು

ಈಡಿಗರದ್ದು ಪಿತೃಪ್ರಧಾನ ಕುಟುಂಬ ವ್ಯವಸ್ಥೆ. ತಂದೆಯೇ ಮನೆಗೆ ಯಜಮಾನ, ತಾಯಿ ಮನೆಯವರ ಗೌರವಕ್ಕೆ ಪಾತ್ರವಾಗಿರುತ್ತಾಳೆ. ಮಕ್ಕಳಿಗೆ ತಾಯಿಯಾಗಿ ಸೊಸೆಯರಿಗೆ ಅತ್ತೆಯಾಗಿ ಮೊಮ್ಮಕ್ಕಳಿಗೆ ಅಜ್ಜಿಯಾಗಿ ಮನೆಯ ಒಳವ್ಯವಸ್ಥೆಯಲ್ಲಿ ಪ್ರಮುಖಳಾಗಿರುತ್ತಾಳೆ. ಮನೆಯ ಆರ್ಥಿಕ ವ್ಯವಸ್ಥೆ ತಂದೆಯ ಹಿಡಿತದಲ್ಲಿರುತ್ತದೆ. ತಂದೆಯ ನಂತರ ಮನೆಯ ಹಿರಿಯ ಮಗ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಾನೆ. ಈಚೆಗೆ ವಿಭಕ್ತ ಕುಟುಂಬಗಳಾಗಿ ಒಡೆಯುತ್ತಿದ್ದು ಈ ವ್ಯವಸ್ಥೆ ಸಡಿಲವಾಗುತ್ತಿದೆ.

ಬಿಲ್ಲವರದ್ದು ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ .' ಅಳಿಯ ಸಂತಾನ ವ್ಯವಸ್ಥೆ,ಇಲ್ಲಿಯ ಬಿಲ್ಲವ ,ಬಂಟರ ಪದ್ಧತಿಯಾಗಿದೆ. ಆರ್ಥಿಕ ವ್ಯವಹಾರಗಳೆಲ್ಲ ಮನೆಯ ಯಜಮಾನನಾದ ತಂದೆಯ ಹಿಡಿತದಲ್ಲಿ ಇವೆ. ವಿಭಕ್ತ ಕುಟುಂಬದ ಅವಸ್ಥೆಯಲ್ಲಿ ಪುರುಷನದೇ ಪ್ರಮುಖ ಪಾತ್ರ. ಈಚಿನ ಆಧುನಿಕ ಶಿಕ್ಷಣ ಕ್ರಮ ಸ್ತ್ರೀಯರನ್ನು ಪ್ರಮುಖ ಪಾತ್ರವಹಿಸಲು ಪ್ರಚೋದಿಸುತ್ತಿದೆ. ದೀವರು ಸಹ ಮಾತೃಪ್ರಧಾನ ಕುಟುಂಬ ಪದ್ಧತಿಯನ್ನು ಅನುಸರಿಸಿಕೊಂಡು ಬಂದವರಾಗಿದ್ದಾರೆ. ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಯ ದೀವರುಗಳಲ್ಲಿ ಹೆಚ್ಚಿನ ವ್ಯತ್ಯಾಸಗಳಿದ್ದಂತೆ ಕಾಣುವುದಿಲ್ಲ.

ಜಾತಿವ್ಯವಸ್ಥೆಯೊಳಗಡೆ (ಒಳವ್ಯವಸ್ಥೆ) ಈಡಿಗರೆಂದು ಗುರ್ತಿಸುವ ಈ ಸಮುದಾಯದಲ್ಲಿ ಅನೇಕ ಒಳ ವಿಂಗಡಣೆಗಳಿವೆ.ಇವರದ್ದು ಪಿತೃಪ್ರಧಾನ ಕುಟುಂಬ ಪದ್ಧತಿ. ೧). ಮೊದಲನೆಯದಾಗಿ, 'ಬೆಲ್ಲದ ಈಡಿಗರು,' 'ಮಡ್ಡಿ ಈಡಿಗರು'. ಎಂಬ ಭಿನ್ನತೆಯಿದೆ. ಬೆಲ್ಲದ ಈಡಿಗರು 'ಕಳ್ಳನ್ನು ಬೆಲ್ಲವಾಗಿ ಪರಿವರ್ತಿಸಿಮಾರುತ್ತಿದ್ದವರು. ಈ ವೃತ್ತಿಯ ಕಾರಣಕ್ಕೆ ಇವರನ್ನು ಬೆಲ್ಲದ ಈಡಿಗರು ಎಂದು ಕರೆಯಲಾಗುತ್ತಿದೆ. ಮಡ್ಡಿ ಈಡಿಗರು ಕಳ್ಳನ್ನು ಮಾರಾಟ ಮಾಡುತ್ತಾರೆ, ಮತ್ತು ಇವರಿಗೆ ಕಳ್ಳು ಸೇವನೆ ನಿಷೇಧವಿದೆ. ಬೆಲ್ಲದ ಈಡಿಗರಿಗೆ ನಿಷೇಧವಿಲ್ಲ. "ಮೂಲತಃ ಇವರಿಬ್ಬರೂ ಅಣ್ಣತಮ್ಮರಾಗಿದ್ದು ಅವರವರ ವೃತ್ತಿಯ ಮೇಲೆ ಈ ಬೇಧ ಉಂಟಾಯಿತೆಂದು ಹೇಳುತ್ತಾರೆ. ಹಿಂದೆ ಈ ಎರಡೂ ಗುಂಪಿನ ನಡುವೆ-ವಿವಾಹ ಸಂಬಂಧಗಳಿರಲಿಲ್ಲ. ಮಡ್ಡಿ ಈಡಿಗರು ತಾವು ಶ್ರೇಷ್ಠರೆಂದುಕೊಂಡು ಬೆಲ್ಲದವರಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಕಾರಣ ಕೇಳಿದರೆ,"ಕಳ್ಳುಸೇವನೆ ನಮಗೆ ಈಶ್ವರನಿಂದಲೇ ನಿಷೇಧ. ಅದನ್ನು ಸೇವಿಸಿದ್ದರಿಂದ ಅವರು ಅನಾಚಾರಿಗಳಾದರು" ಎನ್ನುತ್ತಾರೆ. ಬಹುಶಃ ಇದು ಅಣ್ಣತಮ್ಮರಲ್ಲಿ ನಡೆದ ಆಚರಣೆ ಮತ್ತು ವೃತ್ತಿ ಬೇಧದಿಂದ ಉಂಟಾದ ಮನಸ್ತಾಪವಿರಬೇಕು. ಈಚೆಗೆ ಎರಡೂ ಗುಂಪಿನ ನಡುವೆ ಯಾವುದೇ ವ್ಯತ್ಯಾಸಗಳನ್ನು ಉಳಿಸಿಕೊಳ್ಳಲಾಗುತ್ತಿಲ್ಲ. ಎಲ್ಲ ವಿಧದ ಸಂಬಂಧಗಳೂ ಸಾಧ್ಯವಾಗುತ್ತಿವೆ.

"ಮಡ್ಡಿ ಈಡಿಗರು ಅಥವಾ ಸಾಚಾ ಈಡಿಗರಲ್ಲೂ ಏಳುಮನೆಯವರು ಮೂವತ್ತು ಮನೆಯವರು ಅರವತ್ತು ಮನೆಯವರು ಎಂಬ ವಿಭಾಗಗಳಿವೆ. ಈ ವ್ಯವಸ್ಥೆ ದೀವರು ಮತ್ತು ಬಿಲ್ಲವರಲ್ಲಿರುವ ಬಳಿ ವ್ಯವಸ್ಥೆಯಂತೆಯೇ ಇದ್ದುವಿವಾಹ ಸಂಬಂಧವನ್ನು ಏರ್ಪಡಿಸಿಕೊಳ್ಳುವ ಕಾರಣಕ್ಕಾಗಿ ರೂಪಗೊಂಡಿರಲು ಸಾಧ್ಯವಿದೆ.'ಸಾಸಿಮೆ'ಯವರು 'ಬಡ್ಡಿ'ಯವರು ಎಂಬ ಎರಡು ಪ್ರಮುಖ ವಿಭಾಗಗಳಿವೆ. ಬಹುಶಃ ಇವುಗಳು ಸಹ ವಿವಾಹ ಸಂಬಂಧಗಳು ಏರ್ಪಡಲು ಮಾಡಿಕೊಂಡ ವಿಭಾಗಗಳು. ದೀವರು ಮತ್ತು ಬಿಲ್ಲವರ ಒಳಪದ್ಧತಿಗಳು

ಜಟಿಲವಾಗಿದ್ದು, ಈ ವಿಭಾಗಗಳು ಸರಳವೂ ಅನುಕೂಲಕರವೂ ಆಗಿದೆ. ಸಾಸಿಮೆ ಮತ್ತು 'ಬಡ್ಡಿ' ಎಂಬ ವಿಭಾಗಗಳು ಗೋತ್ರಗಳನ್ನು ಆಧರಿಸಿ ರಚನೆಯಾಗಿವೆ. ವಾತ್ಸಲ್ಯ ಗೋತ್ರದವರು ಸಾಸಿಮೆ (ಸಾಸ್ಮೆಯವರಾಗಿಯೂ ರೂಪುಗೊಂಡಿದ್ದಾರೆ. ) ಈವ್ಯವಸ್ಥೆಯು ಒಂದೇ ಬುಡಕಟ್ಟಿನವರು ಅಥವ ರಕ್ತಸಂಬಂಧದವರು ಅದೇಗುಂಪಿನೊಡನೆ ವಿವಾಹ ಸಂಬಂಧವೇರ್ಪಡದಂತೆ ತಡೆಯುತ್ತದೆ. ಸಾಸ್ಮೆಯವರು ಮತ್ತು ಬಡ್ಡಿಯವರ ಪರಸ್ಪರ ಕೊಟ್ಟು ತರುವ ವ್ಯವಸ್ಥೆಯಿದೆ. ಅದೇ ಗುಂಪಿನಲ್ಲಿ ವಿವಾಹ ಏರ್ಪಡುವುದಿಲ್ಲ. ಈವ್ಯವಸ್ಥೆ ಉತ್ತಮ ಕ್ರಮವೂ ಆಗಿದೆ. ಇಂತಹುದೇ ಉದ್ದೇಶಕ್ಕಾಗಿ ಬಿಲ್ಲವ, ದೀವರುಗಳಲ್ಲಿ ಮತ್ತು ನಾಮಧಾರಿಗಳಲ್ಲಿ 'ಬಳ್ಳಿ' ಅಥವಾ 'ಬಿಳಿ' ಪದ್ಧತಿಗಳು (೧ ನಿರೂಪಕ; ದೊಡ್ಡಗಂಗಪ್ಪ, ಕಗ್ಗಲಕಟ್ಟೆಗ್ರಾಮ-ಈಡಿಗರು ೧೦೪ ವರ್ಷ ಹೊಸದುರ್ಗ ತಾ||). ಹುಟ್ಟಿಕೊಂಡಿವೆ. ಬಿಲ್ಲವರು, ನಾಮಧಾರಿಗಳು, ಮತ್ತು ದೀವರುಗಳದ್ದು ಮಾತೃಪ್ರಧಾನ ಕುಟುಂಬಪದ್ಧತಿ ಅಸ್ತಿತ್ವದಲ್ಲಿದೆ. ವಂಶದಕುಡಿಯನ್ನು ಬಳ್ಳಿಯಿಂದ ಗುರ್ತಿಸುತ್ತಾರೆ. ಈಪದ್ಧತಿ ತಾಯಿಯಿಂದ ಮುಂದುವರೆಯುತ್ತದೆ. ಬಿಲ್ಲವರು, ದೀವರು, ನಾಮಧಾರಿಗಳಲ್ಲಿ ಅನೇಕ ಬಳ್ಳಿಗಳಿದ್ದು ಕೆಲವೊಂದು ಬಳ್ಳಿಗಳ ಹೆಸರು ಒಂದೇ ಆಗಿದೆ.

ಉದಾ: ನಾಮಧಾರಿಗಳಲ್ಲಿ ಹೊನ್ನಿ, ಕೆಂದಿ, ಕೌನ, ಕಡವೆ, ನಾಗ, ತೊಳರ ಇತ್ಯಾದಿ ದೀವರಲ್ಲಿ. ಗಂಗಾಬಳ್ಳಿ, ಹೊಯ್ಸಳನಬಳ್ಳಿ, ಮಲ್ಲುಬಳ್ಳಿ, ಶೆಟ್ಟಿಬಳ್ಳಿ, ಕೂರಿಗೆ ಬಳ್ಳಿ, ಹೊನ್ನಬಳ್ಳಿ, ಹಾಲಬಳ್ಳಿ, ಶೀವನ ಬಳ್ಳಿ, ಮೊದಲಾದ ೧೬ ತರಹದ ಬಳ್ಳಿಗಳಿವೆ. ಹೀಗೆಯೇ ಬಿಲ್ಲವರಲ್ಲಿ ಈ ಬಳ್ಳಿ ಪದ್ಧತಿಯೇ ಮುಂದುವರೆದಿದೆ. ಬಿಲ್ಲವರು ತಾಯಿಗೆ ನಿಷ್ಠರಾಗಿ ನಡೆದುಕೊಳ್ಳುತ್ತಾರೆ. ದೇವತೆಗೆ ಸಂಬಂಧಿಸಿದ ಬಂಡಿ ಹಬ್ಬವನ್ನು ಆಚರಿಸುತ್ತಾರೆ. ದೇವಿಯ ಬಂಟರಿಗೆ ಕೋಳಿ ಕುರಿಗಳನ್ನು ಬಲಿಕೊಟ್ಟು ತಮ್ಮ ದೈವಭಕ್ತಿಯನ್ನು ವ್ಯಕ್ತಪಡಿಸುತ್ತಾರೆ. ಕೊಡಗಿನ ಮಲೆಕುಡಿಯರಲ್ಲಿ ಮೊದಲು ಬಳ್ಳಿಪದ್ಧತಿ ಇದ್ದು ಈಗ ಅದು ಇಲ್ಲವಾಗಿದೆ. ಇದು ವಿವಾಹ ಸಂಬಂಧಕ್ಕೆ ಅಡಚಣೆಯಾಗಿ ಕಾಡಿದ್ದುದ್ದರಿಂದ ಹೀಗಾಗಿರಬೇಕು.

## ೨). ಆಹಾರಪದ್ಧತಿ , ಪಾನೀಯ: ಇತ್ಯಾದಿ

ಬಯಲು ಸೀಮೆಯ ಈಡಿಗರು ಮಾಂಸಹಾರಿಗಳು ಕುರಿ, ಕೋಳಿ, ಆಡು, ಮೀನು, ಮೊಲ, ಇತ್ಯಾದಿಗಳು ಇವರಿಗೆ ಪ್ರಿಯವಾದ ಆಹಾರ. ಸೇಂದಿಯ ಪಾನ ಇವರಿಗೆ ನಿಷೇಧ. (ಮದ್ಯಪಾನ ಸಂಪೂರ್ಣ ನಿಷೇಧವಿದೆಯೆಂದು ಕೆಲವು ಹಿರಿಯರ ನಂಬಿಕೆ ಆದರೆ ಬೆಲ್ಲದ ಈಡಿಗರು ಹೆಂಡವನ್ನೂ ಇತರೆ ಈಡಿಗರು

ಸಾರಾಯಿ-ಮೊದಲಾದ ಮಧ್ಯವನ್ನು ಸೇವಿಸುತ್ತಾರೆ. ಅಂತೆಯೇ ಸಸ್ಯಾಹಾರವೂ ಇವರಿಗೆ ಪ್ರಿಯವೇ. ಉಡುಗೆ ತೊಡುಗೆಯ ವಿಷಯಕ್ಕೆ ಬಂದರೆ ಹೆಂಗಸರು ಕುಪ್ಪಸ ತೊಡುತ್ತಿರಲಿಲ್ಲವಂತೆ. ಮತ್ತು ೧೦ರಿಂದ ೩೦ ವರ್ಷದೊಳಗಿನ ಹೆಂಗಸರು ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಗಂಡಸರು ಚಡ್ಡಿ ಪೇಟ, ಉಪಯೋಗಿಸುತ್ತಾರೆ. ಆದರೆ ಇಂದಿನ ಉಡುಗೆಗಳಲ್ಲಿ ಇತರರಿಗಿಂತ ಯಾವ ವ್ಯತ್ಯಾಸವಿದ್ದಂತೆ ಕಾಣುವುದಿಲ್ಲ. ಬಿಲ್ಲವರಲ್ಲೂ ಸಹ ಈ ಬಗೆಯ ಉಡುಪುಗಳೇ ಕಾಣುತ್ತವೆ.

ಬಿಲ್ಲವರು ದೀವರು, ನಾಮಧಾರಿಗಳು (ಹಳೆಪೈಕರು) ಸಹ ಮಾಂಸಹಾರಿಗಳೇ ಆಗಿದ್ದು ಆಹಾರ ಪದ್ಧತಿಯಲ್ಲಿ ವೆತ್ಯಾಸ ಕಾಣಿಸದು. ಆದರೆ ಕಳ್ಳು ಸೇವನೆಗೆ ಇವರಲ್ಲಿ ನಿಷೇಧವೇನೂ ಇಲ್ಲ. ಕುಸುಬಲಹಕ್ಕಿ ಗಂಜಿ,ಮೀನು ಬಿಲ್ಲವರ ಪ್ರಮುಖ ಆಹಾರ. ಮನೆಗಳನ್ನು ಕಟ್ಟಿಕೊಳ್ಳುವ ವಿಚಾರದಲ್ಲಿ, ಹಿಂದೆ ಈಚ 'ಲು ವನದಲ್ಲಿ ಗುಡಿಸಲುಗಳನ್ನು ಭದ್ರವಾಗಿ ಹಾಕಿಕೊಳ್ಳುತ್ತಿದ್ದರು. ಮನೆಯ ಮುಂದೆ ಬೇಲಿಯಿದ್ದು, ಸೇಂದಿ ಸರಬರಾಜು ಮಾಡುವ 'ಬಾನಿ', ಇರುತ್ತಿತ್ತು. ಸೇಂದಿ ಸಾಗಿಸುವ ಕತ್ತೆ ಹೋರಿಗಳನ್ನು ಕಟ್ಟಿರುತ್ತಿದ್ದರು. ಊರುಗಳಲ್ಲಿ ಕೆಲವೇ ಶ್ರೀಮಂತರು ಇತರರಂತೆಯೇ ಮನೆಗಳನ್ನು ನಿರ್ಮಿಸಿಕೊಂಡು ಜೀವನ ನಡೆಸುತ್ತಿದ್ದರು.

೩. ಜೀವನಾವರ್ತದ ಆಚರಣೆಗಳು

೧). ಹುಟ್ಟು:- ಮಗು ಹುಟ್ಟಿದ ಐದು ಅಥವಾ ಏಳು ದಿನಗಳವರೆವಿಗೂ ಸೂತಕವಿರುತ್ತದೆ. ಬಿಲ್ಲವರಲ್ಲಿ ೧೧ ದಿನಗಳ ಸೂತಕವಿದೆ. ಮಗುವಿಗೆ ಕೆಲವು ಚಿಕಿತ್ಸಾ ಕ್ರಮಗಳನ್ನು ಮಾಡುತ್ತಾರೆ. ಉದಾ: ಕಾದ ಸೂಜಿಯಿಂದ ಸುಡುವುದು ಇತ್ಯಾದಿ. ಈಡಿಗರಲ್ಲಿ ನಾಮಕರಣವನ್ನು ಮಗು ಹುಟ್ಟಿದ ಮೂರು ಅಥವಾ ಐದನೇತಿಂಗಳಲ್ಲಿ ಇಟ್ಟುಕೊಳ್ಳುತ್ತಾರೆ. ಮಗುವಿನ ಸೋದರಮಾವ, ಅಥವಾ ಸೋದರತ್ತೆಯವರು ಹೆಸರನ್ನು ಇಡುತ್ತಾರೆ. ಬಿಲ್ಲವರಲ್ಲಿ ಅಂತಹ ಶಾಸ್ತ್ರವೇನೂ ಇಲ್ಲ. ಹುಟ್ಟಿದಾಗಿನೇ ದಿನವೇ ಹೆಸರನ್ನಿಡುತ್ತಾರೆ. 'ಅಜ್ಜ' ಅಥವಾ 'ವಾರದ' ಹೆಸರನ್ನು ಹೆಚ್ಚಾಗಿ ಇಡುವ ಪದ್ಧತಿ ಇದೆ.( ವಿವರಕ್ಕೆ ಕೋಟದವರು ಡಾ॥ ಪಾ.ನ.ಮಯ್ಯ ೧೯೯೫ ನ್ನು ನೋಡಿ). ಬಾಣಂತಿಗೆ ಏಳನೇ ದಿನ ಸ್ನಾನ ಮಾಡಿಸಿ ಸೂತಕ ತೆಗೆದು ಕೊಳ್ಳುತ್ತಾರೆ. ಮನೆದೇವರ ಇಲ್ಲವೆ ಸತ್ತ ಹಿರಿಯರ ಹೆಸರುಗಳನ್ನು ಮಾಗುವಿಗೆ ಇಡುತ್ತಾರೆ. (ಇಂದು ಸಂಪೂರ್ಣ ನಗರಗಳಲ್ಲಿ ಬದಲಾಗುತ್ತಿದೆ). ಯಮನಿಗೆ ವಂಚಿಸಲು ಉದ್ದೇಶಿಸಿ ಮಗುವಿಗೆ ಕೊಳಕಾದ ಹೆಸರನ್ನು ಇಡುವ ರೂಢಿಯಿದೆ. ಓಬಳಿಗ, ಆಂಜನಿಗೆ, ಧಾನಿಗ, ಮೊದಲಾದ ಹೆಸರುಗಳನ್ನು ಇಡುತ್ತಾರೆ. ದಾಸಯ್ಯ ಇಂತಹ ಕೆಲಸಗಳಿಗೆ ಪೂಜ್ಯವ್ಯಕ್ತಿಯಾಗಿ

ಭಾಗವಹಿಸುತ್ತಾನೆ.

೨). ಋತುಮತಿಯಾದ ಸಂದರ್ಭ:- ಹೆಣ್ಣು ಪ್ರಾಯಕ್ಕೆ ಬಂದ ಸಂದರ್ಭದಲ್ಲಿ ಸೋದರ ಮಾವನಿಂದ ಹಸಿರು ಗುಡಿಸಲು ಹಾಕಿಸುತ್ತಾರೆ. ನಾಲ್ಕುದಿನ ಪ್ರತಿಸಂಜೆ ಐದು ಜನ ಮುತ್ತೈದೆಯರು ಗುಂಪುಸೇರಿ ಪ್ರದರ್ಶಿಸುತ್ತಾರೆ. ಹುಡುಗಿಗೆ ಹಾಲು ಬಾಳೆಹಣ್ಣು ಕೊಬ್ಬರಿ ಸಕ್ಕರೆ ಮುಂತಾದವುಗಳನ್ನು ತಿನ್ನಲು ಕೊಡುತ್ತಾರೆ. ಐದನೇದಿನ ಗುಡಿಸಲು ಪೂಜೆ ಮಾಡಿ ಅದನ್ನು ದೂರ ಬಿಸಾಡುತ್ತಾರೆ. ಬ್ರಾಹ್ಮಣ ಪುರೋಹಿತರು ಮನೆಯನ್ನು ಶುದ್ಧಿಮಾಡುತ್ತಾರೆ. ಹನ್ನೆರಡನೇ ದಿನ ಒಸಗೆ ಶಾಸ್ತ್ರಮಾಡುತ್ತಾರೆ. ಹುಡುಗಿಗೆ ಮೊದಲೇ ವಿವಾಹವಾಗಿದ್ದರೆ. ಹದಿನಾರು ದಿನದೊಳಗೆ 'ಪ್ರಸ್ಥ' ಶಾಸ್ತ್ರವನ್ನು ಮುಗಿಸಿಬಿಡುತ್ತಾರೆ. 'ಬಲಿ' ಶಾಸ್ತ್ರವೂ ಅಸ್ತಿತ್ವದಲ್ಲಿದೆ. ಕುರಿಯನ್ನು ಹುಡುಗಿಯ ಮುಂದೆ ಬಲಿಕೊಟ್ಟು-ಬಂಧುಗಳಿಗೆ ಸಮಾರಾಧನೆ ಮಾಡುತ್ತಾರೆ. ಮುತ್ತೈದೆಯರಿಗೆ ಬಾಗಿನ ಕೊಡುವ ಶಾಸ್ತ್ರವಿದೆ.

ಬಿಲ್ಲವರಲ್ಲಿ ಮೈನೆರೆಯುವುದನ್ನು 'ತಲೆನೀರ್ ಮದಿ' ಎಂದು ಕರೆಯುತ್ತಾರೆ. ಮದುವೆಗೆ ಮೊದಲು ಮೈನೆರೆದರೆ ಅಶುಭವೆನ್ನುವ ನಂಬಿಕೆ ದಕ್ಷಿಣಕನ್ನಡದಲ್ಲಿ ಬಿಲ್ಲವರೂ ಸೇರಿದಂತೆ ಇತರೆ ಜನರಿಗೂ ಇತ್ತು. ಹಿಂದೆ ಬಾಲ್ಯವಿವಾಹವಿತ್ತು. ಈಗ ಇಲ್ಲ. ಒಸಗೆ ಪದ್ಧತಿ ಇಲ್ಲಿಯೂ ಇದೆ. ಐದನೇ ದಿನವನ್ನು 'ತಲೆನೀರ್ ಮದಿ' ದಿನವೆಂದು ಕರೆಯುತ್ತಾರೆ. ಈಸಂದರ್ಭದ್ಲಲಿ ಮಡಿವಾಳನಿಗೆ ಹೆಣ್ಣಿನ ಬಟ್ಟೆಯನ್ನು ಕೊಡುವ ಶಾಸ್ತ್ರವಿದೆ. ಒಸಗೆಯಲ್ಲೂ ಉಡುಗೋರೆ ನೀಡುವ ಪದ್ಧತಿಯಿದೆ. 'ಗುರಿಕಾರ'ನ ಪಾತ್ರ ಈ ಸಂದರ್ಭದಲ್ಲಿಯೂ ಇರುತ್ತದೆ.

(ವಿವರಕ್ಕೆ ನೋಡಿ. "ಕೋಟದವರು. ಪಾ.ನ. ಮಯ್ಯ. ೧೯೯೫)

## ಮದುವೆ ಸಂಪ್ರದಾಯಗಳು

ಈಡಿಗರಲ್ಲಿ ಹಿಂದೆ ಬಹುಪತ್ನಿತ್ವ ಇತ್ತು. ತಮ್ಮ ಕೆಲಸ ಮತ್ತು ವ್ಯಾಪಾರಕ್ಕೆ ಅನುಕೂಲವಾಗಲೆಂದೋ ಅಥವಾ ಮೊದಲನೇ ಮಕ್ಕಳಿಲ್ಲದಿದ್ದರೆ ಅಥವಾ ಅಂಗವಿಕಲರಾಗುತ್ತರೆಂದೋ ನಂಬಿ ಬಹು ಪತ್ನಿತ್ವವನ್ನು ರೂಢಿಸಿಕೊಂಡಿದ್ದರೆಂದು ತಿಳಿದುಬರುತ್ತದೆ. ಬಾಲ್ಯವಿವಾಹವೂ ರೂಢಿಯಲ್ಲಿತ್ತು ಇಂದು ಕಡಿಮೆಯಾಗಿದೆ. (ವಿವರಕ್ಕೆ ನೋಡಿ. ಈಡಿಗರ ಜನಾಂಗದ ಚರಿತ್ರೆ. ಇ. ಹನುಮಂತಯ್ಯ-೧೯೭೭).

ಮದುವೆಯಲ್ಲಿ ಪರಸ್ಪರ ಹೆಣ್ಣು ಗಂಡುಗಳನ್ನು ಕೊಟ್ಟು ತರುವ ಪದ್ಧತಿ ಜಾರಿಯಲ್ಲಿದೆ. ಹೀಗೆ ಮಾಡುವಾಗ 'ತೆರೆದ' ಪ್ರಸ್ತಾಪವಿರುತ್ತಿರಲಿಲ್ಲ. ಅಕ್ಕ ತಂಗಿಯರನ್ನು ಒಬ್ಬನೇಗಂಡು ಮದುವೆಯಾಗಬಹುದಿತ್ತು. ಮತ್ತು ಅಣ್ಣ ತಮ್ಮಂದಿರು ಒಂದೆ ಮನೆಯ ಅಕ್ಕ ತಂಗಿಯರನ್ನು ಮದುವೆಯಾಗಬಹುದಿತ್ತು. ಒಂದೇ ಗೋತ್ರಕ್ಕೆ ಸೇರಿದವರನ್ನು ಮದುವೆಯಾಗುವಂತಿಲ್ಲ.

ವಧುದಕ್ಷಿಣೆ ಪದ್ಧತಿ ಜಾರಿಯಲ್ಲಿತ್ತು. ಮೊದಲು ೧೫-೩೦ರೂಗಳ ತೆರವಿತ್ತು. ಹೆಚ್ಚು ತೆರೆ ಕೊಟ್ಟಷ್ಟು ಬೇಗ ಗಂಡಿನ ಕಡೆಯವರು ಹುಡುಗಿಯನ್ನು ತಮ್ಮ ಮನೆಗೆ ಕರೆದು ಕೊಂಡುಹೋಗಲು ಅವಕಾಶವಿತ್ತು.

ಆಚರಣೆಗಳು: ಗಂಡು -ಹೆಣ್ಣಿನ ಸಂಬಂಧಕ್ಕೆ ದೇವರಲ್ಲಿ ಕೇಳಿಸುತ್ತಿದ್ದರು. ವೀಳ್ಯ ಶಾಸ್ತ್ರದ ಮುಖಾಂತರ ಒಪ್ಪಂದವಾಗುತ್ತಿತ್ತು. ಆ ಗಂಡು ಹೆಣ್ಣಿನ ತಂದೆಯವರು ವೀಳ್ಯ ವಿನಿಮಯ ಮಾಡಿಕೊಂಡು ಒಪ್ಪಂದ ಕಾರ್ಯಮುಗಿಸುತ್ತಿದ್ದರು. ನಂತರ ಬಂಧುಗಳಿಗೆ ಸಮಾರಾಧನೆಯ ಕಾರ್ಯಕ್ರಮವಿರುತ್ತಿತ್ತು.

ಮದುವೆಯ ಕಾರ್ಯಗಳಿಗೆ ಮೊದಲು "ಕಾಟವೇಶ್ವರ ಪೂಜೆ' ನಡೆಯುತ್ತಿತು. (ಆಂಧ್ರ ಮೂಲದ ಬಯಲು ಸೀಮೆ ಈಡಿಗರಲ್ಲಿ ಈ ಆಚರಣೆ ಜಾರಿಯಲ್ಲಿತ್ತು) ಪೂಜೆಯ ನಂತರ ಕರಿ ಬಣ್ಣದ ಕುರಿ ಕಡಿದು ಊಟೋಪಚಾರ ಮಾಡುತ್ತಿದ್ದರು. ಗುರಪ್ಪನಿಗೆ 'ಹಾಲುಹುಕ್ಕಿಸುವ' ಶಾಸ್ತ್ರವಿದೆ. ಮದುವೆಯ ಎಲ್ಲಾ ಮುಖ್ಯಕಾರ್ಯಗಳು (ಉದಾ: ಮೂಹೂರ್ತ ಇತ್ಯಾದಿ) ಗಂಡಿನ ಮನೆಯಲ್ಲೆ ನಡೆಯುತ್ತಿದ್ದವು. ಹುತ್ತದ ಪೂಜೆ, ಹನ್ನೆರಡು ಕಂಬದ ಚಪ್ಪರ ಪೂಜೆ, ಕಳ್ಳಿಪೂಜೆ, ಅರಿಶಿನಶಾಸ್ತ್ರ ಮೊದಲಾದವುಗಳು ಮೂಹೂರ್ತಕ್ಕೆ ಪೂರ್ವಭಾವಿಯಾಗಿ ಗಂಡಿನ ಮನೆಯಲ್ಲಿ ಜರುಗುತ್ತಿದ್ದವು. ಹರಿವಾಣ ಪೂಜೆ, ಬೀರುಗುಡಿಶಾಸ್ತ್ರ ಮಲನೀರು ಸ್ನಾನ, ಗಂಡಿನ ಮೆರವಣಿಗೆ, ಇವುಗಳು ಮೂಹೂರ್ತದ ಪೂರ್ವದಲ್ಲಿ ಜರುಗುವ ಪ್ರಮುಖ ಆಚರಣೆಗಳು. (ವಿವರಗಳಿಗೆ ನೋಡಿ. ಈಡಿಗ ಜನಾಂಗದ ಚರಿತ್ರೆ- ಇ. ಹನುಮಂತಯ್ಯ-೧೯೭೯) ಬಾಸಿಂಗ ಶಾಸ್ತ್ರ ಬೀರಕ್ಕೆ ಶಾಸ್ತ್ರಗಳ ನಂತರ ಧಾರೆಮೂಹೂರ್ತ ನಡೆಯುತ್ತದೆ. ಊರಗೌಡ, ಯಜಮಾನ, ಶಾನುಭೋಗ, ಪಟೇಲರ, ಸಮ್ಮುಖದಲ್ಲಿ ಧಾರೆಮೂಹೂರ್ತ ನಡೆಯುತ್ತದೆ. (ಈಕ್ರಮ ಇತರೆ ಜನರಲ್ಲಿ ನಡೆದಂತೆಯೇ ನಡೆಯುತ್ತದೆ.)

ಮೂಹೂರ್ತದ ನಂತರ 'ಬುವ್ವ' ಕೊಡುವ ಶಾಸ್ತ್ರವಿದೆ. 'ಪತಿಪತ್ನಿ'ಯರು ಜೊತೆಯಲ್ಲಿ ಬುವ್ವ ತಿಂದನಂತರ ಆದಿನ ಸಂಜೆ ಅರುಂಧತಿ ನಕ್ಷತ್ರವನ್ನು ತೋರಿಸುತ್ತಾರೆ. ನಾಗವಲ್ಲಿ ದಿವಸ ದಂಪತಿಗಳಿಗೆ ಉಂಗುರ

ಹುಡುಕುವ ಶಾಸ್ತ್ರವನ್ನು ಏರ್ಪಡಿಸುತ್ತಾರೆ."ಒಡವೆ ಯಾರಿಗೆ ಸಿಗುತ್ತದೋ ಅವರಿಗೆ ಸಂಸಾರದಜವಾಬ್ದಾರಿ," ಎನ್ನುವ ಅರ್ಥಸಲ್ಲಿ ಈ ಆಚರಣೆ ಇದೆ. ನಂತರ ಗಂಗಾಪೂಜೆ ನಡೆಯುತ್ತದೆ. ಮರುದಿನ ದಂಪತಿಗಳು ಹೆಣ್ಣಿನ ಮನೆಗೆ ಹೊರಡುತ್ತಾರೆ. ಈಗ ಗಂಡಿನಮನೆಯಲ್ಲಿ ನಡೆಯುತ್ತಿರುವ "ಬೀಗರೂಟ" ಎನ್ನುವ ಸಂಪ್ರದಾಯ ಅಂದು ಹೆಣ್ಣಿನ ಮನೆಯಲ್ಲಿ ನಡೆಯುತ್ತಿತು. ತದನಂತರ ಮಾಮೂಲಂತೆ, ಹೆಣ್ಣನ್ನು ಕರೆಯುವ ಕಳಿಸುವ ಸಂಪ್ರದಾಯಗಳು ನಡೆಯುತ್ತವೆ.

ಬಿಲ್ಲವರು ದೀವರು ನಾಮಧಾರಿಗಳಲ್ಲಿ, ಈಡಿಗರಲ್ಲಿರುವ ಆಚರಣೆ ವಿಧಿಗಳು ಕಾಣಿಸುತ್ತವೆ. ಆದರೂ ಕೆಲವೊಂದು ಆಚರಣೆಗಳು ಭಿನ್ನತೆ ಮತ್ತು ವಿಶಿಷ್ಟತೆಯನ್ನು ಪಡೆದುಕೊಂಡಿವೆ.

ಬಿಲ್ಲವರು, ನಾಮಧಾರಿಗಳಲ್ಲಿ ಪ್ರಮುಖವಾಗಿ ಮದುವೆಗೆ ಸಂಬಂಧಿಸಿದಂತೆ. ಈ ಬಗೆಯ ವಿಧಿನಿಷೇಧಗಳಿವೆ. ಹೆಣ್ಣು ಗಂಡಿನ ಸಂಬಂಧವನ್ನು ಕಲ್ಪಿಸುವ ಮಧ್ಯವರ್ತಿ ಇರುತ್ತಾನೆ. ಜಾತಕನೋಡುವ ಕ್ರಮ, ಹೆಣ್ಣು ನೋಡುವ ಶಾಸ್ತ್ರ, ಬಳ್ಳಿನಿಷೇಧ, ಮುಹೂರ್ತ, ವರದಕ್ಷಿಣೆ, ಜಲಸಾಕ್ಷಿ ತಾಳಿ (ಇದು ಮೊದಲು ಇರಲಿಲ್ಲ ಬಿಲ್ಲವರಲ್ಲಿ ಇಂದು ಇದೆ) ಕೂಡಿ ತರುವುದು, ಮದುವೆಗೆ ನಿಷೇಧದ ತಿಂಗಳುಗಳು, ಮಂತ್ರೋಕ್ತ, ಕಾಲುಂಗರ, ಬಳೆ ಮೀಯುವುದು, ಇತ್ಯಾದಿಗಳು ಈಡಿಗರ ಆಚರಣೆಗಳೊಂದಿಗೆ ಸಾಮ್ಯತೆ ಪಡೆದುಕೊಂಡಿವೆ. ಊಟದ್ದಲಿ ಸಸ್ಯಹಾರವಿದೆ. ಆರತಕ್ಷತೆ, ತಿರುಗಣೆ ವಿಧವಾವಿವಾಹ, ವಿಧುರ ವಿವಾಹ, ಉಡುಗೊರೆ, ಹಾಗು ಒಡೆಯರ ಮನೆಗೆ ತೆರಳಿ ಕಾಲಿಗೆ ಬೀಳುವ ಪದ್ಧತಿ ಸಮಾರಂಭ ಇವುಗಳು, ಅವರ ವಿಶೇಷ ಆಚರಣೆಗಳು. ಒಡೆಯರಿಗೆ ಕಾಲಗೆಬೀಳುವ ಆಚರಣೆ ಬಯಲಿನ ಈಡಿಗರಲ್ಲಿ ಇಲ್ಲ. ಮೇಲ್ಕಂಡ ಆಚರಣೆಗಳು ಕೋಟದ ಬಿಲ್ಲವರಲ್ಲಿವೆ.

೩). ವಿಧವಾ ವಿವಾಹಕ್ಕೆ ಈಡಿಗರಲ್ಲಿ ಅವಕಾಶವಿತ್ತು. ಇದನ್ನು 'ಕೂಡಿಕೆ' ಎಂದು ಕರೆಯುತ್ತಾರೆ. ಕರ್ನಾಟಕದಲ್ಲಿರುವ ಎಲ್ಲಾ ಈಡಿಗ ಸಮೂಹದಲ್ಲೂ ಈ ಪದ್ಧತಿಯಿದೆ. ಆದರೆ ಅದಕ್ಕೆ ಕೆಲವುಕಟ್ಟಳೆಗಳೂ ಇವೆ. ಈ ವಿವಾಹಕ್ಕೆ ಹೆಣ್ಣು ಒಪ್ಪಬೇಕು. ಆಕೆಗೆ ಮಕ್ಕಳಿರಬಾರದು. ಗಂಡನ ತಮ್ಮನು ವಿವಾಹವಾಗುವಂತಿಲ್ಲ. ತಂದೆ, ತಾಯಿ, ಮತ್ತು ಜನಾಂಗದ ಯಜಮಾನರು ಒಪ್ಪಬೇಕು. ಅಂತವರಿಗೆ ಮುತ್ತೈದೆಯರ ಸ್ಥಾನಗಳು ಅಲಭ್ಯ. ಇತ್ಯಾದಿ..

೪). ದತ್ತು ಸ್ವೀಕಾರ: ಮಕ್ಕಳಿಲ್ಲದಿದ್ದರೆ ದತ್ತು ಸ್ವೀಕರಿಸಲು ಅವಕಾಶವಿತ್ತು. ಮಗು ಸ್ವಗೋತ್ರದವಾನಗಿರಬೇಕು. ಮಕ್ಕಳಿಲ್ಲದಿದ್ದರೆ ಮಾತ್ರ ಅವಕಾಶ, ಸೋದರರ ಮಕ್ಕಳನ್ನೆ ಹೆಚ್ಚಾಗಿ ಸ್ವೀಕರಿಸುತ್ತಿದ್ದರು. ಬುಡಕಟ್ಟಿನ ಯಜಮಾನನಾಗಿ 'ಕಟ್ಟೆ ಮನೆ ಗೌಡ'ನಿರುತ್ತಿದ್ದ. ಜಾತಿಯ ಒಳಜಗಳಗಳ ಪಂಚಾಯ್ತಿಗೆ ಈತನೆ ಮುಖ್ಯಸ್ಥ. ಈತನಿಗೊಬ್ಬ ಕೋಲುಕಾರನಿರುತ್ತಿದ್ದ. ಈಗಲೂ ಹಳ್ಳಿಗಳಲ್ಲಿ ಈ ವ್ಯವಸ್ಥೆ ಅಸ್ಥಿತ್ವದಲ್ಲಿದೆ.(ಚಿತ್ರದುರ್ಗ ಚಿಕ್ಕಮಂಗಳೂರು. ಮೈಸೂರು. ತುಮಕೂರು ಜಿಲ್ಲೆಗಳಲ್ಲಿ) ಉನ್ನತ ಜಾತಿಯವರೊಂದಿಗೆ ಗುಪ್ತ ಲೈಂಗಿಕ ಸಂಬಂಧಗಳು ನಡೆದಿದ್ದರೆ ಅಂಥಸಂದರ್ಭದಲ್ಲಿ ಅವರನ್ನು ಜಾತಿಗೆ ಸೇರಿಸಿ ಸಮಸ್ಯೆಯನ್ನು ಬಗೆಹರಿಸಿ ಕೊಳ್ಳುತ್ತಿದ್ದರು. ಕೆಳಜಾತಿಯವರೊಂದಿಗೆ ಸಂಬಂಧವೇರ್ಪಟ್ಟರೆ, ಅವರಿಗೆ ಬಹಿಷ್ಕಾರವಿತ್ತು. ಜಾತಿಗೆ ಸೇರಿಸಿಕೊಳ್ಳುತ್ತಿರಲಿಲ್ಲ.

೫) ಸಾವು: ಸಾವಿನ ಸಂದರ್ಭಗಳಲ್ಲಿ ಈಡಿಗರ ಆಚರಣೆಗಳು ನಿಷೇಧಗಳು ತುಂಬಾ ಜಟಿಲತೆಯಿಂದ ಕೂಡಿದವುಗಳಾಗಿರುತ್ತವೆ. ಇಲ್ಲಿ ಸಾಕಷ್ಟು ವೈಧಿಕ ಸಂಸ್ಕೃತಿಯ ಅನುಕರಣೆಯನ್ನು ಕಾಣುತ್ತೇವೆ. ಈ ಪಂಗಡದ ಕೆಲವು ಉಪಪಂಗಡಗಳಲ್ಲಿ ಉದಾ: ಕುಡಿಯ ಬಿಲ್ಲವ ರುಗಳಲ್ಲಿ ಬಯಲು ಸೀಮೆಯ ಈಡಿಗರು ಅನುಸಿರಿಸುವಷ್ಟು ವೈಧಿಕ ರೀತಿಯ ಶಾಸ್ತ್ರೋಕ್ತಗಳನ್ನು ಅನುಸರಿಸುವುದಿಲ್ಲ. ಸ್ವಲ್ಪ ಮಟ್ಟಿಗೆ ನಾಮಧಾರಿ ದೀವರುಗಳು ಈ ಬಗೆಯ ಆಚರಣೆಗಳಿಗೆ ಸಮೀಪವಿದ್ದರೂ ಕೆಲವೊಂದು ವಿಶಿಷ್ಟ ಆಚರಣೆಗಳು ಈ ಎಲ್ಲಾ ಗುಂಪುಗಳಲ್ಲಿಯೂ ಭಿನ್ನವಾಗಿ ಆಚರಣೆಯಲ್ಲಿವೆ.

ಬಯಲು ಸೀಮೆಯ ಈಡಿಗರು ಸತ್ತವರನ್ನು ಊಳುತ್ತಾರೆ. ಕುಷ್ಠರೋಗವಿದ್ದವರನ್ನು ಊಳುತ್ತಾರೆ. ಗರ್ಭಿಣಿಯರಿಗೆ ಕಲ್ಲುಸೇವೆ ತೀರಿಸುತ್ತಾರೆ. ಕುಷ್ಠರೋಗದ ಹೆಣವನ್ನು ಕೆಲವೊಮ್ಮೆ ಕಾಡಿನಲ್ಲಿಟ್ಟು ಪಕ್ಷಿಗಳು ತಿನ್ನುವಂತೆ ಮಾಡಿರುತ್ತಾರೆ. ಊಳುವ ಸಂದರ್ಭದಲ್ಲಿ ತಲೆಯನ್ನು ದಕ್ಷಿಣಾಭಿಮುಖವಾಗಿಡಲಾ ಗುತ್ತದೆ. (ಇದಕ್ಕೊಂದು ಕಥೆಯಿದೆ. ವಿವರಕ್ಕೆ ನೋಡಿ. ಈಡಿಗರ ಜನಾಂಗದ ಚರಿತ್ರೆ). ವಿವಾಹಿತ ಸತ್ತರೆ ಹನ್ನೊಂದು ದಿನ ಸೂತಕ, ಅವಿವಾಹಿತ ಸತ್ತರೆ ಮೂರು ದಿನಗಳ ಸೂತಕ. ಅವಿವಾಹಿತನಿಗೆ ಹೆಚ್ಚು ಆಚಾರವಿಧಿಗಳಿಲ್ಲ ವಿವಾಹಿತನಿಗೆ ಆಚಾರ ವಿಧಿಗಳು ಸಾಕಷ್ಟಿವೆ.

ವಿವಾಹಿತ ತೀರಿಕೊಂಡರೆ ಸಮಾಧಿಯ ಸಂದರ್ಭದಲ್ಲಿ ನಾಲ್ಕು ಮೂಲೆಗೆ ಬೆನ್ನು ಹಿಂದೆ ಮಾಡಿ ತುಂಬೆಗಿಡ ನೆಡುತ್ತಾರೆ. ನಂತರ ಸ್ವಲ್ಪ ಹಣವನ್ನು ಅಲ್ಲಿಡುತ್ತಾರೆ. ಹೊಲೆಯರು ಅದನ್ನು 'ನೆಲಹಾಗ'ವೆಂದು

ತೆಗೆದುಕೊಳ್ಳುತ್ತಾರೆ. ಮುಖ್ಯಶೋಕಗ್ರಸ್ತನು ಹೆಣದ ತಲೆಯ ಬಳಿ ಬೆಂದ ಅನ್ನವನ್ನು ಹೆಣದ ಬಟ್ಟೆಯಲ್ಲಿ ಕಟ್ಟಿ ಇಡುತ್ತಾನೆ. ಸಮಾಧಿಯ ನಂತರ ಸಮೀಪದ ನೀರಿನ ತೊರೆಗೆ ಹೋಗಿ ಮೊದಲು ಮುಖ್ಯ ಶೋಕಗ್ರಸ್ತ ನಂತರ ಉಳಿದವರು ಸ್ನಾನಮಾಡಿ ಮನೆಗೆ ಹಿಂದಿರುಗುತ್ತಾರೆ. ಸಮಾಧಿಯಾದ ರಾತ್ರಿಯ ದಿನ ದೀಪ ಮತ್ತು ನೀರನ್ನಿಡುತ್ತಾರೆ. ಹೆಣವನ್ನು ಚಟ್ಟದಲ್ಲಿ ಹೊತ್ತವರಿಗೆ ಒಳಗೆ ಪ್ರವೇಶವಿಲ್ಲ. ಮರುದಿನ ಶೋಕಗ್ರಸ್ಥನು ಅವರ ಬೆನ್ನಿಗೆ ಹಾಲು ಬೆಣ್ಣೆ ಸವರಿ ಸ್ನಾನ ಮಾಡಿಸುತ್ತಾನೆ. ನಂತರ ಒಳಗೆ ಪ್ರವೇಶಮಾಡುತ್ತಾರೆ.

ಮರುದಿನ "ಕೂಳು" ಹಾಕುವ ಕಾರ್ಯಕ್ರಮವಿದೆ. ಕೋಳಿ ಕಡಿದು ಬೇಯಿಸಿ ಹಣ್ಣುಕಾಯಿ ಸಾಂಬ್ರಾಣಿಯೊಂದಿಗೆ ಸಮಾಧಿಯಬಳಿಗೆ ಕೂಳನ್ನು ತೆಗೆದು ಕೊಂಡು ಹೋಗಿ ಪೂಜೆ ಮಾಡಿ ಇಡುತ್ತಾರೆ. ಕಾಗೆಗಳು ಅದನ್ನು ತಿಂದರೆ, ಮೃತನ ಆತ್ಮಕ್ಕೆ ಶಾಂತಿ ಎಂಬ ನಂಬಿಕೆಯಿದೆ. ಬ್ರಹ್ಮಚಾರಿ ಸತ್ತರೆ, ಅರೆಬೆಂದ ಧಾನ್ಯ ಹಾಲು ಬೆಣ್ಣೆಯನ್ನು ಸಮಾಧಿಯ ಮೇಲೆ ಇಟ್ಟು ಬರುತ್ತಾರೆ.

ಹನ್ನೊಂದನೆಯ ದಿನ ಸೂತಕದ ದಿನವನ್ನು ಕಳೆದು ಕೊಳ್ಳುತ್ತಾರೆ. ಬ್ರಾಹ್ಮಣ ಪುರೋಹಿತ ಪುಣ್ಯಮಾಡುತ್ತಾನೆ. ಹೋಮದ ಬೆಂಕಿಯಿಂದ ಆದಿನ ಆಹಾರವ್ನನು ಬೇಯಿಸಿ, ಸ್ವಲ್ಪವನ್ನು ಸಮಾಧಿಗೆ ಅರ್ಪಿಸುತ್ತಾರೆ. ಮನೆಯ ಮೇಲೆ ಸ್ವಲ್ಪ ಅನ್ನವನ್ನು ಹಾಕಿ ಕಾಗೆಗೆ ತಿನ್ನಲು ಬಿಡುತ್ತಾರೆ. ಮೈಸೂರು ಜಿಲ್ಲೆಯ ಕೆಲವರು ಸಮೀಪದ ಹಳ್ಳಕ್ಕೆ ಆಹಾರ ತೆಗೆದುಕೊಂಡು ಹೋಗಿ, ಬಾಳೆ ಎಲೆ ಹಾಸಿ ನೀರಿನಲ್ಲಿ ತೇಲಿಬಿಡುತ್ತಾರೆ. ಸೂತಕ ಸಂದರ್ಭದಲ್ಲಿ ಇತರೆ ಸಂಬಂಧಿಗಳು ಮನೆಯಲ್ಲಿ ಊಟ ಮಾಡುವುದಿಲ್ಲ. ಪೂರ್ವಿಕರಿಗೆ ಮಹಾಲಯ ಅಮವಾಸ್ಯೆಯ ದಿನ 'ಪಕ್ಷ'ವನ್ನು ಆಚರಿಸುತ್ತಾರೆ. ಪ್ರತಿವರ್ಷ ಶ್ರಾದ್ಧವನ್ನು ಆಚರಿಸುವುದಿಲ್ಲ. ದೀಪಾವಳಿ ಮಹಾನವಮಿಯ ಸಂದರ್ಭದಲ್ಲಿ ಹಿರಿಯರಿಗೆ ಎಲ್ಲಾ ಬಗೆಯ ಅಡಿಗೆಯನ್ನು ಮಾಡಿ ಎಡೆಯನ್ನು ಅರ್ಪಿಸುತ್ತಾರೆ. "ತಿಥಿಯ ದಿನ ರಾತ್ರಿ "ದೇಶ ಜೋಗ" ದರವೆಂದು ಹೆಸರುಳ್ಳ ನಾಮಧಾರಿಗಳು ಮತ್ತು ಸನಾತನಿಗಳನ್ನು ಆಹ್ವಾನಿಸಿ 'ಚಕ್ರಪೂಜೆ'ಮಾಡಿಸುತ್ತಾರೆ. ಈ ಸಂದರ್ಭದಲ್ಲಿ ವಾಡಿಕೆಯಂತೆ ಹಿರಿಯರಲ್ಲಿ ಪಾನೀಯ ಸೇವನೆ ಇರುತ್ತೆ"(ಮದ್ಯಪಾನ)ಕಳ್ಳನ್ನು ಮಾತ್ರ ಉಪಯೋಗಿಸುವುದಿಲ್ಲ. ವಿವರಕ್ಕೆ ನೋಡಿ Castes and tribes of Southern India EDGAR THURSTON -೩೬-೬೭ ೬೮.

ಈಡಿಗರಲ್ಲಿರುವಂತೆ ಬಿಲ್ಲವರು ನಾಮಧಾರಿ ದೀವರಗಳಲ್ಲಿಯೂ ಕೆಲವು ಸಾಮ್ಯಗಳಿವೆ. ಬಿಲ್ಲವರ ಸಾವಿನ ಸಂದರ್ಭದ ಪ್ರಮುಖ ಆ ಆಚರಣೆಗಳು ಹೀಗಿವೆ. ಶವಸ್ನಾನ, ಶವದಹನ ಊಳುವುದು, ಹನ್ನೊಂದನೇ

ದಿನದ ಸೂತಕ, ಗುಂಡಿ ಮುಳುಗುವುದು, ಶವದ ತಲೆಯುಗಂಟು, ಕುಂಟನೀರು, ಇತ್ಯಾದಿಗಳಿವೆ. ಸಂಸ್ಕಾರದ ಸ್ಥಳಕ್ಕೆ ಹೆಂಗಸರು ಮಕ್ಕಳಿಗೆ ನಿಷೇಧವಿದೆ. ಇದು ಎಲ್ಲಾ ಈಡಿಗ ಪಂಗಡದಲ್ಲಿ ಇದೆ. ೫ ಅಥವಾ ಮೂರನೆಯ ದಿನ ಬೂದಿಸಂಚಯದಿನವಾಗಿದೆ. ೧೨ನೇ ದಿನದವರೆಗೆ ಸೂತಕ ಇದೆ. ದಾನವಿದೆ, ವರ್ಷಪ್ರತಿ ಮೀಸಲು ಬೆಚ್ಚುವುದು (ಎಡೆ ಇಡುವುದು) ಮೊದಲಾದವುಗಳಿವೆ. ಶ್ರಾದ್ಧ- ಶ್ರಾದ್ಧವಿಧಿಗಳಿಲ್ಲ. ಪ್ರೇತಮದುವೆ ನೋಡಲುಗುಡ್ಡೆಯಲ್ಲಿ ಸಸಿ ನೆಡುವ ಕ್ರಮಗಳು ಇವೆ. 'ಕಾಗೆ, ಗೋಕರ್ಣದಲ್ಲಿ ದೊಡ್ಡದ ಆಚರಣೆ, ಅಜ್ಜನ ಹೆಸರನ್ನು ಮೊಮ್ಮಕ್ಕಳಿಗೆ ಇಡುವುದು ಮೊದಲಾದ ಆಚರಣೆಗಳು ಬಿಲ್ಲವರಲ್ಲಿವೆ. ಇತರೆ ಉಪಪಂಗಡಗಳಲ್ಲೂ ಇಲ್ಲಿರುವ ವಿಧಿನಿಷೇಧಗಳಲ್ಲಿ ಕೆಲವುಗಳು ಇವೆ.

ಒಟ್ಟು ಈ ಎಲ್ಲಾ ಆಚರಣೆಗಳೂ ಈ ಸಮುದಾಯಗಳ ಸಾಮೂಹಿಕ ಆಚರಣೆಗಳಾಗಿದ್ದವು. ಈ ಆಚರಣೆಗಳು ಊಳಿಗಮಾನ್ಯ ವ್ಯವಸ್ಥೆಯಲ್ಲಿ ತಮ್ಮ ಬೇರುಗಳನ್ನು ಬಿಟ್ಟುಕೊಂಡಿವೆ. ಈ ಸಮುದಾಯದ ಸಮೂಹ ಸಂಬಂಧಗಳ ಸ್ವರೂಪದ ಮೇಲೆ ಈ ಆಚರಣೆಗಳು ಬೆಳಕು ಚೆಲ್ಲುತ್ತವೆ. ಇವರ ಹಿಂದಿನ ಜೀವನ ಸಾಮೂಹಿಕ ಜೀವನ ವ್ಯವಸ್ಥೆಯಾಗಿದ್ದು ಯಾವುದೇ ವ್ಯಕ್ತಿಯ ಜೀವನವನ್ನು ಸಮೂಹದಿಂದ ಹೊರತು ಪಡಿಸಿ ನೋಡಲು ಸಾಧ್ಯವಿರಲಿಲ್ಲ. ಇಂತಹ ಸಮೂಹ ಜೀವನ ವಿಧಾನಗಳಲ್ಲಿ ಭಾವನಾತ್ಮಕ ಸಂಬಂಧಗಳು ಹೆಚ್ಚು ಗಟ್ಟಿಯಾಗಿರುತ್ತವೆ. ಸಮೂಹವು ಈ ಎಲ್ಲಾ ಆಚರಣೆಗಳ ಕ್ರಿಯೆಯಲ್ಲಿ ಸಾಮೂಹಿಕವಾಗಿ ಪಾಲ್ಗೊಂಡು ಬದುಕಿನ ಅನುಭವಗಳನ್ನು ಸಮೂಹದೊಂದಿಗೆ ಬೆಸೆದು ಕೊಳ್ಳುವ, ಆ ಮೂಲಕ ಬದುಕನ್ನು ಬಾವನಾತ್ಮಕವಾಗಿ ಹೆಚ್ಚು ಸಂವೇದನಾತ್ಮಕವಾಗಿ ಅನುಭವಿಸುವ ಶಕ್ತಿಯನ್ನು ಪಡೆದು ಕೊಂಡಿತ್ತು.

ಇಂದು ಆಧುನಿಕತೆ ಈ ಸಮುದಾಯಕ್ಕೂ ಪ್ರವೇಶಿಸಿದೆ. ಮೇಲಿನ ಆಚರಣೆ ವಿಧಿಗಳು ಕಣ್ಮರೆಯಾಗುತ್ತಿವೆ. ಈ ಕಾರಣಕ್ಕಾಗಿಯೇ ಅಂದಿನ ಸಮೂಹ ಜೀವನ ಇಂದು ನಾಶವಾಗುತ್ತಿದೆಯೇ? ಅಥವಾ ಆಧುನಿಕತೆಯೊಂದಿಗೆ ಬಂಡವಾಳ ಶಾಹಿವ್ಯವಸ್ಥೆಯು ಸಾಮೂಹಿಕ ಬದುಕನ್ನು ಛಿದ್ರಮಾಡುತ್ತಿದೆಯೇ? ಎನ್ನುವುದು ಆಲೋಚಿಸಬೇಕಾದ ವಿಚಾರವಾಗಿದೆ.

ಬಯಲು ಸೀಮೆಯ ಈಡಿಗರು ಕಳ್ಳು ಇಳಿಸುವ ವೃತ್ತಿಯ ಕಾರಣವಾಗಿ ಊರಿಂದೂರಿಗೆ ವಲಸೆಬಂದು ಹೋದೆಡೆಯಲ್ಲೇ ಒಕ್ಕಲು ಹಾಕಿದರು. ಎಲ್ಲಿಯೂ ಇವರು ಶಾಶ್ವತವಾಗಿ ಬೇರೂರಲಾಗಲಿಲ್ಲ. ಹೀಗಾಗಿ ಅಲ್ಲಲ್ಲಿ ಛಿದ್ರವಾಗಿ ಹರಡಿಕೊಂಡಿದ್ದಾರೆ. ಈ ಕಾರಣಕ್ಕೆ ಅವರಿಗೆ ಒಂದೆಡೆನಿಂತು ಸಮುದಾಯದೊಡನೆ ಬಹಳಷ್ಟು

ಜನಗಳು ಬದುಕು ನಡೆಸಲು ಸಾಧ್ಯವಾಗಲಿಲ್ಲ. ಈಗ ಒಂದು ಊರಿಗೆ ೧೦-೨೦ ಕುಟುಂಬಗಳಿಂದ ೧೦೦-೧೫೦ ಕುಟುಂಬಗಳಾಗಿ ಹಂಚಿಹೋಗಿದ್ದಾರೆ. ಎಲ್ಲಿಯೂ (ಬಯಲ ಸೀಮೆ ಈಡಿಗರು) ಇವರು ಒಂದು ಊರಿನ,-ಹಳ್ಳಿಯ, ಬಹು ಸಂಖ್ಯಾತ ಜನಾರಾಗಿರುವುದು ಕಾಣುವುದಿಲ್ಲ. ಹಾಗೇನಾದರೂ ಇದ್ದರೂ, ೧೦೦ವರ್ಷಗಳೊಳಗೆ ಅವರು ವಲಸೆಬಂದು ಸೇರಿಕೊಂಡವರಾಗಿದ್ದಾರೆ. ಹೀಗೆ ಒಕ್ಕಲೂಡಿದ ಇವರಲ್ಲಿ ಸಾಮೂಹಿಕ ಜೀವನದ ಕೊರತೆ ಇದ್ದು- ಒಕ್ಕಲೂಡಿದ ಊರಿನ ಬಹುಸಂಖ್ಯಾತ ಜಾತಿಯವರ ಆಚರಣೆಗಳನ್ನೇ ಇವರೂ ಅನುಸರಿಸುತ್ತಿದ್ದಾರೆ. ಆದ್ದರಿಂದ ತಮ್ಮದೇ ಆದ ಸಾಂಸ್ಕೃತಿಕ ಅನನ್ಯತೆಯನ್ನು ಅಷ್ಟು ದಟ್ಟವಾಗಿ ಈ ಪ್ರದೇಶಗಳ ಈಡಿಗರಲ್ಲಿ ಕಾಣಲಾಗುತ್ತಿಲ್ಲ. ಪಾನ ನಿಷೇಧ ಜಾರಿಯಾದ ಮೇಲೆ ವೃತ್ತಿಯಿಂದ ದೂರವಾಗಿ ದಿಕ್ಕೆಟ್ಟು ದೂರದೂರದ ನಗರಗಳಲ್ಲಿ ಅಸ್ತವ್ಯಸ್ಥವಾಗಿ ಚದುರಿಕೊಂಡಿದ್ದಾರೆ. ಆದರೆ ಶಿವಮೊಗ್ಗ ಜಿಲ್ಲೆ- ದ.ಕ. ಉ.ಕ. ಜಿಲ್ಲೆಯಲ್ಲೂ ಹೀಗಿರುವುದಿಲ್ಲ. ಅಲ್ಲಿ ಇವರೇ ಬಹು ಸಂಖ್ಯಾತರಾದ್ದರಿಂದ ಸಮೂಹಜೀವನ ವ್ಯವಸ್ಥೆ ಇದೆ. ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಳ್ಳಲು ಇವರಿಗೆ ಸಾಧ್ಯವಾಗಿದೆ. ಕೃಷಿ ಇವರ ಪ್ರಧಾನ ಕಸುಬಾಗಿದೆ.

**ವಾರ್ಷಿಕಾವರ್ತನದ ಆಚರಣೆಗಳು:- (ಹಬ್ಬಗಳು- ಜಾತ್ರೆಗಳು ಇತ್ಯಾದಿ.)**

ಈಡಿಗರು ಹಿಂದೆ ಈಚಲು ವನಗಳಲ್ಲಿದ್ದುಕೊಂಡು ಬದುಕು ಸಾಗಿಸುತ್ತಿದ್ದವರು ಕ್ರಮೇಣ ಪಟ್ಟಣಗಳ ಸಂಪರ್ಕ ಅನಿವಾರ್ಯವಾಯಿತು. ಇವರ ಪ್ರಮುಖ ಆರಾಧ್ಯದೈವಗಳಾದ, ಕಾಟಮೇಶ್ವರ ಯಲ್ಲಮ್ಮ ಅಥವಾ ಸುರಬಾಂಡೇಶ್ವರಿಗೆ ಸಂಬಂಧಿಸಿದ ಪೂಜೆಗಳು, ಹಬ್ಬಗಳು, ಜಾತ್ರೆಗಳು ಮೊದಲಾದವುಗಳನ್ನು ಆಚರಿಸುತ್ತಿದ್ದಿರಬೇಕು. ಆಂಧ್ರದಿಂದ ಪ್ರತ್ಯೇಕಗೊಂಡರೂ ಕಾಟಮೇಶ್ವರ ಎಲ್ಲಮ್ಮ ದೇವರುಗಳು ಇಂದಿಗೂ ಇವರಿಗೆ ಕುಲದೇವತೆಗಳೇ(ಬಯಲು ಸೀಮೆಯವರಿಗೆ). ಈಚಲುವನದಿಂದ ಊರುಗಳಲ್ಲಿ ಒಕ್ಕಲು ಮಾಡಿಕೊಳ್ಳತೊಡಗಿದ್ದಂತೆ ಆಯಾ ಊರಿನ ಆಚರಣೆಗಳನ್ನು ಹಬ್ಬ ಜಾತ್ರೆಗಳನ್ನು ಇವರೂ ಅನುಸರಿಸ ತೊಡಗಿದ್ದಂತೆ ಕಾಣುತ್ತದೆ. ಇಂದು ಇವರ ಹಬ್ಬ ಆಚರಣೆಗಳಲ್ಲಿ ಆಯಾ ಊರವರಿಗಿಂತ ಇವರಲ್ಲಿ ಭಿನ್ನತೆಯೇನು ಕಾಣಿಸಲಾರದು. ಆದರೂ ತಮ್ಮದೆ ಆದ ಕೆಲವು ವಿಶಿಷ್ಟತೆಗಳು ಕೆಲವು ಪಂಗಡಗಳಲ್ಲಿ ಇಲ್ಲದಿಲ್ಲ. ಉದಾ: ದಕ್ಷಿಣಕನ್ನಡದ ಬಿಲ್ಲವರು, ಮಲೆಯಾಳಿ ಬಿಲ್ಲವ, ತಿಯ್ಯಾ, ಇತ್ಯಾದಿಗಳಲ್ಲಿ ವಿಶಿಷ್ಟತೆಯನ್ನು ಕಾಣಬಹುದು.

i). ಹಬ್ಬಗಳು: ಜಾತ್ರೆಗಳು ಬಯಲು ಸೀಮೆಯ ಈಡಿಗರು ಸಾಮಾನ್ಯವಾಗಿ ಊರಿನಲ್ಲಿ ಆಚರಿಸುವ ಎಲ್ಲಾ ಹಬ್ಬಗಳನ್ನು ಈಚಿಗೆ ಆಚರಿಸುತ್ತಾರೆ. ಯುಗಾದಿ ಚೌತಿ, ದೀಪಾವಳಿ, ಮಹಾನವಮಿ, ಏಕಾದಶಿ, ಶಿವರಾತ್ರಿ,

ಇತ್ಯಾದಿ ಹಬ್ಬಗಳನ್ನು ಆಚರಿಸುತ್ತಾರೆ. ಯುಗಾದಿ, ಚೌತಿ, ದೀಪಾವಳಿಯನ್ನು ಊರಿನ ಇತರರು ಆಚರಿಸುವಂತೆಯೇ ಆಚರಿಸುತ್ತಾರೆ. ಮಹಾನವಮಿಯಲ್ಲಿ ಮತ್ತು ದೀಪಾವಳಿಯಲ್ಲಿ ಪೂರ್ವಜರಿಗೆ (ಹಿರಿಯರಿಗೆ) ಎಡೆ ಇಡುವ ಸಂಪ್ರದಾಯ ಇದೆ. ಹಿರಿಯರು ಉಪಯೋಗಿಸುತ್ತಿದ್ದ ಆಹಾರ, ಬಟ್ಟೆ-ಪಾನೀಯಗಳನ್ನು-(ಮಾಂಸಹಾರಿಗಳಿಗೆ ಮಾಂಸದ ಅಡುಗೆಯನ್ನು)ಎಡೆಯಿಟ್ಟು ಪೂಜಿಸುತ್ತಾರೆ. ಊರುಗಳಲ್ಲಿ ನಡೆಯುವ ಯಾವುದೇ ಜಾತ್ರೆಗಳನ್ನು ಇವರು ಆಚರಿಸುತ್ತಾರೆ. ಎಲ್ಲಮ್ಮ, ಅಂತರಗಟ್ಟೆ ಅಮ್ಮ, ಉಡಸಲಮ್ಮ, ಮಾರಮ್ಮ, ಚೌಡಮ್ಮ, ಮಾತಂಗಿ ಮೊದಲಾದ ಜಾತ್ರೆಗಳಲ್ಲಿ ಇವರ ಪಾತ್ರ ವಿಶೇಷವಿರುತ್ತದೆ. ಈದೇವತೆಗಳ ಜಾತ್ರೆ, ಹಬ್ಬಗಳಲ್ಲಿ ಊರಿನ ಮಾದಿಗ ಜನರಿಗೆ ಸೇಂದಿಯ ಘಟೆಗಳನ್ನು ತಲೆಯಮೇಲೆ ಹೊರಿಸಿ ಮೆರವಣಿಗೆ ಮಾಡಿಸುತ್ತಾರೆ. ದೇವತೆಗಳಿಗೆ ನೇಮವಾದಮೇಲೆ ಮಾದಿಗರಿಗೆ ಸೇಂದಿಯನ್ನು ಸೇವಿಸಲು ಅರ್ಪಿಸುತ್ತಾರೆ. (ಮಾದಿಗರು ಮತ್ತು ಈಡಿಗರ ಸಂಬಂಧ ತಂದೆ ಮಕ್ಕಳ ಸಂಬಂಧವೆಂತಲೂ ಸೇಂದಿಯು ಮಾದಿಗರಿಗೆ ತಾಯಿಯ ಹಾಲೆಂತಲೂ ಮಾದಿಗರು ಭಾವಿಸಿದ್ದಾರೆ. ಈಡಿಗರೂ ಇದನ್ನು ನಂಬುತ್ತಾರೆ). ಸವದತ್ತಿಯ ಎಲ್ಲಮ್ಮನ ಜಾತ್ರೆ, ಚಂದ್ರಗುತ್ತಿಯ ರೇಣುಕಮ್ಮನ ಜಾತ್ರೆಗಳು ಈಡಿಗರಿಗೆ ವಿಶೇಷ ಆಚರಣೆಯಾಗಿವೆ.

ಎಲ್ಲಮ್ಮ (ರೇಣುಕ) ಇವರ ಕುಲದೇವರೆಂದು ತಿಳಿದ ಇವರು ತುಂಬಾ ಅಭಿಮಾನ, ಉತ್ಸಾಹದಿಂದ ಯಲ್ಲಮ್ಮನ ಹಬ್ಬ ಜಾತ್ರೆಗಳನ್ನು ಆಚರಿಸುತ್ತಾರೆ. ಬೋವಿಗಳು ಲಂಬಾಣಿಗಳು ಮೊದಲಾದವರು ಸಹ ಮಾದಿಗರಂತೆ ಸೇಂದಿಯನ್ನು ದೇವತೆಗಳಿಗೆ ನೈವೇದ್ಯ ಮಾಡುತ್ತಾರೆ. (ಇದನ್ನು ಮಾಡದಿದ್ದರೆ ನಮಗೆ ಆಗುವುದಿಲ್ಲವೆನ್ನುತ್ತಾರೆ. ಹೆಚ್ಚು ವಿವರಗಳು ಅವರಿಗೆ ತಿಳಿದಿಲ್ಲ. (ನಿರೂಪಕರು ರತ್ನಮ್ಮ ೩೫ವರ್ಷ w/o ಸಂಜೀವ ಬೋವಿ ಸಬಿರಾಯಪಟ್ಟಣ , ತಿಮ್ಮಬೋವಿ, ೭೦ ವರ್ಷ, ಕಂಚೀಪುರ ದುಗ್ಗಪ್ಪ- ಮಾದಿಗರು. ೮೦ ವರ್ಷ. ಕಂಚೀಪುರ) ಇಂದು ಸೇಂದಿ ಸಿಗದೇ ಇರುವುದಕ್ಕೆ ತುಂಬಾ ಅಸಮಧಾನಿಗಳಾಗಿದ್ದಾರೆ. ಬೆಲ್ಲದ ಪಾನಕವನ್ನೇ ಈಡಿಗರ ಮನೆಯಿಂದ ಕೊಂಡೊಯ್ದು ಮೆರವಣಿಗೆ ಮಾಡಿ ಸೇವಿಸುತ್ತಾರೆ. ಈ ಆಚರಣೆಯನ್ನು "ಘಟೆ ಉಕ್ಕಿಸುವುದು" ಎಂದು ಕರೆಯುತ್ತಾರೆ. ಈಡಿಗರನ್ನು ಇವರು ನಮ್ಮ 'ಗೌಡರು' ಎಂದುಕೊಳ್ಳುತ್ತಾರೆ. ಬೋವಿಗಳು ಸೇಂದಿಯ ಬದಲಾಗಿ ಹಿರಯರ ಪೂಜೆಗೆ ಸಾರಾಯಿಯನ್ನೇ ಉಪಯೋಗಿಸುತ್ತಾರೆ. ಇದರಿಂದ ಅವರಿಗೆ ಸಮಾಧಾನವಿಲ್ಲವಂತೆ. "ಸೇಂದಿ ಇಲ್ಲದಿರುವುದಕ್ಕೆ ಅವರು ಹೀಗೆ ನಿಡುಸುಯ್ಯುತ್ತಾರೆ" ಆನನ್ನ ತಾಯೀನ ಈ ಹಾಳು ಸರ್ಕಾರದೋರು ಎಂದು ಕಿತ್ಕೊಂಡ್ರೋ ಆವಾಗ್ಲಿಂದ ನಾವು ಸೊರಗೋದ್ವಿ" (ತಿಮ್ಮಾ ಬೋವಿ, ಕಂಚೀಪುರ, ೭೦ವರ್ಷ ) ಮಾದಿಗ, ಹೊಲೆಯ, ಲಂಬಾಣಿ, ಬೋವಿ, ಕೊರಮ, ಮೊದಲಾದ

ಸಮುದಾಯದವರು, ಮಾರಿ ಜಾತ್ರೆಗಳಲ್ಲಿ ಹಬ್ಬಗಳಲ್ಲಿ ಸೇಂದಿಯನ್ನು ದೇವತೆಗಳ ನೈವೇದ್ಯಕ್ಕೆ ಬಳಸುತ್ತಾರೆ. ಈಡಿಗ ಗೌಡ ಈ ಕಾರ್ಯ ಕ್ರಮಗಳಲ್ಲಿ (ಜಾತ್ರೆ, ಬಾನ ಇತ್ಯಾದಿ ಸಮಯುಗಳಲ್ಲಿ ) ಭಾಗವಹಿಸುತ್ತಾನೆ. ನಾಮಧಾರಿಗಳು 'ಸುಗ್ಗಿ' ಹಬ್ಬವನ್ನು ಆಚರಿಸುತ್ತಾರೆ. ಬಿಲ್ಲವರು ದೀಪಾವಳಿ, ಕಂಬಳ, ಕೂಡಿ ಹಬ್ಬ ಸಾಲಗ್ರಾಮಹಬ್ಬ ಇತ್ಯಾದಿಗಳನ್ನು ಆಚರಿಸುತ್ತಾರೆ. ದೀವರು ಈಡಿಗರಂತೆಯೇ ಎಲ್ಲ ಶಿಷ್ಟ ಹಬ್ಬಗಳನ್ನು ಆಚರಿಸುತ್ತಾರೆ.

ii). ದೈವಗಳು: ಆಂಧ್ರಮೂಲದ ಈಡಿಗರು ಕಾಟಮದೇವರನ್ನು ತಮ್ಮ ಕುಲದೈವವಾಗಿ ಪೂಜಿಸುವಂತೆ ಯಲ್ಲಮ್ಮನನ್ನ ತಮ್ಮ ಕುಲದೇವತೆಯಾಗಿ ಪೂಜಿಸುತ್ತಾರೆ. ಉಳಿದಂತೆ, ಈಶ್ವರ, ವಿಷ್ಣು, ಪಾರ್ವತಿ, ಓಬಳನರಸಿಂಹ,ಉರುಕುಂದಿ ಈರಣ್ಣ ಮೊದಲಾದ ಗ್ರಾಮದೇವತೆಗಳನ್ನು ಪೂಜಿಸುತ್ತಾರೆ. ಕೋಟಿಚನ್ನಯ್ಯ-ಭೂತಗಳು, ಮುತ್ತಪ್ಪದೇವರು, ಪಂಜುರ್ಲಿ, ಕಲ್ಕುಡ, ಕಲ್ಲುರ್ಟಿ ಮೊದಲಾದವು ಬಿಲ್ಲವರ ಆರಾಧ್ಯ ದೈವಗಳಾಗಿವೆ.

೩. ಕ್ರೀಡೆಗಳು: ಬಯಲು ಸೀಮೆಯ ಈಡಿಗರು ಹೆಚ್ಚಾಗಿ ಚದುರಿಹೋಗಿರುವುದರಿಂದ ಅವರದ್ದೇ ಆದ ವಿಶೇಷ ಕ್ರೀಡೆ, ಆಚರಣೆಗಳು ಕಾಣುವುದಿಲ್ಲ. ಆಯಾ ಗ್ರಾಮಗಳ ಜನರೊಂದಿಗೆ ಹೊಂದಿಕೊಂಡು ಎಲ್ಲಾ ಆಚರಣೆ ಕ್ರೀಡೆಗಳಲ್ಲೂ ಭಾಗವಹಿಸುತ್ತಾರೆ. ಶಿವಮೊಗ್ಗ ಜಿಲ್ಲೆಯ ದೀವರು "ಡೊಳ್ಳುಕುಣಿತಕ್ಕೆ ಹೆಸರುವಾಸಿಯಾದರೆ, ಉತ್ತರಕನ್ನಡ ಜಿಲ್ಲೆಯ ನಾಮಧಾರಿಗಳು ಸುಗ್ಗಿಯ ಕುಣಿತ, ಕೋಲಾಟಕ್ಕೆ ಪ್ರಸಿದ್ಧರು. ಕೋಳಿಯಂಕಣ ಆಟವೂ ಇವರಿಗೆ ಇಷ್ಟ. ಹಿಂದೆ ಸೈನಿಕರಾಗಿದ್ದ ನೆನಪಿಗೆ ಈ ಆಚರಣೆ ಉಳಿದುಕೊಂಡಿದೆ....

ದಕ್ಷಿಣಕನ್ನಡದ ಬಿಲ್ಲವರಲ್ಲಿ ಕ್ರೀಡೆಗಳು ಹೆಚ್ಚು ಮನೋರಂಜಕವೂ ರೋಚಕವೂ ಆಗಿರುತ್ತವೆ. ಉದಾ: 'ಕಂಬಳ, ಅವರ ಸಹಾಸಮಯ ಆಟದಲ್ಲಿ ಒಂದು ಓಕುಳಿಆಟ ಇತ್ಯಾದಿ ಆಟಗಳು ರೋಚಕವಾಗಿವೆ.

೧. ಬೇಟೆ: ಬೇಟೆಯು ಈಡಿಗರ ಬದುಕಿನ ಒಂದು ಅವಿಭಾಜ್ಯ ಅಂಗವಾಗಿತ್ತು. ಈಚಲುವನಗಳಲ್ಲಿ ಬದುಕುತ್ತಿದ್ದ ಇವರು ನಗರ- ಪಟ್ಟಣಗಳಿಂದ ದೂರವೇ ಉಳಿದಿರುತ್ತಿದ್ದರು. ಇವರು ಮಾಂಸಹಾರ ಪ್ರಿಯರಾದ್ದರಿಂದ, ಸೇಂದಿ ಇಳಿಸುವ ಕೆಲಸ ಮುಗಿದ ಮೇಲೆ ಬಿಡುವಿನ ವೇಳೆಯಲ್ಲಿ ಗುಂಪಾಗಿ ಬೇಟೆಗೆ ಹೋಗುತ್ತಿದ್ದರು. ಮೀನು ಬೇಟೆಯಲ್ಲಿ ಇವರುನಿಸ್ಸೀಮರು. ಮೊಲದ ಬೇಟೆ,ಸಾರಗದ ಬೇಟೆ, ಹಂದಿಬೇಟೆ,

ಮೊದಲಾವುಗಳು ಇವರ ಇಷ್ಟದ ಬೇಟೆಗಳು. ಕಳ್ಳುವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಗಳಲ್ಲಿ ತೊಡಗುತ್ತಿದ್ದಂತೆ ಇವೆಲ್ಲಾ ಮಾಯವಾಗಿವೆ. (ವಿವರ - ದೊಡ್ಡ ಗಂಗಪ್ಪ- ಈಡಿಗರ- ಕಗ್ಗಲಕಟ್ಟೆ

ಶಿವಮೊಗ್ಗ ಜಿಲ್ಲೆಯ ದೀವರಲ್ಲಿ ಇಂದಿಗೂ ಬೇಟೆ ಹೆಚ್ಚು ಪ್ರಿಯವಾದ ಹವ್ಯಾಸವಾಗಿ ಉಳಿದಿದೆ. ಇವರೂ ಮೀನಿನ ಬೇಟೆಯಲ್ಲಿ ಕುಶಲರು. ಹತ್ತು ಮೀನು ಬೇಟೆ, ಕುಣಿಮೀನು ಬೇಟೆ, ಮೊದಲಾಗಿ ಹಂದಿಬೇಟೆ, ಕಣೆಹಂದಿ ಬೇಟೆ, ಮೊಲದಬೇಟೆಗಳು, ಇಂದಿಗೂ ಇವರ ಬದುಕಿನಲ್ಲೂ ಹಾಸುಹೊಕ್ಕಾಗಿವೆ. (ರಾಮಣ್ಣ ಕಂಚ್ಚಿ, ೪೦ ಮನ್ಮನೆ) ಬಿಲ್ಲವರು ಹಿಂದಿನಿಂದಲೂ ಕಾಡಿನ ಒಡೆತನ ಹೊಂದಿದ್ದವರಾಗಿದ್ದರಿಂದ ಅವರು ಬೇಟೆಯನ್ನು ಬಂಧುಕಿನ ಅಂಗವಾಗಿಯೇ ಉಳಿಸಿಕೊಂಡು ಬಂದಿದ್ದಾರೆ. ಕಾಡುಪ್ರಾಣಿಗಳ ಬೇಟೆ ಇಂದಿಗೂ ಇದೆ. (ವಿವರನೀಡಿದವರು: ಲೋಕಯ್ಯ ಪೂಜಾರ್ -೬೦- ಕುರ್ನಾಡು ಬಂಟಾವಳ (ತಾ)

ಇತರೆ: ಬಿಲ್ಲವರು ಉತ್ತಮ ಯಕ್ಷಗಾನ ಕಲಾವಿದರು. ಕೋಟಿಚನ್ನಯ್ಯ ಅವರ ಆರಾಧ್ಯ ದೈವವಾದ್ದರಿಂದ, ಯಕ್ಷಗಾನದಲ್ಲಿ ಅವರ ಕಥೆಯನ್ನು ಸೊಗಸಾಗಿ ಅಭಿನಯಿಸುತ್ತಾರೆ. ಬಯಲು ಸೀಮೆಯ ಈಡಿಗರು- ಶನಿಮಾಹಾತ್ಮ್ಯನ ಕಥೆಯನ್ನು ತಾವೇ ಸ್ವತಃ ಹೇಳುತ್ತಾರೆ. ಈಚಲು ಪುಟ್ಟಿ ಬಿದಿರು ಪುಟ್ಟಿಗಳನ್ನು ಹೆಣೆಯುವುದು, ಮೊದಲಾದ ಉಪಕಸುಬುಗಳನ್ನು ಈಡಿಗರ ಹೆಣ್ಣುಮಕ್ಕಳು ಮಾಡುತ್ತಾರೆ. ದಕ್ಷಿಣಕನ್ನಡದಲ್ಲಿ ಬಿಡುವಿನ ವೇಳೆಯಲ್ಲಿ ಬೀಡಿಕಟ್ಟುವ, ಕಸೂತಿ ಹಾಕುವ ಕಸುಬುಗಳನ್ನು ರೂಡಿಮಾಡಿಕೊಂಡಿದ್ದಾರೆ.

೫. ಇತರೆ ಸಮುದಾಯಗಳೊಂದಿಗೆ ಈಡಿಗರ ಸಂಬಂಧಗಳು(ವೃತ್ತಿ ಮತ್ತು ಆಚರಣೆಗಳಲ್ಲಿ).

ವೇದ ಕಾಲದಲ್ಲಿ 'ಕಳ್ಳು' ಪವಿತ್ರ ಸ್ಥಾನವನ್ನು ಪಡೆದುಕೊಂಡಿದ್ದುದ್ದು ದೇವತೆಗಳ ಮನ್ನಣೆಗೆ ಪಾತ್ರವಾಗಿದ್ದರಿಂದ ಎನ್ನುವುದು ಸ್ಪಷ್ಟವಾದ ಸಂಗತಿ. ಕ್ರಮೇಣ ದೇವತೆಗಳಂಥವರ ಮೇಲ್ವರ್ಗ ಅಥವಾ ಪ್ರಬಲ ಸಮುದಾಯದವರಿಗೆ ಇದು ನಿಷಿದ್ಧವಾಯಿತು. ಹೀಗೆ ನಿಷಿದ್ಧವಾಗಲು ಹಲವಾರು ಕಾರಣಗಳಿರಬಹುದು. (ಉದಾ: ವೈದಿಕ ಧರ್ಮಕ್ಕೆ ಎದುರಾಗಿ 'ಜೈನ, ಬೌದ್ಧಮತಗಳು ಹುಟ್ಟಿಕೊಂಡಿದ್ದು.) ಈ ಧರ್ಮಗಳ ವಿರುದ್ಧ ಹೋರಾಡಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬರಬೇಕಾದ ಅನಿವಾರ್ಯಗಳು ವೈದಿಕ ಧರ್ಮಕ್ಕೆ ಒದಗಿದಾಗ ಧರ್ಮದ ಆಚರಣೆಗಳಲ್ಲಿ ಕೆಲವನ್ನು ಸುಧಾರಿಸಿಕೊಳ್ಳಬೇಕಾಗಿ ಬಂದಿರಬಹುದು. ಜೈನ ಬೌದ್ಧಧರ್ಮವುಹಿಂಸೆಯ ಮೌಲ್ಯವನ್ನು ಪ್ರಧಾನವಾಗಿ ಎತ್ತಿ ಹಿಡಿದಿದ್ದರಿಂದ, ಬ್ರಾಹ್ಮಣರು ಯಜ್ಞಾ-ಯಾಗಾದಿಗಳಲ್ಲಿ ಅಶ್ವಬಲಿ,

ಗೋಬಲಿಗಳನ್ನು ಕೊಡುವ ಆಚರಣೆಗಳನ್ನು ಕೈಬಿಟ್ಟಿರಬೇಕು. ಅದಕ್ಕೆ ಪೂರ್ವದಲ್ಲಿ ಬ್ರಾಹ್ಮಣರು ಗೋ-ಮಾಂಸ ಭಕ್ಷಕರಾಗಿದ್ದಕ್ಕೆ ಆಧಾರಗಳಿವೆ. ಈಮಾಂಸ ಸೇವನೆಗೆ ಪೂರಕವಾಗಿದ್ದ 'ಕಳ್ಳು(ಸಿದ್ಧಿರಸ) ಸೇವನೆಯೂ ನಿಷಿದ್ಧವಾಗಿರಬೇಕು'.

ಮತ್ತೊಂದು ಕಾರಣವೆಂದರೆ 'ಕಳ್ಳು' ವ್ಯಾಪಾರೀಕರಣಕ್ಕೆ ಒಳ ಪಡುತ್ತಾ ಬಂದಂತೆ, ದುಡಿವ ಜನರಿಗೂ ಅದು ಲಭ್ಯವಾಗಿರುವುದರಿಂದ, ಕೆಳವರ್ಗದವರು ಸೇವಿಸುವ ಈ ಪಾನೀಯ ಸಾಮಾಜಿಕ ಸ್ಥಾನಮಾನದ ದೃಷ್ಟಿಯಿಂದ ಮೇಲ್ವರ್ಗದವರಿಗೆ ಕೀಳಾಗಿ ಕಾಣಿಸಿರಬೇಕು. ಇಲ್ಲಿಂದ ಅವರಿಗೆ ಇದು ನಿಷಿದ್ಧವಾಗಿರಬಹುದು.

ಆಗಿಗೌಡಪುರಾಣ ಮತ್ತು ವೇದಗಳಲ್ಲಿ ದೊರಕುವ ಆಧಾರಗಳಿಂದ, ಮೊದಲು ಈ ಸಮುದಾಯ ಪ್ರಭಲವರ್ಗದೊಡನೆ ನಿಕಟಸಂಬಂಧವನ್ನು ಹೊಂದಿತ್ತು. ಈ ಕಾರಣಕ್ಕೆ ಕೌಂಡಿಣ್ಯರಂತ ಋಷಿಗಳು ಪೂಜ್ಯನೀಯವಾಗಲು ಸಾಧ್ಯವಾಯಿತು.ಕಾಟಮೇಶ್ವರನಂತವರು ಇಂಥ ಸಂಬಂಧವನ್ನು ಹೊಂದಿದ್ದರಿಂದ ಹೆಸರಾಂತ ರಾಜರಾಗಲು ಸಾಧ್ಯವಾಗಿದೆ. ಇದರಂತೆ ದೇವತೆಗಳು ಮತ್ತು ಬ್ರಾಹ್ಮಣ, ಕ್ಷತ್ರಿಯರ ಸಹಕಾರ ಇವರಿಗೆ ಇತ್ತೆಂಬುದು ಸೂಚ್ಯವಾಗುತ್ತದೆ.

ಆನಂತರ ನಿಖರವಾಗಿ ಯಾವ ಸಂದರ್ಭದಲ್ಲಿ ಇವರು ಮೇಲ್ವರ್ಗದವರಿಂದ ಮನ್ನಣೆಯನ್ನು ಕಳೆದು-ಕೊಂಡರೆಂಬುದಕ್ಕೆ ಆಧಾರಗಳು ದೊರಕಿಲ್ಲ. "ಜಿ.ಶಂ. ಪರಮಶಿವಯ್ಯನವರ, ದಕ್ಷಿಣ ಕರ್ನಾಟಕದ ಜಾನಪದ ಕಾವ್ಯ ಪ್ರಕಾರಗಳು" ಗ್ರಂಥದ್ಲಲಿ ಮಧ್ಯಕಾಲಕ್ಕೆ ಸಂಬಂಧಿಸಿದಂತೆ ಸ್ವಲ್ಪವಿವರ ಎಲ್ಲಮ್ಮನ ಜನಪದ ಮೂಲ ಕಥೆಯಲ್ಲಿ ಸಿಗುತ್ತದೆ.

ಓರಂಗಲ್ಲಿನ ಓರುಗಲ್ಲರಾಯನ ಅಹಂಕಾರಮುರಿಯ್ಲಗೆ ಹೊರಟ ಎಲ್ಲಮ್ಮ ಮಾತಂಗಿಯರು ಚಂದ್ರಗುತ್ತಿಯಬಳಿ ತಂಗುವುದು.ಮಾತಂಗಿಗೆ ದಾಹವಾಗಿ ಮಾತಣಡಗೌಡನ ಈಚಲುವನಕ್ಕೆ ಶಾಂಬವಿಯನ್ನು ಸೇವಿಸಲು ಹೋಗುವುದು. ಶ್ರೀಮಂತನಾದ ಈಡಿಗ ಮಾತಾಣಡ ಗೌಡ ಈಚಲು ವನದ ಒಡೆಯನಾಗಿರುವುದು. ಮಾತಂಗಿಯನ್ನು ಕೀಳಾಗಿ ಹಿಂಸಿಸುವುದು. ಇತ್ಯಾದಿ ವಿವರಗಳಿಂಧ, ಅಂದು ಇನ್ನೂ ಕೆಳವರ್ಗದವರಿಗೆ ಕಳ್ಳು ಸುಲಭ ಲಭ್ಯವಲ್ಲವೆನ್ನುವುದು ತಿಳಿಯುತ್ತದೆ. ಬಡವನಾದ ಬಲ್ಲೆಗೌಡ, ಮಾತಂಗಿಯನ್ನು 'ಕಳ್ಳು' ಕೊಟ್ಟು ಸತ್ಕರಿಸಿದ್ದರಿಂದ ಅವನಿಗೆ ಐಶ್ವರ್ಯದೊರೆಯುವುದು. ಈವಿವರಗಳಿಂದ ಕಳ್ಳು ವ್ಯಾಪಾರಿ ವೃತ್ತಿಯಾಗಿ,

ಕೆಳವರ್ಗದವರಿಗೂ ಲಭ್ಯವಾಗುತ್ತಿರುವುದು ಸೂಚ್ಯವಾಗಿದೆ. ವ್ಯಾಪಾರವು ಹೆಚ್ಚು ಲಾಭದಾಯಕವಾಗಲು ದುಡಿವ ಜನರಿಗೂ ಇದು ಮಾರಲ್ಪಡಬೇಕೆನ್ನುವ ಸತ್ಯ- ಬಡವನಾದ ಈಡಿಗ ಬಲ್ಲೇ ಗೌಡನಿಗೆ ಕಂಡಿದೆ. ಶ್ರೀಮಂತನಾದ ಮಾರ್ತಾಂಡಗೌಡನಿಗೆ ಇದರ ಅಗತ್ಯವಿಲ್ಲ. ಕೊನೆಗೆ ಅವನಿಗೂ ಬಡತನ ಒದಗುವುದರಿಂದ ಈ ಒಪ್ಪಂದಕ್ಕೆ ರಾಜಿಯಾದಂತೆ ಕಾಣುತ್ತದೆ. ಹೀಗೆ ಕಳ್ಳಿನ ವ್ಯಾಪಾರೀಕರಣದ ಪಲ್ಲಟದ ಕಥೆಯನ್ನು ಈವಿವರ ಸೂಚಿಸುತ್ತದೆ

ಮಾತಂಗಿಯು ಮಾದಿಗರ ಪ್ರತಿನಿಧಿ. ಬಲ್ಲೇಗೌಡನಿಗೂ ಮಾತಂಗಿಗೂ ಏರ್ಪಡುವ ಸಂಬಂಧ “ಕಳ್ಳನ್ನು ಪಡೆಯುವ ಮಾರುವ ” ಕಾರಣಕ್ಕೇ ಆಗಿದೆ. ದುಡಿವ ವರ್ಗದ ಪ್ರತಿನಿಧಿಗಳಾದ ಮಾದಿಗರಿಗೆ ಕಳ್ಳಿನ ಅಗತ್ಯವಿದೆ. ಈಡಿಗರ ಕುಲಕಸುಬು ಕಳ್ಳು ಇಳಿಸುವುದಾಗಿದೆ. ಮಾದಿಗರು ನೇರವಾಗಿ ಕಳ್ಳು ತೆಗೆದು ಮರದಿಂದ ಕುಡಿಯುವಂತಿಲ್ಲ. ಅದಕ್ಕೆ ಸಾಮಾಜಿಕ ಬಹಿಷ್ಕಾರವಿದೆ (ವಿವರಕ್ಕೆ ನೋಡಿ. ಕಾನೂರು ಹೆಗ್ಗಡತಿ, ಕುವೆಂಪು ಉ.ರ. ಪ್ರಕಾಶನ) ಈ ಸ್ಥಿತಿಯಿಂದ ಅವರು ಈಡಿಗರನ್ನು ಅವಲಂಭಿಸಬೇಕಾದ ಅಗತ್ಯವಿತ್ತು. ಅಂದು ಏರ್ಪಟ್ಟ ಈ ಸಂಬಂಧ ಇಂದಿಗೂ ಆಚರಣೆಯಾಗಿ ಬೆಳೆದು ಬಂದಿದೆ. ಇಂದಿಗೂ ಈಚಲುವನದಲ್ಲಿ ‘ಕಳ್ಳನ್ನು’ ಹೊತ್ತು ಸಾಗಿಸುವುದಕ್ಕೆ ಮಾದಿಗರೇ ಇರುತ್ತಾರೆ. ಈಚಲು ವನದ ಬೆಂಗಾವಲಿಗೆ, ಸೇಂದಿಯ ಪಕಾಲಿಗಳನ್ನು ತಯಾರಿಸಿಕೊಡಲಿಕ್ಕೆ, ಮಿಣಿಮುಟ್ಟುಗಳನ್ನು ಸಿದ್ಧಪಡಿಸಿಕೊಡಲಿಕ್ಕೆ ಇವರೇ ಇರುವುದು ಪದ್ಧತಿಯಾಗಿದೆ. ೧೯-೨೦ನೇ ಶತಮಾನದ್ಲಲಿ ಲಂಬಾಣಿಗಳು, ಕೊರಮರು, ಸೇಂದಿಯನ್ನು ಹೊತ್ತು ಸಾಗಿಸಲು ಸಿಬ್ಬಂಧಿ ಆಳುಗಳಾಗಿ ಬಂದರು.

ಇಂದು ಸೇಂದಿಯನ್ನುಪೂಜ್ಯನೀಯವಾಗಿ ಕಾಣುತ್ತಾ ಅವರವರ ಆರಾಧ್ಯ ದೈವಗಳಿಗೆ ನೈವೇಧ್ಯಕ್ಕೆ ಇಡುವ ಸಮುದಾಯಗಳೆಲ್ಲವೂ ದುಡಿವ ಸಮುದಾಯಗಳೆ ಆಗಿವೆ. ಉದಾ: ಬೋವಿ, ಮಾದಿಗ, ಕೊರಮ, ಮಾಗೇರ ಲಂಬಾಣಿ, ಇತ್ಯಾದಿ ಸಮುದಾಯಗಳು. “ಈಡಿಗರಾದಿಯಾಗಿ ಇವರೆಲ್ಲರೂ ಸಾಮೂಹಿಕವಾಗಿ ದುಡಿಯುವ ವರ್ಗದವರಾದ್ದರಿಂದ ಇವರ ನಡುವೆ ಭಾವನಾತ್ಮಕ ಸಂಬಂಧಗಳು ಏರ್ಪಟ್ಟಿವೆ. ಇಂದಿಗೂ ಅವುಗಳು ಆಚರಣೆರಲ್ಲಿ ಉಳಿದುಕೊಂಡು ಬಂದಿವೆ”. ಮೇಲ್ವರ್ಗದವರು (ಉದಾ: ಬ್ರಾಹ್ಮಣರು ಒಕ್ಕಲಿಗರು ಇತ್ಯಾದಿ) ಸಹ ಸೇಂದಿಯನ್ನು ಲಕ್ಷ್ಮೀ ಎಂದುಕ್ಕೆಮುಗಿಯುತ್ತಾರೆ. ಹಿಂದೆ ಅವರು ಪಡೆದುಕೊಂಡ ಸಂಬಂಧ ಇಂದು ಆ ಭಾವನೆಯನ್ನು, ಆಚರಣೆಯಲ್ಲಿ ಹೇಗೋ ಉಳಿಸಿಕೊಂಡಿರಲು ಸಾಧ್ಯವಾಗಿದೆ. ೨೦-೨೧ನೇ ಶತಮಾನದಲ್ಲಿ “ಕಳ್ಳು ಬಂಡವಾಳ ಶಾಹಿಗಳ ಹಿಡಿತದಲ್ಲಿ ಸಿಕ್ಕು, ಮಹಾ ಅಪಾಯಕರ ಪಾನೀಯವಾಯಿತು. ಒಂದು ಕಾಲದಲ್ಲಿ ಆಹಾರದ ಒಂದು ಭಾಗವಾಗಿ, ಶರೀರದ ಧಣಿವನ್ನು ನಿವಾರಿಸಲು ಬಂದ ‘ಕಳ್ಳು’ ಇಂದು

ಬಂಡವಾಳಶಾಹಿಗಳ ದುರಾಸೆಯ ಫಲವಾಗಿ ಕಲಬೆರಕೆಯಾಗಿ ಅಮಲಿನ ರಾಸಾಯಿನಿಕಗಳ ಬಳಕೆಯಿಂದ ದೇಹಕ್ಕೆ ಮಾರಕವಾಗಿ ಇಂದು ಮನುಕುಲಕ್ಕೆ ದೂರವಾಗಿ ಉಳಿಯುತ್ತಿದೆ. ಇಂದು ಈ ವೃತ್ತಿಯು ಸಂಪೂರ್ಣ ಕಣ್ಮರೆಯಾಗಿ, ಗತಕಾಲದ ಸಂಬಂಧಗಳನ್ನು ಆಚರಣೆಗಳಲ್ಲಿ ಕಂಡು ಅನುಭವಿಸಬೇಕಾಗಿ ಬಂದಿದೆ.

೫. ಕಳ್ಳು ತೆಗೆಯುವ ಕ್ರಮ ಮತ್ತು ಪರಿಕರಗಳು

ಕರ್ನಾಟಕದಲ್ಲಿ ತೆಂಗು ತಾಳೆ, ಈಚಲು ಬಗಿನೆ ಮ ಗಳಿಂದ ಸೇಂದಿ ತೆಗೆಯುತ್ತಾರೆ. ಈಚಲುಮರ ಇವರಿಗೆ ಪೂಜ್ಯನೀಯ ಮರವಾಗಿದೆ.೬೦-೭೦ ಅಡಿ ಎತ್ತರವಿದ್ದು ನೀರುಜಿನುಗುವ ಭೂಮಿಯಲ್ಲಿ ಬೆಳೆಯುತ್ತದೆ. ಗಂಡು ಮತ್ತು ಹೆಣ್ಣು ಮರಗಳೆಂಬ ವಿಭಾಗಗಳಿವೆ. ಪ್ರತಿ ಮರಗಳು ೨೫ ರಿಂದ ೩೦ ವರ್ಷಗವರೆಗೆ 'ಕಳ್ಳನ್ನು' ಕೊಡುತ್ತದೆ. ಕಳ್ಳಿನ ಪ್ರಮಾಣ ಬೇಸಿಗೆಯಲ್ಲಿ ಹೆಚ್ಚಾಗಿ ಮಳೆಗಾಲದಲ್ಲಿ ಕಡಿಮೆಯಿರುತ್ತದೆ.(ವಿವರ, ದೊಡ್ಡಗಂಗಪ್ಪ, ಈಡಿಗರು-ಕಗ್ಗಲಕಟ್ಟೆ).

ಮರದಿಂದ ಕಳ್ಳುತೆಗೆಯುವಾಗ ಕೆಳಕಂಡ ಪರಿಕರಗಳನ್ನು ಬಳಸುತ್ತಾರೆ.(ಸಾಮಾನ್ಯವಾಗಿ ಬಯಲು ಸೀಮೆ ಈಡಿಗರು ಈ ಪರಿಕರಗಳನ್ನು ಬಳಸುತ್ತಾರೆ)

೧). ಪಾರಿ| ಉಡಿದೇಗಲು: ಮರದಿಂದ ಮಾಡಿದ್ದು ಬತ್ತಳಿಕೆಯಂತಿರುತ್ತದೆ. ಕತ್ತಿ ಉಳಿ, ಕಿರುಳಿಗಳನ್ನು ತಿರುಳು ತೆಗೆಯಲು ಇದರಲ್ಲಿ ಇಟ್ಟುಕೊಳ್ಳುತ್ತಾರೆ.

೨). ಮಿಣಿ ಮುಟ್ಟು- ಚರ್ಮದಿಂದ ತಯಾರಾದ ಗಟ್ಟಿ ಹಗ್ಗ. ಮರಹತ್ತಲು ಇದನ್ನು ಬಳಸುತ್ತಾರೆ. ಮಾದಿಗರು ಇದನ್ನು ಎಚ್ಚರಿಕೆಯಿಂದ ತಯಾರಿಸುತ್ತಾರೆ.

೩). ಮಸೆಗೋಲು. ಚಿಲ್ಲದಮರದಿಂದ ಉಳಿಗಳನ್ನು ಮಸೆದು ಕೊಳ್ಳಲು ತಯಾರಿಸಿ ಕೊಂಡಿರುತ್ತಾರೆ.

೪). ಗಡಿಗೆ, ಸೇಂದಿಬಾನಿ,ಏಣಿ,ಗಳನ್ನು ಬಳಸುತ್ತಾರೆ. 'ಸೇಂದಿಬಾನಿ, ಸಾಗುವಾನಿ ಮರದಿಂದ ಮಾಡಲ್ಪಟ್ಟಿರುತ್ತದೆ, ಸೇಂದಿಯನ್ನು ಅಳೆಯಲು ಸೇರು ಪಾವು- ಚಟಾಕುಗಳ ಬಳಕೆಯಿದೆ. ಕುದುರೆ ಕತ್ತೆಗಳನ್ನು ಸೇಂದಿ ಸಾಗಿಸಲು ಬಳಸುತ್ತಾರೆ. ಮಾದಿಗರೇ ತಯಾರಿಸಿದ ಪಕಾಲಿಗಳಲ್ಲಿ ಮಾತ್ರ ಹೆಂಡವನ್ನು ಸಾಗಿಸಲು ಸಾಧ್ಯ. (ಕುದರೆ, ಕತ್ತೆಗಳಲ್ಲಿ)

ಹೆಂಡ ತೆಗೆಯುವ ಕ್ರಮ: ಮಡ್ಡಿ ಈಡಿಗರು ಗೂಡು ರೇವು ವಿಧಾನವನ್ನು ಅನುಸರಿಸಿದರೆ ಬೆಲ್ಲದೀಡಿಗರು ಬಯಲು ರೇವು ವಿಧಾನವನ್ನು ಅನುಸರಿಸುತ್ತಾರೆ. ಮೊದಲು ಈಚಲು ಮರದ ಒಂದು ಭಾಗವನ್ನು ಕತ್ತಿಯಿಂದ ಸವರಿ ಸ್ವಚ್ಛ ಮಾಡಿಕೊಳ್ಳುತ್ತಿದ್ದರು. ನಂತರ ಮರದ ಮರ್ಮಭಾಗಕ್ಕೆ ಉಳಿಯಿಂದ ಕೊರೆದು ಈಚಲು ಗರಿಯಿಂದಲೇ ಸೇಂದಿಯು ಗಡಿಗೆಗೆ ಬೀಳುವಂತೆ ಮಾಡುತ್ತಿದ್ದರು. ಈಚಲುಮರ ೧೦ರಿಂದ ೨೦ ಲೀಟರ್ ವರೆಗೆ ಹೆಂಡವನ್ನು ಕೊಡುತ್ತದಂತೆ. (ವಿವರಕ್ಕೆ: ದೊಡ್ಡ ಗಂಗಪ್ಪ. ಈಡಿಗರು ಕಗ್ಗಲಕಟ್ಟೆ.) ದಿನ ಬಿಟ್ಟು ದಿನ ಗಡಿಗೆ ಕಟ್ಟುತ್ತಾರೆ.("ಕಳ್ಳು" ಶ ಬ್ದಕ್ಕೆ ಸಮಾನಾರ್ಥಕವಾಗಿ ಅನೇಕ ಪದಗಳು ಕನ್ನಡದಲ್ಲಿ ಬಳಕೆಯಲ್ಲಿವೆ. ಉದಾ: ಮಲೆನಾಡು ಭಾಗದಲ್ಲಿ "ಕಳ್ಳು" ಎಂದು ಕರೆದರೆ, ದಕ್ಷಿಣ ಕನ್ನಡದಲ್ಲಿ ಮೂರ್ತೆ ಎಂದು ಕರೆಯುತ್ತಾರೆ. ಸೇಂದಿ, ಮೂರ್ತೆ, ಸುರಿ, ಶಾಂಭವಿ, ಹೆಂಡ, ಸಿದ್ಧಿರಸ, ಮೊದಲಾದ ಶಬ್ದಗಳು ಇದೇ ಅರ್ಥವನ್ನು ಕೊಡುತ್ತವೆ). ಮಳೆಗಾಲದಲ್ಲಿ ನೀರು ಬೀಳದಂತೆ ಸೀಬಿಯಿಂದ ಮುಚ್ಚುತ್ತಾರೆ. ಬೆಲ್ಲದ ಈಡಿಗರು ಬಯಲು ರೇವು ವಿಧಾನದಿಂದ ಇಳಿಸುತ್ತಿದ್ದು ಇದು ಅಷ್ಟು ಉತ್ತಮ ಕ್ರಮವಲ್ಲವೆಂದು ಅಭಿಪ್ರಾಯವಿದೆ.

ಈಚಲು ಮರದಲ್ಲಿ ನೀರಾವನ್ನು ತೆಗೆದು ಬೆಲ್ಲ ತಯಾರಿಸುತ್ತಾರೆ. ನೀರಾವನ್ನು ಬೆಳಗಿನ ಸೂರ್ಯೋದಯದೊಳಗೆ ಇಳಿಸಿಕೊಳ್ಳಬೇಕು. ಇದು ಸಿಹಿಯಾಗಿರುತ್ತದೆ. ಬಿಸಿಲೇರಿದಂತೆ ಹುಳಿಯಾಗಿ ಹೆಂಡವಾಗುತ್ತದೆ. ತೆಂಗು, ಭಗಿನೆ, ತಾಳೆ ಮರಗಳಲ್ಲೂ ಸಾಮಾನ್ಯವಾಗಿ ಬಿಲ್ಲವರು ದೀವರು, ತೆಂಗಿನ ದೀವರು ಕಳ್ಳು ತೆಗಿಯುತ್ತಾರೆ. ಬಯಲುಸೀಮೆ ಈಡಿಗರು ಈಚಲು ಮತ್ತು ತಾಳೆ ಮರಗಳಿಂದ ಮಾತ್ರ ತೆಗೆಯುತ್ತಾರೆ. ಚಿಕ್ಕಮಗಳೂರಿನ ಮಲೆನಾಡು, ಶಿವಮೊಗ್ಗ ಜಿಲ್ಲೆಯ ಮಲೆನಾಡು ಭಾಗದಲ್ಲಿ ಭಗಿನೆ ಮರದಿಂದ ಕಳ್ಳು ತೆಗೆಯುತ್ತಾರೆ. ಶಿವಮೊಗ್ಗ ಜಿಲ್ಲೆಯಲ್ಲಿ೨೦ನೇ ಶತಮಾನದಿಂದೀಚೆಗೆ ಕಳ್ಳು ಇಳಿಸುತ್ತಿಲ್ಲ. ಕಾರಣ ಆ "ಸಸ್ಯ"ಗಳು ಅಲ್ಲಿ ಇಲ್ಲ. ತೆಂಗು ಬಗಿನೆ ಮರಗಳ ಹೊಂಬಾಳೆಗೆ ಗಡಿಗೆಯನ್ನು ಕಟ್ಟಿ ಹದಮಾಡಿ ಕಳ್ಳು ತೆಗೆಯುತ್ತಾರೆ.

ನಿಷೇಧ: ಈಡಿಗರು ಈಚಲು ವನದಿಂದ ಹೆಂಡ ತೆಗೆಯುವಾಗ ಮೂರು ಉತ್ತಮ ಮರಗಳನ್ನು ಆಯ್ಕೆ ಮಾಡಿ ಬಸವಿ ಬಿಡುತ್ತಿದ್ದರು. ಅವುಗಳನ್ನು "ಬಸವಿ ಮರ" ವೆನ್ನುತ್ತಿದ್ದರು. ಅವುಗಳಿಂದ ಹೆಂಡ ತೆಗೆದರೆ ಬಹಿಷ್ಕಾರ ಹಾಕುತ್ತಿದ್ದರು. ಇದು ಬಾಬುವ್ಯವಸ್ಥೆ ಬರುವ ಹಿಂದೆ ಇತ್ತು ಈಚೆಗೆ ಇಲ್ಲ. ಇವುಗಳಿಗೆ"ಲೇವಡಿಗೆಮರ" ವೆಂದೂ ಕರೆಯುತ್ತಿದ್ದರು.

೧. ದಕ್ಷಿಣ ಕನ್ನಡದಲ್ಲಿ ಬಿಲ್ಲವರು ತಾಳೆ, ತೆಂಗು ಮತ್ತು ಬಗಿನೆ ಮರಗಳಿಂದ ಹೆಂಡ ತೆಗೆಯುವ ಕ್ರಮವನ್ನು ಡಾ॥ ಚಂದ್ರ ಪೂಜಾರಿಯವರು ಸವಿವರವಾಗಿ ವಿವರಿಸಿದ್ದಾರೆ. ವಿವರಕ್ಕೆ ಅವರೇ ಕ್ಷೇತ್ರ ಕಾರ್ಯದಿಂದ ಸಿದ್ಧಮಾಡಿರುವ ಪ್ರಬಂಧವನ್ನು ನೋಡಬೇಕು. ಮೂರ್ತೆದಾರರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನು ಅಂಕಿ ಅಂಶಗಳೊಡನೆ ವಿವರಿಸಿದ್ದಾರೆ.(ಈ ಪ್ರಬಂದವು ಅಪ್ರಕಟಿತ.)

# ಅಧ್ಯಾಯ-೨

# ಆರ್ಥಿಕ ನೆಲೆಗಳು

## ೨.೧ ಹಿನ್ನೆಲೆ ಮತ್ತು ಸ್ವರೂಪ

ಹಿಂದೆಯೇ ತಿಳಿಸಿರುವಂತೆ ಈಡಿಗ, ಸಮುದಾಯವು ಇಡೀ ಕರ್ನಾಟಕದಲ್ಲಿ ಒಂದೇ ಬಗೆಯ ಹೆಸರಿನಿಂದ ಗುರುತಿಸಲ್ಪಡುತ್ತಿಲ್ಲ. ಬೇರೆಬೇರೆ ಹೆಸರಿನಿಂದ ಬೇರೆಬೇರೆ ವೃತ್ತಿಯಿಂದ ಇಂದು ಗುರ್ತಿಸಲ್ಪಡುತ್ತಿದೆ. ಹಾಗಾದರೆ ಇವರನ್ನೆಲ್ಲ ಈಡಿಗರು ಎಂಬ ಪ್ರಧಾನ ಹೆಸರಿನಿಂದ ಗುರ್ತಿಸುವುದು ಹೇಗೆ? ಅಥವಾ ಹೀಗೆ ಗುರ್ತಿಸುವುದು ಸರಿಯೇ? ಎನ್ನುವ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಈ ಪ್ರಶ್ನೆಗಳಿಗೆ ದೀರ್ಘವಾದ ಚರ್ಚೆಯು ಸಾಧ್ಯವಿದೆ. ಈ ಚರ್ಚೆಯ ನೆಲೆಗಳೇನೇ ಇರಲಿ. ಆ ಅಧ್ಯಯನದಲ್ಲಿ ಈಡಿಗರು ಎನ್ನುವ ಹೆಸರನ್ನು "ಹೆಂಡ ಇಳಿಸುತ್ತಿದ್ದವರೆಲ್ಲರಿಗೆ ಕೇವಲ ವೃತ್ತಿಯ ಕಾರಣಕ್ಕೆ ಮತ್ತು ಅಧ್ಯಯನದ ಅನುಕೂಲಕ್ಕೆ ಆರೋಪಿಸಿಕೊಳ್ಳಲಾಗಿದೆ. ಅಂದರೆ ಇಲ್ಲಿ 'ಈಡಿಗರು' ಎನ್ನುವ ಪದ ಕೇವಲ ಸೀಮಿತಾರ್ಥದಲ್ಲಿ ಬಳಕೆಯಾಗಿದೆ. ರಾಜ್ಯಸರ್ಕಾರವೂ ತನ್ನ ಮೀಸಲಾತಿ ನೀತಿಯನ್ನು ರೂಪಿಸುವ ಸಂದರ್ಭದಲ್ಲಿ ಇದೇ ನೀತಿಯನ್ನು ಅನುಸರಿಸಿದೆ. ಉದಾ: ಹಾವನೂರು ಆಯೋಗ, ಟಿ.ವೆಂಕಟಸ್ವಾಮಿ ಆಯೋಗ, ಮತ್ತು ಚಿನ್ನಪ್ಪರೆಡ್ಡಿ ಆಯೋಗಗಳು. ಹಿಂದುಳಿದ ವರ್ಗಗಳಿಗೆ ಮೀಸಲಾತಿಯನ್ನು ರೂಪಿಸುವ ಸಂದರ್ಭದಲ್ಲಿ, 'ಈಡಿಗ' ಎಂಬ ಪ್ರಧಾನ ಸಮುದಾಯದ ಹೆಸರಿನಲ್ಲಿ ಅದರ ೧೪ ಉಪಪಂಗಡಗಳನ್ನೂ ಸೇರಿಸಿದೆ.

ಹೀಗೆ ಕರ್ನಾಟಕಾದ್ಯಂತ ಬೇರೆ ಬೇರೆ ಹೆಸರಿನಿಂದ ಗುರ್ತಿಸಲ್ಪಡುತ್ತಿರುವ ಈಡಿಗ ಸಮುದಾಯ ಆಯಾ ಭೌಗೋಳಿಕ ಲಕ್ಷಣಗಳಿಗೆ ಅನುಸಾರವಾಗಿ ಬೇರೆಬೇರೆ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿದೆ. ವಸಾಹತೋತ್ತರ ಕಾಲದ ಸಂದರ್ಭದಲ್ಲಿ ಈ ಎಲ್ಲಾ ಪಂಗಡಗಳ ಪ್ರಧಾನ ವೃತ್ತಿಯು ಸೇಂದಿ ತೆಗೆದು ಮಾರಾಟಮಾಡುತ್ತಿರುವುದೇ ಆಗಿತ್ತು.ಈ ಬಗ್ಗೆ ಸಾಕಷ್ಟು ದಾಖಲೆಗಳು ಮಾಹಿತಿಗಳು ದೊರಕುತ್ತವೆ. ಈ ಕಾರಣಕ್ಕಾಗಿಯೇ 'ಈಡಿಗ' ಎಂಬ ಹೆಸರೂ ಪ್ರಾಪ್ತವಾಗಿದೆ. ಹೀಗೆ ಬೇರೆಬೇರೆ ಪ್ರದೇಶ ವರ್ಗದ ಜನರಾಗಿ ಇತರೆ ಜನರಂತೆಯೇ ಈ ಜನರೂ ಇಂದು ರೂಪ ಪಡೆಯುತ್ತಿದ್ದಾರೆ. ಜಾತಿಯ ದೃಷ್ಟಿಯಿಂದ ಒಂದೇ ಹೆಸರಿನಿಂದ ಇವರನ್ನು ಗುರುತಿಸಿಕೊಂಡರೂ ಆರ್ಥಿಕವಾಗಿಯಂತೂ ವಿಭಿನ್ನ ವರ್ಗದ ಜನಗಳಾಗಿ ರೂಪಗೊಂಡಿರುವುದರಲ್ಲಿ

ಎರಡುಮಾತಿಲ್ಲ. ಹೀಗೆ ವಿಭಿನ್ನ ವರ್ಗಗಳಾಗಿ ರೂಪುಗೊಂಡ ಈ ಜನರ ಅಸ್ತಿತ್ವಉತ್ಪಾದನಾ ಸಾಧನಗಳ ಒಡೆತನಗಳ ಮತ್ತು ಹಂಚಿಕೆಯ ಸಂಬಂಧದ ಸ್ವರೂಪವನ್ನು ಅವಲಂಬಿಸಿರುತ್ತದೆ. ಈ ಸಂಬಂಧದಸ್ವರೂಪವನ್ನು ಸ್ಪಷ್ಟ ಪಡಿಸಿಕೊಳ್ಳುವ ಒಂದು ಪ್ರಯತ್ನದತ್ತ ಈ ಅಧ್ಯಯನ ಭಾಗವು ಸಾಗುವ ಉದ್ದೇಶವನ್ನು ಹೊಂದಿದೆ. ಚಾರಿತ್ರಿಕವಾಗಿ ರೂಪಿಸಲ್ಪಟ್ಟ ಇವರ ಸ್ಥಾನಮಾನಗಳನ್ನು ಕುರಿತ ಧೀರ್ಘ ಚರ್ಚೆ ಸಾಧ್ಯವಾಗದೇ ಇರಬಹುದು.ಅದರ ಸ್ಪಷ್ಟಕ್ಕೆ ಇಲ್ಲಿ ಪ್ರಯತ್ನವಿದೆ.

"ಕರ್ನಾಟಕ ಪ್ರದೇಶ ಈಡಿಗರ ಸಂಘ, ಬೆಂಗಳೂರು," ಇವರು ಅಂ.ದಾಜು ಮಾಡಿರುವಂತೆ ೧೯೫೫ರ ವೇಳೆಗೆ ಕರ್ನಾಟಕದ ಈಡಿಗರ ಜನಸಂಖ್ಯೆ (ಎಲ್ಲಾ ಉಪಪಂಗಡಗಳನ್ನೂ ಒಳಗೊಂಡಂತೆ) ೩೦ ಲಕ್ಷದಿಂದ ೩೫ ಲಕ್ಷವೆಂದು ಗುರ್ತಿಸಿದೆ. ಸರ್ಕಾರದ ಖಚಿತವೆಂದು ಹೇಳಿರುವ ಮಾಹಿತಿಯ ಪ್ರಕಾರ ೧೯೮೪ ರ ಸೋಷಿಯೋ, ಎಕಾನಾಮಿಕ್ , ಎಜುಕೇಷನ್ ಸರ್ವೆಯ ವರದಿಯಂತೆ, ಈಡಿಗರ ಜನಸಂಖ್ಯೆ ಕರ್ನಾಟಕದಲ್ಲಿ ೯,೧೭, ೯೫೩ ಆಗಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಇವರು ಶೇಕಡ ೨.೫೪ ರಷ್ಟಿದ್ದಾರೆ. ಈ ಮಾಹಿತಿಯ ಪ್ರಕಾರ ಕರ್ನಾಟಕಾದ್ಯಂತ ಹರಡಿಕೊಂಡಿರುವ ಈ ಜನರು ವಿವಿಧ ಪ್ರದೇಶಗಳಲ್ಲಿ ವಿವಿಧ ಪ್ರಮಾಣದಲ್ಲಿದ್ದಾರೆ. ಈ ಪ್ರಮಾಣದ ಮಟ್ಟವೂ ಸಹ ಅವರ ಜೀವನ ವಿಧಾನವನ್ನು ನಿರ್ಧರಿಸುವಲ್ಲಿ ಸಾಕಷ್ಟು ಪಾತ್ರವಹಿಸಲು ಸಾಧ್ಯವಿದೆ. ಇದಕ್ಕೆ ಕಾರಣ ಭಾರತದ ಜಾತಿ ರಾಜಕೀಯ, ಮತ್ತು ಆರ್ಥಿಕ ವ್ಯವಸ್ಥೆಗಳೇ ಆಗಿವೆ. ಇಲ್ಲಿ"ಜಾತಿ" ಯ ಕಲ್ಪನೆಯನ್ನು ಸ್ಪಷ್ಟವಾಗಿ ವಿವರಿಸಿಕೊಳ್ಳ ಬೇಕಾಗುತ್ತದೆ. ಭಾರತದ ಚಾರಿತ್ರಿಕ ಉತ್ಪಾದನಾ ವ್ಯವಸ್ಥೆಯ ಅಂಗವಾಗಿಯೇ ಜಾತಿಯು ಹುಟ್ಟಿಕೊಂಡಿದೆ. ಅದು ಚರಿತ್ರೆಯ ಬೆಳವಣಿಗೆಯಲ್ಲಿ ಬೇರೆಬೇರೆ ಸ್ವರೂಪವನ್ನು ಪಡೆದುಕೊಳ್ಳುತ್ತಾ ಸಂಕೀರ್ಣವಾಗಿ ಪರಿಣಾಮಿಸುತ್ತಾ ಬಂದಿದೆ. ವಸಾಹತು ಶಾಹಿ ಕಾಲದ ನಂತರದಲ್ಲಿ ಭಾರತದ ಉತ್ಪಾದನಾ ಮಾದರಿ ತೀವ್ರ ಸ್ವರೂಪದಲ್ಲಿ ಬದಲಾಗುತ್ತಾ ಬಂದಿದೆ. ಇದಕ್ಕೆ ೧೯ನೇ ಶತಮಾನದ ಕೈಗಾರಿಕಾ ಕ್ರಾಂತಿಯ ಪ್ರಭಾವ ಮತ್ತು ಅಂದು ಭಾರತ ಸಂಪೂರ್ಣ ಬ್ರಿಟೀಷರ ಹಿಡಿತದಲ್ಲಿದ್ದುದೇ ಆಗಿದೆ. ಇದಕ್ಕೂ ಹಿಂದೆ ಭಾರತದಲ್ಲಿ ಊಳಿಗಮಾನ್ಯ ಶಾಹಿ ಉತ್ಪಾಧನಾ ಮಾದರಿಯು ಪೂರ್ಣವಾಗಿ ಅಸ್ತಿತ್ವದಲ್ಲಿತ್ತು. ಇಂದಿಗೂ ಭಾರತದ ಹಳ್ಳಿಗಳಲ್ಲಿ ಊಳಿಗಮಾನ್ಯ ವ್ಯವಸ್ಥೆಯೇ ಅಸ್ತಿತ್ವದಲ್ಲಿದೆ. ಈಉತ್ಪಾಧನಾ ಮಾದರಿಯು ಸಂಕೀರ್ಣಗೊಂಡ ಭಾರತದ ಜಾತಿ ವ್ಯವಸ್ಥೆಯನ್ನು ಹೆಚ್ಚು ಗಟ್ಟಿಗೊಳಿಸುತ್ತಾ ಬಂದಿದೆ. ಇದಕ್ಕೂ ಹಿಂದಿನ ಪಾಳೇಗಾರಿಕೆ ಅಥವಾ ರಾಜಶಾಹಿ ವ್ಯವಸ್ಥೆಯು ಈ ಉತ್ಪಾದನಾ ವ್ಯವಸ್ಥೆಯನ್ನು ಪೋಷಿಸಿಕೊಂಡು ಬಂದಿದೆ. ಈ ಬಗೆಯ ಉತ್ಪಾದನಾ ವಿಧಾನದಲ್ಲಿ ತೊಡಗಿದ ಪ್ರತಿಯೊಂದು ಸಮುದಾಯದ ಸಾಮೂಹಿಕ ಸಂಬಂಧವು

ಗಟ್ಟಿಗೊಂಡು ಭಾವನಾತ್ಮಕ ಸಂಬಂಧ ಗಟ್ಟಿಯಾಗಿ ರೂಪುಗೊಂಡಿರಲು ಕಾರಣವಾಗಿದೆ. ಈ ಸಮುದಾಯಗಳು ಸಮಾಜದಲ್ಲಿ ತಮ್ಮನ್ನು ಗುರ್ತಿಸಿಕೊಳ್ಳಬೇಕಾದ ಅನಿವಾರ್ಯತೆ ಎದುರಾದ ಸಂದರ್ಭದಲ್ಲಿ ತಮ್ಮ ವೃತ್ತಿಯ ಮೂಲಕವೇ ಗುರ್ತಿಸಿಕೊಳ್ಳಬೇಕಾದ ಪರಿಸ್ಥಿತಿ ಉಂಟಾಗಿದೆ. ಇಂತಹ ಚಾರಿತ್ರಿಕ ಪ್ರಕ್ರಿಯೆಯ ಒತ್ತಡದಿಂದಾಗಿ 'ಜಾತಿ'ಯು ವೃತ್ತಿಯ ಪ್ರತೀಕವಾಗಿ ಕಾಣಿಸಿಕೊಂಡು ಇಂದು ಬಹುಮುಖ ಆಯಾಮವನ್ನು ಪಡೆದುಕೊಳ್ಳುತ್ತಾ ಭಯಂಕರವಾಗಿ ಕಾಣಿಸಿಕೊಳ್ಳುತ್ತಿದೆ. ಭಾರತದ ಸಾಮಾಜಿಕ ಸಂರಚನೆಯನ್ನು ಕುರಿತು ಸಾಕಷ್ಟು ಚರ್ಚೆಗಳಾಗಿವೆ. ಈ ಚರ್ಚೆಗಳ ಸ್ವರೂಪವನ್ನು ಇಲ್ಲಿನ ಅನುಕೂಲಕ್ಕಾಗಿ ೨ ರೀತಿಯಲ್ಲಿ ಗುರ್ತಿಸಬಹುದು. ಜಾತಿಕೇಂದ್ರಿತ ಆಲೋಚನೆಯನ್ನು ಪ್ರತಿಪಾದಿಸುವ ವಿದ್ವಾಂಸರು ಭಾರತದಲ್ಲಿ ಕೇವಲ ಜಾತಿ ವ್ಯವಸ್ಥೆ ಮಾತ್ರವಿದೆ. ವರ್ಗವ್ಯವಸ್ಥೆ ಇಲ್ಲವೆನ್ನುವ ಅಭಿಪ್ರಾಯವನ್ನು ಮಂಡಿಸುತ್ತಾರೆ.(೨). ಮಾರ್ಕ್ಸ್‌ವಾದಿ ಚಿಂತಕರು ವರ್ಗ ವ್ಯವಸ್ಥೆಯನ್ನು ಪ್ರತಿಪಾದಿಸುತ್ತಾರೆ. ಇವರು ತಮ್ಮ ಚರ್ಚೆಯಲ್ಲಿ 'ಜಾತಿ'ಎನ್ನುವುದರ ಬೇರುಗಳು ಆರ್ಥಿಕ ಸಂರಚನೆಯೊಳಗಡೆಯೇ ಹುದುಗಿರುವುದರಿಂದ ಅದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ." ಎನ್ನುವ ತೀರ್ಮಾನಕ್ಕೆ ಬರುತ್ತಾರೆ.

ಎರಡನೇ ಅಭಿಪ್ರಾಯವನ್ನು ಬಹುಮಟ್ಟಿಗೆ ಒಪ್ಪಬಹುದಾದರೂ ಇಂದಿನ, ರಾಜಕೀಯ ಇತಿಹಾಸವನ್ನು ಆಮೂಲಕ ಒಟ್ಟು ಇತಿಹಾಸವನ್ನು ರೂಪಿಸುತ್ತಿರುವ ಅಂಶಗಳಲ್ಲಿ ಜಾತಿಯೂ ಒಂದಾಗಿದೆ ಎನ್ನುವುದು ನಿರ್ವಿವಾದ.

ಜಾತಿಗೆ ಅದರಷ್ಟೇ ಆದ ಬೇರುಗಳಿಲ್ಲ ನಿಜ. ಆದರೆ ಆ ಹೆಸರಿನ ಪ್ರಭಾವ ಇಂದೂ ಇದೆ ಇರುವುದಕ್ಕೆ ಕಾರಣವೂ ಇದೆ. ಮಾರ್ಕ್ಸ್ ಜಾತಿರಹಿತ ಬಂಡವಾಳಶಾಹಿ ವ್ಯವಸ್ಥೆಯನ್ನು ಕುರಿತು ಪ್ರತಿಪಾದಿಸುತ್ತಾ ಅಲ್ಲಿಯ ಶುದ್ಧ ವರ್ಗವ್ಯವಸ್ಥೆಯನ್ನು ಕುರಿತು ಹೇಳುತ್ತಾನೆ. ಅದು ಅಲ್ಲಿನ ಉತ್ಪಾದನಾ ಮಾದರಿಯನ್ನು ಅವಲಂಬಿಸಿ ಹೇಳಿದ ವ್ಯಾಖ್ಯಾನವಾಗಿದೆ. ಆದರೆ ಅದನ್ನು ಭಾರತಕ್ಕೆ ನೇರವಾಗಿ ಅನ್ವಯಿಸುವುದು ಕಷ್ಟ. ವಸಾಹತುಶಾಹಿ ವ್ಯವಸ್ಥೆ ರೂಪುಗೊಳ್ಳುವ ಹಿಂದೆ ಭಾರತದಲ್ಲಿ ಪೂರ್ಣವಾಗಿ ಊಳಿಗಮಾನ್ಯ ಶಾಹಿ ಉತ್ಪಾದನಾ ಮಾದರಿಯು ಅಸ್ತಿತ್ವದಲ್ಲಿತ್ತು. ಈ ವ್ಯವಸ್ಥೆಯೊಳಗಡೆ ಒಂದೊಂದು ಸಮೂಹ ಒಂದೊಂದು ಬಗೆಯ ವೃತ್ತಿಗೆ ಅಂಟಿಕೊಂಡಿದ್ದವು. ಉದಾ: ಕುಂಬಾರ, ಚಮ್ಮಾರ, ಒಕ್ಕಲಿಗ, ನಾಯಿಂಧ, ಇತ್ಯಾದಿ. ಒಂದು ಹಳ್ಳಿಯೊಳಗಡೆ, ಆಯಾವೃತ್ತಿ ಸಂಬಂಧದ ಪ್ರತ್ಯೇಕ ಸಮೂಹಗಳು ರಚನೆಯಾದರೂ ಈ ವಿಭಿನ್ನ ಸಮೂಹಗಳು ಪರಸ್ಪರ ಅನುಕೂಲಕ್ಕಾಗಿಯೇ ರಚನೆಗೊಂಡಂಥವು. ಉದಾ: ಕಮ್ಮಾರನನ್ನು ಬಿಟ್ಟು ಒಕ್ಕಲಿಗನಿಲ್ಲ. ಒಕ್ಕಲಿಗನನ್ನು ಬಿಟ್ಟು ಕಮ್ಮಾರ, ಬಡಿಗೇರ ನಾಯಿಂದ ಇಲ್ಲ. ಈ ಸ್ಥಿತಿಯಲ್ಲಿ ಶೋಷಕರಾದ ಭೂಮಾಲಿಕ ಅಥವಾ,

ಪಾಳೇಗಾರರ ವಿರುದ್ಧ ಇವರು ಸಂಘಟನೆಯಾಗುವ ವಿಧಾನಗಳು ಸ್ಪಷ್ಟವಾಗುತ್ತಿರಲಿಲ್ಲ. ಬದಲಾಗಿ ಪರಸ್ಪರ ಅವಲಂಬಿತರೆಂದೇ ಭಾವಿಸಲಾಗುತ್ತಿತ್ತು. ಈ ಉತ್ಪಾದನಾ ವಿಧಾನ ಶೋಷಕ ರಹಿತಸಮೂಹದ್ದಾದರೆ ಯಾವ ತಕರಾರುಗಳೂ ಮೂಲ ಭೂತವಾಗಿ ಇರುತ್ತಿರಲಿಲ್ಲ. ಆದರೆ ಇದು ಶೋಷಕ ವ್ಯವಸ್ಥೆಯಾಗಿತ್ತು ಉತ್ಪಾದನಾ ಸಾಧನಗಳ ಒಡೆತನ ಮೇಲ್ಜಾತಿಯ ಕೆಲವರಲ್ಲಿ ಕೇಂದ್ರೀಕೃತವಾಗಿತ್ತು. ಹಳ್ಳಿಗರ ಶ್ರಮವನ್ನು ಅಲ್ಲಿನ ಭೂಮಾಲೀಕ ಶೋಷಿಸುತ್ತಿದ್ದ. ಇದರ ಪರಿಣಾಮವಾಗಿ ಶೋಷಿಸಲ್ಪಟ್ಟ ವರ್ಗಗಳು ಅಂದರೆ ಭೂರಹಿತ ವೃತ್ತಿ ಆಧಾರಿತರು ಸಾಮಾಜಿಕವಾಗಿ ಕೀಳು ಜಾತಿಯವರಾದರು. ಆ ಮೂಲಕ ವಿಚಿತ್ರ ಹಿಂಸೆಗೆ ದೂಡಲ್ಪಟ್ಟರು. ಇಂದಿಗೂ ಭಾರತದಲ್ಲಿ ಆಗೀಉಳಿಗಮಾನ್ಯ ವ್ಯವಸ್ಥೆಯಿದೆ. ಭಾರತದ ಹಳ್ಳಿಗಾಡಿಗೆ ಆಧುನಿಕ ಉತ್ಪಾದನಾ ವಿಧಾನಗಳು ಸಂಪೂರ್ಣ ಪ್ರವೇಶಪಡೆದಿಲ್ಲ ಅದ್ದರಿಂದ ಇಲ್ಲಿನ ವ್ಯಕ್ತಿಪರ ಸಮೂಹಗಳು ಇಂದಿಗೂ ತಮ್ಮ ಭಾವನಾತ್ಮಕವಾದ ಸಾಮೂಹಿಕ ಸಂಬಂಧವನ್ನು ಗಟ್ಟಿಯಾಗಿ ಹಳ್ಳಿಗಳಲ್ಲಿ ಉಳಿಸಿಕೊಂಡಿದೆ.

ಭಾರತವು ಇಂದು ಅರೆಬಂಡವಾಳ ಶಾಹಿ ವ್ಯವಸ್ಥೆಯ ಉತ್ಪಾದನೆ ವಿಧಾನವನ್ನು ಹೊಂದಿದೆ. ಕೈಗಾರೀಕೀಕರಣದ ಪರವಾಗಿ ಭಾರತದ ನಗರಗಳು ಬಂಡವಾಳಗಳನ್ನು ಕೈಬೀಸಿ ಕರೆದಿವೆ. ದೇಶೀಯ ಮತ್ತು ವಿದೇಶೀಯ ಬಂಡವಾಳ ಶಾಹಿಗಳು ಈ ವಲಯದ ಕರೆಗೆ ಧಾವಿಸುತ್ತಿದ್ದಾರೆ. ಇಂಥ ನಗರ ಕೇಂದ್ರಿತ ಪ್ರದೇಶಗಳ ಕಾರ್ಖಾನೆಗಳು ವ್ಯಾಪಕವಾಗಿವೆ. ಅಲ್ಲಿನ ಕಾರ್ಮಿಕರು ಒಂದು ವರ್ಗವಾಗಿ ರೂಪಗೊಳ್ಳುತ್ತಿದ್ದಾರೆ. ಬಂಡವಾಳಿಗರು ಇವರಿಗೆ ವರ್ಗವಾಗಿ ರೂಪ ಪಡೆಯುತ್ತಿದ್ದಾರೆ. ಇವೆರಡರ ನಡುವೆ ಮಧ್ಯಮವರ್ಗವೂ ರೂಪಪಡೆಯುತ್ತದೆ. ಈವರ್ಗಗಳ ವಿಂಗಡನೆ ಸರಳ ಸಾಧ್ಯವಿಲ್ಲ ಸಂಕೀರ್ಣವಾದುದು. ಆಯಾವರ್ಗಗಳನ್ನು ಅವರವರ ಅರ್ಥಿಕ ಸಂಪನ್ಮೂಲಗಳು ನಿರ್ಧರಿಸುತ್ತವೆ.

ಈವರೆಗೆ ವರ್ಗ ಜಾತಿ ಬಗ್ಗೆ ಒಂದು ಸ್ಥೂಲವಾದ ಚರ್ಚೆ ಮಾಡಲಾಯಿತು. ಆದರೆ ವರ್ಗ ಎಂದರೇನು? ಎಂಬುದನ್ನು ಖಚಿತ ಪಡಿಸಿಕೊಳ್ಳುವುದು ಅಗತ್ಯ. ಇಲ್ಲದಿದ್ದರೆ ಅದು ಗೊಂದಲಕ್ಕೆ ಅವಕಾಶ ನೀಡುವ ಸಾಧ್ಯತೆಯಿದೆ.

ವರ್ಗ ಎಂದರೇನು? ಎನ್ನುವುದನ್ನು ಕುರಿತು ಲೆನಿನ್ ತಮ್ಮ "ಗ್ರೇಟ್ ಬಿಗಿನಿಂಗ್ " ಎಂಬ ಕೃತಿಯಲ್ಲಿ ಹೀಗೆ ವಿವರಿಸುತ್ತಾನೆ. ವರ್ಗಗಳು ಜನರ ವಿಶಾಲ ಗುಂಪುಗಳಾಗಿವೆ. ಈ ಗುಂಪುಗಳು ಒಂದು ಇನ್ನೊಂದರಿಂದ ವಿಶಿಷ್ಟವಾಗಿರುತ್ತವೆ, ಭಿನ್ನವಾಗಿರುತ್ತವೆ. ಈ ಭಿನ್ನತೆ ಅಥವಾ ವೈಶಿಷ್ಟ್ಯವು ಚಾರಿತ್ರಿಕವಾಗಿ

ರೂಪಿಸಲ್ಪಟ್ಟಸಾಮಾಜಿಕ ಉತ್ಪಾದನೆಯ ವ್ಯವಸ್ಥೆಯಲ್ಲಿ ಒಂದು ವರ್ಗದ ಸ್ಥಾನಮಾನಗಳಿಂಧ. ಮತ್ತು ಉತ್ಪಾದನೆಯ ಸಾಧನೆಗಳೊಡನೆ ಅವುಗಳ ಸಂಬಂಧಗಳಿಂದ ಮತ್ತು ಅವು ಸಾಮಾಜಿಕ ಉತ್ಪಾದನೆಯಲ್ಲಿ ನಿರ್ವಹಿಸುವ ಒಂದು ಪಾತ್ರದಿಂದ ತತ್ಪರಿಣಾಮವಾಗಿ ಸಾಮಾಜಿಕ ಸಂಪತ್ತಿನಲ್ಲಿ ಅವುಗಳಿಗೆ ಲಭಿಸುವ ಪಾಲಿನ ಒಂದು ಮೊತ್ತದಿಂದಾಗಿ ಮತ್ತು ಈ ಪಾಲನ್ನು ಅವುಹೇಗೆ ಪಡೆಯುತ್ತವೆ ಎನ್ನುವ ಹಲವು ಅಂಶಗಳಿಂದ ನಿರ್ಧರಿಸಲ್ಪಡುತ್ತದ" (ಉಲ್ಲೇಖ ದ್ವಂದ್ವಮಾನ ಮತ್ತು ಚಾರಿತ್ರಿಕ ಭೌತವಾದದ ಮೂಲ ಪಾಠಗಳು. ಪುಟ. ೩೫೭. ೧೯೮೭. ಲೇ. ಬಿವಂಬೋಗುಸ್ಲವಸ್ಕಿ, ಅನು: ಮಲ್ಲಿಕಾರ್ಜುನ ಅಮರನಾಥ ಶಾಸ್ತ್ರಿ ಮಸ್ಕಿ)

ವರ್ಗದ ಬಗ್ಗೆ ಇರುವ ವ್ಯಾಖ್ಯಾನಗಳಲ್ಲಿ ಈ ವ್ಯಾಖ್ಯಾನ ಹೆಚ್ಚು ವ್ಯಾಪಕವಾದ ಅರ್ಥವನ್ನು ಒಳಗೊಂಡಿದೆ ವರ್ಗಗಳು, ಉತ್ಪಾದನೆ ವ್ಯವಸ್ಥೆಯಲ್ಲಿ ಚಾರಿತ್ರಿಕವಾಗಿ ನಿರ್ಧಸಿರುವ ಅವುಗಳ ಸ್ಥಾನ ಮಾನಗಳು, ಉತ್ಪಾದನಾ ಮೂಲಸಾಧನಗಳೊಡನೆ ಅವುಗಳ ಸಂಬಂಧಗಳು, ಶ್ರಮದ ಸಂಘಟನೆಯಲ್ಲಿ ಅವು ನಿರ್ವಹಿಸುವ ಪಾತ್ರ, ಸಂಪತ್ತಿನಲ್ಲಿ ಅವುಗಳಿಗೆ ಲಭ್ಯವಾಗುವ ಪಾಲುಗಳಿಂದ ನಿರ್ಧಾರವಾಗುತ್ತವೆ. ಈ ನಾಲ್ಕು ಅಂಶಗಳು ವರ್ಗವನ್ನು ನಿರ್ಧರಿಸುವ ಪ್ರಮುಖ ಅಂಶಗಳು.

ದುಡಿವ ವರ್ಗದ ನೆಲೆಯಲ್ಲಿ ನಿಂತು ಇಡೀ ವ್ಯವಸ್ಥೆಯನ್ನು ಅರ್ಥೈಸಲು ಹೊರಟಾಗ ಈ ಬಗೆಯ ಆಲೋಚನಾವಿಧಾನಗಳು, ಮತ್ತು ಅವುಗಳ ಒಳನೋಟವಿರಬೇಕಾಗುತ್ತದೆ. ಭಾರತದಲ್ಲಿ ಜಾತಿಯ ಪ್ರಭಾವವಿದೆ. ಆದರೆ ಮೂಲ ಭೂತವಾಗಿ ವರ್ಗವಿದೆ. ವರ್ಗ ಪ್ರಾಥಾಮಿಕವಾದುದು ಜಾತಿ ಅನುವಂಶಿಕವಾದುದು ಎನ್ನುವುದು ಗಮನಾರ್ಹ. ಜಾತಿಗೆ ಸ್ವತಂತ್ರ ಅಗತ್ಯವಿಲ್ಲ. ಇಂಥ ಚಾರಿತ್ರಿಕ ಒತ್ತಡದ ಅನಿವಾರ್ಯದಿಂದ ಈಡಿಗರು ಅವಲಂಬಿಸಿದ್ದ ಸೇಂದಿ ಇಳಿಸುವ ವೃತ್ತಿಯೇ ಜಾತಿಯ ಪ್ರತೀಕವಾಗಿ ರೂಪುಗೊಂಡಿದೆ. ಜಾತಿಯ ಚರಿತ್ರೆಯನ್ನು ಅವಲೋಕಿಸುವಾಗ ನಮಗೆ ಅದರ ಮೂಲ ಬೇರುಗಳು ಯಾವ ನೆಲೆಯಲ್ಲಿವೆ ಎನ್ನುವುದು ಸ್ಪಷ್ಟವಾಗುತ್ತದೆ. ಜಾತಿಗೆ ಅದರದ್ದೇ ಆದ ಚೈಕಾಲುಗಳಿರದೆ, ಆರ್ಥಿಕ ಸ್ಥಿತಿಗತಿಯಲ್ಲಿ ಅದರ ಬೇರುಗಳು ಇಳಿದುಕೊಂಡಿರುವುದು ಸ್ಪಷ್ಟವಾಗುತ್ತದೆ. "ಈಡಿಗ ಜಾತಿಯ" ಅಸ್ಥಿತ್ವವೂ ಇದಕ್ಕಿಂತ ಭಿನ್ನವೇನೂ ಅಲ್ಲ.

ಕರ್ನಾಟಕಾದ್ಯಂತ ಈಡಿಗರ ಆರ್ಥಿಕ ನೆಲೆಗಳನ್ನು ಗುರುತಿಸುವಾಗ ನಮಗೆ ಸಾಕಷ್ಟು ಸಮಸ್ಯೆಗಳು ಎದುರಾಗುತ್ತವೆ. ಇವರು ಒಂದು ಭೌಗೋಳಿಕ ಪ್ರದೇಶದಿಂದ ಮತ್ತೊಂದು ಭೌಗೋಳಿಕ ಪ್ರದೇಶಕ್ಕೆ ತೀರಾ ಭಿನ್ನವಾದ ರೀತಿಯಲ್ಲಿ ಅಂಟಿಕೊಂಡಿದ್ದಾರೆ. ಅಂದ ಮೇಲೆ ಈ ಎಲ್ಲರನ್ನೂ ಒಂದೇ ರೀತಿಯಲ್ಲಿ ನೋಡಲು

ಸಾಧ್ಯವಿಲ್ಲ. ಇಲ್ಲಿ ನಮ್ಮ ಮೊದಲ ಪ್ರಶ್ನೆಯೆಂದರೆ ಯಾವಯಾವ ಪ್ರದೇಶದಲ್ಲಿ ನೆಲೆಸಿದ್ದಾರೆ? ಯಾವ ಯಾವ ಸ್ಥಿತಿಯಲ್ಲಿದ್ದಾರೆ? ಮತ್ತು ಏಕೆ ಹಾಗಿದ್ದಾರೆ? ಎನ್ನುವುದು.

ಇವರು ರಾಜ್ಯಾದ್ಯಂತ ಏಕರೀತಿಯ ಪ್ರಮಾಣದಲ್ಲಿ ಹರಡಿಕೊಂಡಿಲ್ಲ. ಈ ಕಾರಣಕ್ಕೆ ಇಂದು ಇವರ ಆರ್ಥಿಕ ಚಟುವಟಿಕೆಗಳೂ ಒಂದೇ ಬಗೆಯಲ್ಲಿ ಇಲ್ಲ ಎನ್ನುವುದು ಸ್ಪಷ್ಟ ಸಂಗತಿ. ಹಾಗಾದರೆ ೧). ಇವರು ಯಾವ ಯಾವ ಪ್ರದೇಶಗಳಲ್ಲಿ ಎಷ್ಟೆಷ್ಟು ಪ್ರಮಾಣದಲ್ಲಿದ್ದಾರೆ ಎನ್ನುವುದುನ್ನು ಸ್ಪಷ್ಟ ಮಾಡಿಕೊಳ್ಳಬೇಕು. ೨). ಎರಡನೆಯದಾಗಿ, ಹೀಗೆ ನೆಲೆಸಿರುವವರ ಹಿಂದಿನ ಮತ್ತು ಇಂದಿನ ಅರ್ಥಿಕ ಚಟುಚಟಿಕೆಗಳೇನು? ಎನ್ನುವುದನ್ನು ಖಚಿತ ಪಡಿಸಿಕೊಳ್ಳುವುದು. ಮತ್ತು ೩). ಯಾಕಾಗಿ ಇವರು ಈ ಬಗೆಯ ಆರ್ಥಿಕವ್ಯವಸ್ಥೆಯನ್ನು ರೂಪಿಸಿಕೊಂಡಿದ್ದಾರೆ, ಎನ್ನುವುದನ್ನು ಗುರ್ತಿಸುವುದು. ಇದಕ್ಕೆ ಕಾರಣಗಳನ್ನು ಕಂಡುಕೊಳ್ಳುವುದು. ಇವು ಈ ಅಧ್ಯಯನದ ಪ್ರಮುಖ ಸಮಸ್ಯೆಗಳು.

ಈಡಿಗರು ಯಾವ ಯಾವ ಪ್ರಮಾಣದಲ್ಲಿ ಯಾವಯಾವ ಪ್ರದೇಶದಲ್ಲಿದ್ದಾರೆ ಎನ್ನುವುದನ್ನು ಸರ್ಕಾರ ಕೊಡುವ ಅಂಕಿ ಅಂಶಗಳಿಂದಲೇ ಸ್ಪಷ್ಟ ಪಡಿಸಿಕೊಳ್ಳಬಹುದು. ಉದಾ: ೧೯೮೪ ರ Socio econoimic cum Edycstion, Inrvey ವರದಿಯು ತಯಾರಿಸಿರುವ ಜಿಲ್ಲಾವಾರು ಜಾತಿ ಜನಸಂಖ್ಯಾ ಪಟ್ಟಿಯನ್ನು ತೆಗೆದು ಕೊಳ್ಳಲಾಗಿದೆ. ಈ ಪಟ್ಟಿಯು ಜಿಲ್ಲಾವಾರು ಈಡಿಗರ ಪಟ್ಟಿಯನ್ನು ಹೀಗೆ ಕೊಡುತ್ತದೆ.

| ಜಿಲ್ಲೆ | ಈಡಿಗರ ಜನಸಂಖ್ಯೆ | ಜಿ. ಒಟ್ಟುಜನ ಸಂ. |
|---|---|---|
| ೧). ಬೆಂಗಳೂರು | - ೨೬೮೨೪ | - ೪೨,೮೫,೧೮೫ |
| ೨). ಬೆಳಗಾಂ | - ೧೧೨೮ | - ೨೮,೬೧,೧೦ |
| ೩). ಬಳ್ಳಾರಿ | - ೦೯೨೩೪ | - ೧೪,೬೯,೬೩೮ |
| ೪). ಬೀದರ್ | - ೦೧೭೫೨ | - ೧೦,೧೬, ೫೬೯ |
| ೫). ಬಿಜಾಪುರ | -೦೩೭೩೫ | - ೨೫,೦೫, ೦೫೮ |
| ೬). ಚಿಕ್ಕಮಗಳೂರು | -೩೨೬೬೩ | - ೯೦,೯೬,೭೨ |
| ೭). ಚಿತ್ರದುರ್ಗ | - ೦೮೫೪೯ | - ೧೮,೦೯೯೯ |
| ೮). ದಕ್ಷಿಣ ಕನ್ನಡ | -೪,೨೫,೬೬೮ | - ೨೪,೨೩,೩೧೫ |
| ೯). ಧಾರವಾಡ | - ೦೪೮೧೭ | - ೨೭,೮೩,೭೪೧ |
| ೧೦). ಗುಲ್ಬರ್ಗ | - ೧೭,೮೭೧ | -೨೦,೧೬, ೩೭೦ |
| ೧೧). ಹಾಸನ | - ೨೦,೪೩೦ | -೧೩,೪೫,೦೯೧ |
| ೧೨). ಕೊಡಗು | - ೨೫,೪೦೫ | -೩೯,೮೨,೮೫ |
| ೧೩). ಕೋಲಾರ | - ೦೭೮೮೮ | - ೧೮,೯೫,೫೩೬ |
| ೧೪). ಮಂಡ್ಯ | - ೦೭೬೮೯ | -೧೪,೦೦,೨೧೦ |
| ೧೫). ಮೈಸೂರು | - ೧೨,೪೭೩ | - ೨೪,೭೧, ೮೩೪ |
| ೧೬). ರಾಯಚೂರು | - ೨೧,೯೮೬ | - ೧೮,೩೬,೦೧೬ |
| ೧೭). ಶಿವಮೊಗ್ಗ | - ೧.೨೭, ೮೪೩ | - ೧೬,೦೯,೪೧೪ |
| ೧೮). ತುಮಕೂರು | - ೧೪, ೬೫೧ | - ೨೦,೨೧,೪೫೭ |
| ೧೯). ಉತ್ತರಕನ್ನಡ | - ೧. ೪೮,೩.೨೭ | - ೧೦,೬೬,೧೯೬ |
| ರಾ. ಒಟ್ಟು ಜನಸಂ. | ೯.೧೭, ೯೫೩ | ಶೇ - ೧೦೦ |

ರಾ. ಜನಸಂಖ್ಯೆ. - ೨.೫೪ ಈ ಪಟ್ಟಿಗೆ ಬೇಕಾದ ಮಾಹಿತಿಯನ್ನು Report of the Second Backward classes Commission -III Pi- ೫೨ to ೫೭- ೧೯೮೬ ದಿಂದ ತೆಗೆದುಕೊಳ್ಳಲಾಗಿದೆ.

ಈ ಪಟ್ಟಿಯನ್ನು ಅವಲೋಕಿಸಿದಾಗ ಈಡಿಗರು ಯಾವ ಯಾವ ಜಿಲ್ಲೆಗಳಲ್ಲಿ ಯಾವ ಪ್ರಮಾಣದಲ್ಲಿದ್ದಾರೆಂಬುದು ತಿಳಿಯುತ್ತದೆ. ಈ ಅಂಕಿ ಅಂಶಗಳ ಆಧಾರದ ಮೇಲೆಯೇ ಇಂದಿನ ಜನಸಂಖ್ಯೆಯ ಪ್ರಮಾಣವನ್ನು ಊಹಿಸಬಹುದಾಗಿದೆ. ೧೯೮೪ರ ಮೇರೆಗೆ ರಾಜ್ಯದಲ್ಲಿ ಈಡಿಗರ ಜನಸಂಖ್ಯೆ ೯,೧೭,೯೫೩ ಆಗಿದ್ದು ರಾಜ್ಯದ ಒಟ್ಟು ಜನಸಂಖ್ಯೆಯ ಶೇಕಡ ೨,೫೪ ಇದ್ದಾರೆ. ೧೯೯೫ ರಲ್ಲಿ ಆರ್ಯ ಈಡಿಗರ ಸಂಘ, ಬೆಂಗಳೂರು ಇವರ ಅಂದಾಜು ಪ್ರಕಾರ ೩೦ ರಿಂದ ೩೫ರವರೆಗೆ ಇದ್ದಾರೆ. ಅಂದರೆ ೧೯೯೬ ರ ವೇಳೆಗೆ ಇವರ ಸಂಖ್ಯೆ ೧೯೮೪ ರ ಸಂಖ್ಯೆಗಿಂತ ನಾಲ್ಕು ಪಟ್ಟು ಹೆಚ್ಚಾಗಿರುವುದು ಕಂಡು ಬಂದಿದೆ. ಇಂದಿನ ಅಂದಾಜು ಪ್ರಕಾರ ರಾಜ್ಯದ ಜಾತಿವಾರು ಜನಸಂಖ್ಯೆಯಲ್ಲಿ ನಾಲ್ಕನೇ ಸ್ಥಾನವನ್ನು ಈಡಿಗರು ಪಡೆದುಕೊಂಡಿದ್ದಾರೆಂದು ತಿಳಿದು ಬರುತ್ತದೆ. (ವಿವರಗಳಿಗೆ ನೋಡಿ, ಕರಪತ್ರ, ಸುವರ್ಣ ಮಹೋತ್ಸವ ಸಂದರ್ಭ. ೧೯೯೫. ಪ್ರ- ಆರ್ಯ ಈಡಿಗರ ಸಂಘ ಬೆಂಗಳೂರು ಈ ಮತ್ತು ' ಈಡಿಗ' ಸುವರ್ಣ ಮಹೋತ್ಸವ ಸಂಚಿಕೆ. ೧೯೯೫ ಪು ೫೦).

ಮತ್ತೊಂದು ಮುಖ್ಯ ವಿಷಯ ಈ ಪಟ್ಟಿಯಲ್ಲಿ ತಿಳಿಯುತ್ತದೆ. ಹೀಗೆ ಜಿಲ್ಲಾವಾರು ಹರಡಿಕೊಂಡಿರುವ ಈ ಜನರು ಕೆಲವು ಜಿಲ್ಲೆಗಳಲ್ಲಿ ಒಟ್ಟರೆ ಜಿಲ್ಲೆಯ ಜನಸಂಖ್ಯೆಯಲ್ಲೇ ಬಹುಸಂಖ್ಯಾತರಾಗಿದ್ದಾರೆ ಉದಾ: ದಕ್ಷಿಣ ಕನ್ನಡ ಜಿಲ್ಲೆ, ಶಿವಮೊಗ್ಗ ಜಿಲ್ಲೆ, ಉತ್ತರಕನ್ನಡ ಜಿಲ್ಲೆ. ಚಿಕ್ಕಮಗಳೂರು, ಗುಲ್ಬರ್ಗ, ಹಾಸನ, ಕೊಡಗು, ಮೈಸೂರು, ರಾಯಚೂರು , ತುಮಕೂರು ಜಿಲ್ಲೆಗಳಲ್ಲಿ ತೀರಾ ಬಹುಸಂಖ್ಯಾರತೂ ಅಲ್ಲದ ತೀರಾ ಅಲ್ಪ ಸಂಖ್ಯಾತರೂ ಅಲ್ಲದ ಸ್ಥಿತಿಯಲ್ಲಿದ್ದಾರೆ. ಬೆಳಗಾಂ, ಬಳ್ಳಾರಿ, ಬೀದರ್ , ಬಿಜಾಪುರ, ಚಿತ್ರದುರ್ಗ, ಧಾರವಾಡ, ಕೋಲಾರ ಮಂಡ್ಯ ಜಿಲ್ಲೆಗಳಲ್ಲಿ ಅಲ್ಪ ಸಂಖ್ಯಾತರಾಗಿ ಕಾಣಬರುತ್ತಾರೆ. ಹೀಗೆ ಜಿಲ್ಲಾವಾರು ಪ್ರಮಾಣಗಳನ್ನು ಗುರ್ತಿಸಲು ಕಾರಣವಿದೆ. ಇಂದು ಜಾತಿವಾರು ಪ್ರಾಮಾಣವು ಇಂದಿನ ರಾಜಕೀಯ ಹಿನ್ನಲೆಯಿಂದ ಹೆಚ್ಚಿನ ಮಹತ್ವವನ್ನು ಪಡೆದು ಕೊಳ್ಳುತ್ತದೆ. ದಕ್ಷಿಣ ಕನ್ನಡ, ಶಿವಮೊಗ್ಗ ಉತ್ತರ ಕನ್ನಡ ಜಿಲ್ಲೆಯ ಅರ್ಥಿಕ ಸ್ಥಿತಿಗತಿಗಳಿಗೆ ರಾಜಕೀಯ ಪ್ರಭಾವವೂ ಇದ್ದು ಅಲ್ಪ ಸಂಖ್ಯಾತ ಜಿಲ್ಲೆಯ ಈಡಿಗರಿಗಿಂತ ಹೆಚ್ಚು ವ್ಯತ್ಯಾಸವಿರುವುದು ಕಾಣುತ್ತದೆ. ಇನ್ನು ಮಧ್ಯಮ ಪ್ರಮಾಣದಲ್ಲಿರುವ ಜಿಲ್ಲೆಗಳಲ್ಲಿ ಅವರ ಆರ್ಥಿಕ ಸ್ಥಿತಿಯಲ್ಲಿ ಬಹುತೇಕ ತೂಗುಯ್ಯಾಲೆಯಲ್ಲೇ ಇರುತ್ತದೆ. ಒಟ್ಟು ರಾಜ್ಯದಲ್ಲಿ ಈಡಿಗರು ಬಹುಸಂಖ್ಯಾತರೂ, ಅಲ್ಪ ಸಂಖ್ಯಾತರೂ ಮತ್ತು ಮಧ್ಯಮ ಪ್ರಮಾಣದವರಾಗಿಯೂ ಹರಡಿಕೊಂಡಿದ್ದಾರೆ. ಇದಕ್ಕನುಗುಣವಾಗಿ ಅವರ ಅರ್ಥಿಕ ವ್ಯವಸ್ಥೆಯು ಯಾವ ಸ್ಥಿತಿಯಲ್ಲಿ ರೂಪಗೊಂಡಿದೆ ಎನ್ನುವುದನ್ನು ಗುರ್ತಿಸಬೇಕಿದೆ.

## ೩.೨ ವಸಾಹತು ಶಾಹಿ ಕಾಲದ ಆರ್ಥಿಕ ನೆಲೆಗಳು
## (ಪ್ರಾಚೀನ ಕಾಲದಿಂದ ವಸಾಹತು ಶಾಹಿಯವರೆಗೆ)

ಈಡಿಗರು ತಮ್ಮ ವಂಶಪಾರಂಪರಿಕ ವೃತ್ತಿಯಾದ ಸೇಂದಿ ಇಳಿಸಿ ಮಾರುವುದನ್ನೇ ತಮ್ಮ ಕಸುಬನ್ನಾಗಿ ಮಾಡಿಕೊಂಡು ಬಂದವರು. ಇದಕ್ಕೆ ಸಾಕಷ್ಟು ವಿವರಗಳು ಧಾಖಲೆಗಳು ದೊರೆತಿವೆ. ಈ ವೃತ್ತಿಗೆ ಒಂದು ಸುಧೀರ್ಘ ಚರಿತ್ರೆಯೇ ಇದೆ. ವೇದ ಕಾಲದ ವೇಳೆಗಾಗಲೇ ಈ ವೃತ್ತಿ ಪ್ರಸಿದ್ಧಿಯನ್ನು ಪಡೆದಿತ್ತು. ದೇವತೆಗಳು ಇದನ್ನು "ಸಿದ್ಧಿರಸ"ವೆಂದು ಕರೆಯುತ್ತಿದ್ದರು. ಅವರಿಗೆ ಇದು ಹೆಚ್ಚು ಪ್ರಿಯವಾದ್ದರಿಂದ ಇದನ್ನು ಮರದಿಂದ ತೆಗೆಯುವ ಜನರಿಗೆ ಪಾನಕ್ಕೆ ನಿಷೇಧವೂ ಇತ್ತು. ಅಂದರೆ ಈ ವೇಳೆಗಾಗಲೇ ಇದು ಪ್ರಬಲ ವರ್ಗದವರ ವಶವಾಗಿತ್ತು. ಈಡಿಗರಿಗೆ, ಈ ಪಾನೀಯ ನಿಷೇಧವಾಗಿತ್ತು. ಅತ್ರಿ ಮಹರ್ಷಿಯ ಮಗನಾದ ಕೌಂಡಿಣ್ಯ, ಈ ಕಳ್ಳನ್ನು ಸಿದ್ಧಿರಸವೆಂಬ ಹೆಸರಿನಲ್ಲಿ ತೆಗದುಕೊಟ್ಟು ಅವರಿಂದ ಮನ್ನಣೆ ಪಡೆದುಕೊಂಡಿದ್ದನು. ಆನಂತರ ಅವರ ವಂಶಸ್ಥರಾದ ಕಾಟಮರಾಜ, ರಾಜಗೋಪಲಗೌಡ, ದಾನಾರ ಗೌಡ, ಮೊದಲಾದವರು ರಾಜರಾಗಿ ಮೆರೆದರೂ, ಕುಲಕಸಬನ್ನು ನಡೆಸಿಕೊಂಡು ಬಂದರು. (ವಿವರಗಳಿಗೆ ನೋಡಿ, ಈಡಿಗ ಜನಾಂಗದ ಚರಿತ್ರೆ. ಪು.೩ರಿಂದ ೧೩,ಲೇ. ಇ. ಹನುಮಂತಯ್ಯ- ೧೯೭೯).

ಹೀಗೆ ಆರ್ಯರ ಅಥವಾ ವೈದಿಕರ ಹಿಡಿತದಲ್ಲಿದ್ದ ಈಡಿಗರ ಚರಿತ್ರೆಗೆ ಮೇಲ್ಕಂಡ ವಿವರಗಳು ಒಳನೋಟಗಳನ್ನು ಕೊಡುತ್ತವೆ. ಅಂತೆಯೇ ಇದಕ್ಕೆ ಪೂರಕವಾಗಿ ಜನಪದಕಥೆಗಳೂ ಲಭ್ಯವಾಗಿವೆ. ಹಿಂದಿನ ಅಧ್ಯಯನದಲ್ಲಿ ಕಥೆಯ ವಿವರಗಳನ್ನು ಕೊಡಲಾಗಿದೆ. ಆದರೆ ಈಡಿಗ ಹೆಸರಿನಡಿಯಲ್ಲಿರುವ ಇತರೆ ಉಪಪಂಗಡಗಳಾದ, ದೀವರು ಬಿಲ್ಲವರು, ನಾಮಧಾರಿಗಳು ಕುಡಿಯರು, ಮೊದಲಾದವರಮೇಲೆ, ಈ ಕಥೆಗಳು ಯಾವ ಚಾರಿತ್ರಿಕ ವಿವರಗಳನ್ನೂ ನೀಡುವುದಿಲ್ಲ. ಬದಲಾಗಿ ಮಧ್ಯಕಾಲದಿಂದ ಈಚೆಗೆ, ಈ ಪಂಗಡಗಳಿಗೆ ಸಂಬಂಧಿಸಿದಂತೆ, ಕಥೆಗಳು ಮತ್ತಿತರೆ ವಿವರಗಳು ದೊರಕುತ್ತವೆ. ಇವು ಆಂಧ್ರಮೂಲದ ಈಡಿಗರಿಗಿಂತ ವಿಭಿನ್ನವಾದ ಚಾರಿತ್ರಿಕ ಒಳನೋಟವನ್ನು ಕೊಡುತ್ತವೆ.

ಬಿಲ್ಲವರ ಕಸುಬಿಗೆ ಸಂಬಂಧಿಸಿದಂತೆ ಕೋಟಿ ಚನ್ನಯ್ಯರ ಕಥೆಗಳಲ್ಲಿ ವಿವರಗಳು ದೊರಕುತ್ತವೆ. ಪಂಜೆ ಮಂಗೇಶರಾಯರು ಕೋಟಿ ಚನ್ನಯ್ಯ ಎಂಬ ಕಾದಂಬರಿಯಲ್ಲಿ ಅವರ ವೃತ್ತಿಗೆ ಸಂಬಂಧಿಸಿದ ವಿವರಗಳನ್ನು ಕೊಡುತ್ತಾರೆ. ಎಂ. ದೇಜಪ್ಪನವರು 'ಈಡಿಗ' ಸವರ್ಣ ಸಂಚಿಕೊಂದಕ್ಕೆ ನೀಡಿರುವ ಲೇಖನದಲ್ಲಿ[೯] ಈ ಬಗ್ಗೆ

ವಿವರಗಳಿವೆ. ಈ ಪ್ರಕಾರ, ಬಿಲ್ಲವರು ವೈದ್ಯರು ಆಗಿದ್ದರು, ಬೇಟೆಗಾರರು, ಮತ್ತು ಮೂರ್ತೆ ಇಳಿಸುವವರೂ ಆಗಿದ್ದರು. ದೇಪಿಬೈದ್ಯತಿ ಮತ್ತು ಸಾಯಿ ಬೈದ್ಯರ ಜೀವನ ವಿವರಗಳಲ್ಲಿ ಇದು ಪ್ರಕಟವಾಗುತ್ತದೆ. ಮೂಲತಃ ಮಾರ್ತೆ ಧಾರನಾದ ಸಾಯಿ ಬೈದ್ಯ ತನ್ನ ಜೀವನ ನಿರ್ವಹಣೆಗಾಗಿ ಇತರೆ ಕಸುಬುಗಳನ್ನು ರೂಢಿಸಿಕೊಂಡಿದ್ದಾನೆ. ಮೂರ್ತೆ ಇಳಿಸಿಕೊಂಡು ಕಾಡಿನಲ್ಲಿರುವ ಸಾಯಿಬೈದ್ಯ, ತನ್ನಬಿಡುವಿನ ವೇಳೆಯಲ್ಲಿ ಬೇಟೆಯನ್ನು, ಇತರೆ ಸಂದರ್ಭದಲ್ಲಿ ಕಾಡಿನ ಗಿಡಮೂಲಿಕೆಗಳನ್ನು ಬಳಸಿಕೊಂಡು ಮದ್ದನ್ನು ಕೊಡುವ ಕೆಲಸವನ್ನು ಮಾಡುತ್ತಿದ್ದುದು ಸಹಜವೇ. ಅಂದಮಾತ್ರಕ್ಕೆ ಸಾಯಿಬೈದ್ಯ ಜೀವನ ನಿರ್ವಹಣೆಗಾಗಿ ಬೇಟೆ ಮತ್ತು ಮದ್ದು ಕೊಡುವ ಕೆಲಸವನ್ನೇ ಅವಲಂಬಿಸಿದ್ದನೆಂದು ಹೇಳಲಾಗದು. ಏಕೆಂದರೆ ಅವು ಅಂದಿನ ಸಂದರ್ಭದಲ್ಲಿ ಜೀವನ ನಿರ್ವಹಣೆಗೆ ಅವಶ್ಯವಾದ ಸಂಪಾದನೆಯನ್ನು ಗಳಿಸಿಕೊಡುತ್ತಿದ್ದವೆಂದು ಹೇಳುವುದು ಕಷ್ಟ. ಸಾಯಿ ಬೈದ್ಯ ಮೂಲಕಸುವಾಗಿ ಮೂರ್ತೆಯನ್ನು ಆನುಷಂಗಿಕ ಕಸುಬಾಗಿ ವೈದ್ಯವೃತ್ತಿ ಮತ್ತು ಬೇಟೆಯನ್ನು ಅವಲಂಬಿಸಿಕೊಂಡಿರುವ ಸಾಧ್ಯತೆ ಇದೆ. ಇದಕ್ಕೆ ಪೂರಕವೆಂಬಂತೆ ಇಂದಿಗೂ ದಕ್ಷಿಣ ಕನ್ನಡದಲ್ಲಿಯ ಬಿಲ್ಲವರು ಮೂಲಕಸುಬಾಗಿ ಮೂರ್ತೆಯನ್ನು ತೆಗೆದು ಮಾರುತ್ತಿದ್ದಾರೆ. ಜೀವನ ನಿರ್ವಹಣೆಗೆ ಇದು ಬಹುತೇಕ ಬಿಲ್ಲವರಿಗೆ ಆಧಾರವೂ ಆಗಿದೆ. (ಭೂಮಸೂದೆ ನಂತರ ಕೆಲವರ ಸ್ಥಿತಿ ಸುಧಾರಿಸಿದ್ದು ಅವರಿಗೆ ಮೂರ್ತೆ ಇಳಿಸುವುದು ಅನುವಂಶಿಕ ಕಸುಬಾಗಿರಬಹುದು). ಅದರೆ ವಸಾಹತು ಪೂರ್ವ ಕಾಲದ ಸ್ಥಿತಿಯಲ್ಲಿ ಮೂರ್ತೆಯೋ ಇವರ ಮೂಲಕಸುಬು. ಅಂದಿನ ಭೂಮಿಯು ಪಾಳೇಗಾರರ ಮತ್ತು ಭೂಮಾಲಿಕರ ವಶದಲ್ಲಿತ್ತು . ಅದು ಬಿಲ್ಲವರಿಗೆ ಲಭಿಸುವುದು ಸುಲಭಸಾಧ್ಯವಾಗಿರಲಿಲ್ಲ

ದೀವರು ಮತ್ತು ನಾಮಧಾರಿಗಳ ಕಸುಬು ಸ್ವಲ್ಪ ಭಿನ್ನವೆನ್ನುವಂತೆ ತೋರುತ್ತದೆ. "ದೀವರು ನಾಮಧಾರಿಗಳು ಮೂಲತಃ ಬೇರೆಯಲ್ಲ. ಇವರು ಸಿಂಹಳದಿ[illegible] ಬಂದರೆಂಬ ಅಭಿಪ್ರಾಯವೂ ಇದೆ". ಇವರನ್ನು ಹಿಂದೆ ಹಳೇ ಪೈಕರೆಂದು ಕರೆಯುತ್ತಿದ್ದರಂತೆ. ಹಳೇ ಪೈಕರು ಎನ್ನುವ ಅರ್ಥ. ಹಳೆಯ ಸಿಪಾಯಿಗಳು ಎನ್ನುವ ಅರ್ಥವನ್ನೂ ಕೊಡುತ್ತದೆ. ಅಂದರೆ ಇವರು ಸೈನಿಕ ವೃತ್ತಿಯಲ್ಲಿದ್ದವರು ಎಂದಾಯಿತು. ಕೆಲವು ಶಾಸನಗಳು ಮತ್ತು ಮಧ್ಯಕಾಲೀನ ಕಾವ್ಯಗಳಲ್ಲಿ ದೀವರ ಉಲ್ಲೇಖವಿದೆ. ಪೈಕರು ಮೂಲತಃ ಪಶುಪಾಲನೆಯವರು ಎನ್ನುವ ಅರ್ಥವನ್ನು ಕೊಡುತ್ತದೆ. ಪಶುಪಾಲನೆ ಬೇಸಾಯ, ಕ್ಷಾತ್ರ ವೃತ್ತಿಗಳನ್ನು ಅವಲಂಬಿಸಿದವರು ಎನ್ನುವುದಕ್ಕೆ ವಿವರಗಳು ದೊರಕುತ್ತವೆ. ಬೇಟೆ ಇವರ ಆನುವಂಶಿಕ ಕಸುಬು. ತೆಂಗಿನ ಮರದಿಂದ ಸೇಂದಿ ತೆಗೆದು ಮಾರುವುದು ಸಹ ಇವರ ಅನುವಂಶಿಕ ಕಸುಬುಗಳಲ್ಲಿ ಒಂದಾಗಿದೆ. ಮೂಲತಃ ಇವರು ಕೃಷಿಕರೇ ಆಗಿದ್ದಾರೆ, ಬಹುಸಂಖ್ಯಾತರಾಗಿದ್ದು ಭೂಮಿಯನ್ನು ಸ್ವಲ್ಪ ಪ್ರಮಾಣದಲ್ಲಿ ಪಡೆದುಕೊಂಡಿರಲು ಸಾಧ್ಯವಾಗಿದೆ. ಹಾಗಾಗಿ

ಸೇಂದಿ ಪಶುಪಾಲನೆ ಬೇಟೆ ಕಸುಬುಗಳು ಉಪಕಸುಬುಗಳಾಗಿಯೂ, ವ್ಯವಸಾಯ ಇವರ ಪ್ರಾಥಮಿಕ ಕಸುಬಾಗಿಯೂ ರೂಪುಗೊಂಡಿದೆ. ( ಮೇಲಿನ ವಿವರಗಳಿಗೆ ಸಂಬಂಧಿಸಿದಂತೆ ನೋಡಿ, ಈಡಿಗ, ಸುವರ್ಣ ಮಹೋತ್ಸವ ಸಂಚಿಕೆ- ೧೯೯೫ ಪುಟ= ೨೮-೨೯). ಉತ್ತರಕನ್ನಡ ಜಿಲ್ಲೆಯಲ್ಲಿರುವವರನ್ನು ತೆಂಗಿನ ದೀವರೆಂದು ಕರೆಯುತ್ತಾರೆ. ಕಾರಣ ಇವರು ಅಂಕೋಲ, ಬಟ್ಕಳ, ಹೊನ್ನಾವರಗಳಲ್ಲಿ ತೆಂಗಿನ ಮರಗಳು ಹೆಚ್ಚಾಗಿ ಬೆಳೆಸುತ್ತಾರೆ. ಸಾಕಷ್ಟು ಸಂಖ್ಯೆಯ ತೆಂಗನ್ನು ಬೆಳೆದು ಅದರಿಂದ ಸೇಂದಿಯನ್ನು ತೆಗೆಯುವ ಇವರು ತೆಂಗಿನ ದೀವರಾದರು.

ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ಹೊಸನಗರ, ತೀರ್ಥಹಳ್ಳಿ ತಾಲ್ಲೂಕ್ ಗಳಲ್ಲಿ ದೀವರನ್ನು "ಕಾನುದೀವ"ರೆಂದು ಕರೆಯಲಾಗುತ್ತಿದೆ. ಇವರು ಸೈನ್ಯದಿಂದ ಹೊರಬಿದ್ದ ನಂತರ ಕಾಡುಸೇರಿ ಅಲ್ಲಿಯೇ ಜಮೀನು ಮಾಡಿಕೊಂಡು ಬಂದವರು. ಕಾಡಿನಲ್ಲಿದ್ದ ಬಗಿನೆ ಮರಗಳಿಂದ ತಮ್ಮ ಬಿಡುವಿನ ವೇಳೆಯಲ್ಲಿ ಸೇಂದಿತೆಗೆದು ಮಾರುವ ಕಸುಬನ್ನು ಮಾಡುತ್ತಿದ್ದರು. ಆದರೆ ಈ ಪ್ರದೇಶದ್ಲಲಿ ೧೯ನೇ ಶತಮಾನದ ವೇಳೆಗೆ ಬಗಿನೆ ಸಸ್ಯಗಳು ಕಾಣೆಯಾಗುತ್ತಿದುದು ಕಂಡು ಬಂದಿದೆಯೆಂದು ವಕ್ತೃಗಳು ಹೇಳುತ್ತಾರೆ. ಬಹುಶಃ ಕಾಡೆಲ್ಲಾ ಊಳುವ ಭೂಮಿಯಾಗಿ ಮಾರ್ಪಟ್ಟಾಗ ಈ ಸಸ್ಯಗಳ ನಾಶವಾಗಿರಬೇಕು, ಅಲ್ಲಿಯ ರೈತರ ಅನೇಕ ಅವಶ್ಯಕತೆಗಳಿಗಾಗಿ ಬೊಗಿನೆ ಮರ ಉಪಯೋಗವಾಗಿರಲು ಸಾಧ್ಯವಿದೆ. (ಉದಾ: ನೇಗಿಲ ಈಚು, ಮನೆಗೆ ತೊಲೆ, ಇತ್ಯಾದಿಯಾಗಿ).

ಸ್ವಾತಂತ್ರ್ಯ ಚಳುವಳಿ ಸಂದರ್ಭದಲ್ಲಿ ಪಾನ ನಿರೋಧಕ್ಕೆ ಕರೆಕೊಟ್ಟ ಹಿನ್ನಲೆಯಲ್ಲಿ, ಶಿವಮೊಗ್ಗ ಜಿಲ್ಲೆಯ ಸಮಾಜವಾದಿಗಳ ಚಳುವಳಿಯ ಹಿನ್ನಲೆಯಲ್ಲಿ ಸೇಂದಿ ನಿಷಿದ್ಧವಾಗಿದ್ದ ಫಲವಾಗಿ ಬೋಗಿನೇಮರಗಳು ನಿರುಪಯುಕ್ತವಾಗಿ ಕಂಡಿರಲು ಸಾಧ್ಯ. ಅವುಗಳು ಇತರೆ ಅಗತ್ಯಗಳಿಗಾಗಿ ಬಳಕೆಯಾದಾಗ ಸಹಜವಾಗಿಯೇ ಅವುಗಳ ನಾಶವಾಗಿರಲು ಸಾಧ್ಯ. ಭೂಸುಧಾರಣೆಯ ಫಲವಾಗಿ ಭೂಮಿಧಕ್ಕಿರುವುದರಿಂದ ಸೇಂದಿ ತೆಗೆವ ಕೆಲಸ ಅನಿವಾರ್ಯವಾಗಿಲ್ಲ, ಹಾಗಾಗಿ ಬಹುಹಿಂದೆಯೇ ಇಲ್ಲಿ ಸೇಂದಿ ತೆಗೆವ ಕೆಲಸ ಕಾಣೆಯಾಗಿರಲು ಸಾಧ್ಯ. ಎಲ್ಲಕ್ಕಿಂತಲೂ ಬಹುಮುಖ್ಯಕಾರಣವೆಂದರೆ, ೧೯೫೨-೫೪ರಲ್ಲಿ ಜಾರಿಗೆ ಬಂದ ಭೂಸುಧಾರಣಾ ಕಾನೂನಿನನ್ವಯ, ೧). ಮಲೆನಾಡು ಗೇಣಿದಾರರಸಂಘ, ೨). ಸಾಗರ ತಾಲ್ಲೂಕು ರೈತಸಂಘಗಳು, ೧೯೬೯ರಲ್ಲಿ ಸರ್ಕಾರಿ ಭೂಮಿಯನ್ನು ವಶಪಡಿಸಿಕೊಂಡು ಭೂಹೀನ ರೈತರಿಗೆ ಹಂಚುವ ಆಂದೋಲನ ಕೈಗೊಂಡಿದ್ದು. (ವಿವರಕ್ಕೆ ನೋಡಿ, ಶಿವಮೊಗ್ಗ ಜಿಲ್ಲೆಯ ಸಮಾಜವಾದಿ ಚಳುವಳಿಗಳು. ಎಂ.ಫಿಲ್ . ಪ್ರಬಂಧ ಪುಟ ೩೧-೩೨. ಲೇ. ಜಿ.ಎನ್ . ಕೀರ್ತಿನಾಥ ೧೯೯೫).

ತೀರ್ಥಹಳ್ಳಿತಾಲ್ಲೂಕಿನ ಮಲೆನಾಡು ಭಾಗದಲ್ಲಿ ಹಳೆ ಪೈಕರೆಂದು ಕರೆಯಲ್ಪಡುವ ಈ ಜನರು ಬಹು ಹಿಂದಿನಿಂದಲೂ ಶೋಷಣೆಗೊಳಪಟ್ಟವರು. ಇವರ ಶೋಷಣೆಯ ಸ್ವರೂಪವನ್ನು ಕುರಿತ ವಿವರಗಳು ಕುವೆಂಪುರವರ 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮಧುಮಗಳು,' ಕಾದಂಬರಿಗಳಲ್ಲಿ ದೊರೆಯುತ್ತವೆ. ಈ ವಿವರಗಳ ಪ್ರಕಾರ, ಇಲ್ಲಿನ ಬಹುತೇಕ ಭೂರಹಿತ ಹಳೆಪೈಕ ಇಲ್ಲಿನ ಪ್ರಬಲ ವರ್ಗವಾದ ಹೆಗಡೆ, ಗೌಡರ, (ಒಕ್ಕಲಿಗರ, ಗೇಣಿದಾರರು).ಇಲ್ಲಿ ಬರುವ ಹಳೆ ಪೈಕದ ತಿಮ್ಮ (ಕಾನೂರುಹೆಗ್ಗಡತಿ) ಚಂದ್ರಯ್ಯ ಗೌಡರ ಒಕ್ಕಲಿನ ಗೇಣಿದಾರ, ಗೌಡರಿಗೆ ಉಚಿತವಾಗಿ ಕಳ್ಳು ಇಳಿಸಿಕೊಟ್ಟು ಅವರನ್ನು ಓಲೈಸುತ್ತಾ. ಅವರ ಜಮೀನನ್ನು ಗೇಣಿಗೆ ಪಡೆದು ಕೊಂಡವನು. ಇವನ ವಂಶದ ವೃತ್ತಿ ಮಾತ್ರ ಕಳ್ಳು ಇಳಿಸುವುದೇ ಆಗಿದೆ. ಇದು ಇತರರಿಗೆ ನಿಷೇಧವೂ ಹೌದು. ಸರ್ಕಾರ ಮತ್ತು ಹಿಂದಿನ ಸಾಮಾಜಿಕ ವ್ಯವಸ್ಥೆ ಈ ವೃತ್ತಿಯನ್ನು ಈ ಜಾತಿಯವರಿಗೆ ಮೀಸಲು ಮಾಡಿದೆ. ಇತರರು ಕಳ್ಳು ತೆಗೆದರೆ ಜಾತಿಗೆ ಬಹಿಷ್ಕಾರವಿದೆ. ಸುಮಾರು ೧೯ನೇ ಶತಮಾನದ ವೇಳೆಗೆ ಈ ಭಾಗದಲ್ಲಿ ಕಳ್ಳು ಇಳಿಸುವುದು ಭೂಮಾಲಿಕರ ಸೇವೆಗಾಗಿ ಮಾತ್ರವೆನ್ನುವುದೂ ಇಲ್ಲಿಯ ವಿವರಗಳಲ್ಲಿ ಬರುತ್ತದೆ. ಹಳೆ ಪೈಕದ ತಿಮ್ಮ ಚಂದ್ರಯ್ಯ ಗೌಡರಿಗೆ ಕಳ್ಳುಕೊಟ್ಟು ಉಳಿದದ್ದನ್ನು ತಾನು ಕುಡಿಯ ಬೇಕು. ಹೆಚ್ಚಾಗಿದ್ದರೆ ಕದ್ದು ಕಳ್ಳಂಗಡಿಗೆ ಮಾರುತ್ತಿದ್ದನು. ಅಂದರೆ ಈ ವೇಳೆಗೆ ಕಳ್ಳು ಭೂಮಾಲಿಕರ ಹಿಡಿತದಲ್ಲಿತ್ತು ಮತ್ತು ಸ್ವತಂತ್ರವಾಗಿ ಈಡಿಗರಿಗೆ ಇದರಿಂದ ಹಿಡಿತ ತಪ್ಪಿತ್ತು ಎನ್ನುವುದೂ ಸ್ಪಷ್ಟವಾಗುತ್ತದೆ. ಉಳಿದಂತೆ ಮಾರಟಮಾಡಲು ಅಂದಿನ ಬ್ರಿಟೀಷ್ . ಅನುಮತಿ ಪಡೆಯಬೇಕಿತ್ತು. ಅದಕ್ಕಾಗಿ ತೆರಿಗೆ, ಮತ್ತು ಅನುಮತಿ ಶುಲ್ಕಗಳು ಇರುತ್ತಿದ್ದವು. ಈ ಎಲ್ಲಾ ವಿವರಗಳೂ" ಕಾನೂರು ಹೆಗ್ಗಡತಿ" ಕಾದಂಬರಿಯಲ್ಲೆ ದೊರೆಯುತ್ತವೆ. ( ವಿವರಕ್ಕೆ ನೋಡಿ, ಕಾನೂರು ಹೆಗ್ಗಡತಿ, ಪುಟ ೧೦೨ , ೧೧೦-೧೧೧, ೧೧೨ ೨೪೨.ಲೇ. ಕುವೆಂಪು ೧೯೯೨). ಮತ್ತು ಮಲೆಗಳಲ್ಲಿ ಮಧುಮಗಳು ಪು- ೧೨-೧೩, ೨೬, ೩೭೬, ಲೇ- ಕುವೆಂಪು. ೧೯೬೭) ಈ ಭಾಗದಲ್ಲಿ ಈ ವೇಳೆಗಾಗಲೇ ಬಹುಸಂಖ್ಯಾತರಾದ ಮತ್ತು ಸ್ವಲ್ಪಮಟ್ಟಿಗೆ ಭೂಮಾಲಿಕಾರಾಗಿದ್ದ ಹಳೆ ಪೈಕರು, ಹೆಗಡೆ ಗೌಡರೊಡನೆ ವೈರುಧ್ಯಗಳನ್ನು ಹೊಂದಿರುವುದು ತಿಳಿಯುತ್ತದೆ. ಸೇನಾನಾಯ್ಕ ಮತ್ತು ತಿಮ್ಮಾನಾಯ್ಕರ ಸಂಭಾಷಣೆಗಳಲ್ಲಿ ಇವು ವ್ಯಕ್ತ ವಾಗಿದೆ.



ಒಟ್ಟು ವಸಾಹತು ಕಾಲದವರೆಗೆ ಈ ಭಾಗದ ಈಡಿಗರು ಗೇಣಿಧಾರರಾಗಿದ್ದು ಉಪಕಸುಬನ್ನಾಗಿ ಸೇಂದಿ ಇಳಿಸಿ ಮಾರುವ ಕಸುಬು ಮಾಡುತ್ತಿದ್ದರು. ಅಂದಮಾತ್ರಕ್ಕೆ ಶೇಕಡ ನೂರರಷ್ಟು ಜನರೂ ಇದೇ ಸ್ಥಿತಿಯಲ್ಲಿದ್ದರೆಂದು ಅರ್ಥವಲ್ಲ. ಕೆಲವರಿಗೆ ಕಳ್ಳು ಇಳಿಸುವುದೇ ಪ್ರಧಾನ ಕಸುಬಾಗಿರಬಹುದು, ಮತ್ತೆ ಕೆಲವರು

ಕೂಲಿಕಾರ್ಮಿಕಾರಾಗಿಯೇ ಉಳಿದಿದ್ದಾರೆ. ಇನ್ನು ಕೆಲವರು ಗೇಣಿದಾರರಾಗಿದ್ದಾರೆ, ಇವರೆಲ್ಲರನ್ನೂ ಸರಳೀಕರಿಸಿ ಒಂದೇ ವರ್ಗವೆಂದು ಹೇಳಲು ಬರುವುದಿಲ್ಲ. ಒಟ್ಟು ವ್ಯವಸ್ಥೆಯಲ್ಲಿ ಸಂಕೀರ್ಣವಾಗಿ ಉಳಿದಿದ್ದಾರೆ. ಇವರನ್ನು ಕೇವಲ ಜಾತಿಯ ನೆಲೆಯಿಂದ ನೋಡುವುದಾದರೆ ಸಮಸ್ಯೆಯಿಲ್ಲ. ಆರ್ಥಿಕನೆಲೆಯಿಂದಲೇ ಇವರ ಸ್ಥಾನಗಳನ್ನು ನಿರ್ಧರಿಸಲು ಸೂಕ್ಷ್ಮವಾದ ಕ್ಷೇತ್ರಧ್ಯಾಯನದಿಂದ ಮಾತ್ರ ಸಾಧ್ಯವಾಗಬಹುದು. ಇವರ ಬಗ್ಗೆ ಸರ್ಕಾರ ನೀಡುವ ಅಂಕಿ ಅಂಶಗಳೂ ಹೆಚ್ಚು ಕಡಿಮೆಯಾಗಿರುವ ಸಾಧ್ಯತೆಗಳಿವೆ.

ನಿರ್ದಿಷ್ಟವಾಗಿ ಈಡಿಗರೆಂದೇ ಗುರ್ತಿಸಿಕೊಳ್ಳುವ ಜನರು ರಾಯಚೂರು ಬಳ್ಳಾರಿ, ಬೀದರ್ ಚಿತ್ರದುರ್ಗ, ಚಿಕ್ಕಮಗಳೂರು, ಧಾರವಾಡ, ಹಾಸನ, ಕೋಲಾರ, ಬೆಂಗಳೂರು, ಮಂಡ್ಯ, ಮೈಸೂರು, ತುಮಕೂರು ಜಿಲ್ಲೆಗಳ್ಳಲಿ ಹರಡಿಕೊಂಡಿದ್ದಾರೆ. ಇವರು ಬಹುತೇಕ ಅಲೆಮಾರಿಜೀವನ ನಡೆಸುತ್ತಾ ಊರಿಂದೂರಿಗೆ, ಈಚಲು, ತಾಳೆಮರಗಳಲ್ಲಿ ಸೇಂದಿ ಇಳಿಸಿ ಮಾರಿಕೊಂಡು ಇದ್ದವರು. ಈ ಜಿಲ್ಲೆಗಳಲ್ಲಿರುವ ಬಹುತೇಕ ಈಡಿಗರು ಆಂಧ್ರ ಮೂಲದಿಂದ ವಲಸೆ ಬಂದವರು. ಹೀಗೆ ಹೇಳಲು ಆಧಾರವಿದೆ. ಇವರಲ್ಲಿ ಬಹುತೇಕರು ಇಂದಿಗೂ ತೆಲುಗು ಮಾತಾನಾಡುತ್ತಾರೆ. ಇವರ ಕುಲದೈವಗಳಾದ, ಕಾಟಮೇಶ್ವರ, ಓಬಳನರಸಿಂಹ, ಉರುಕುಂದಿ ಈರಣ್ಣ ಮೊದಲಾದ ದೈಗಳು ಆಂದ್ರಪ್ರದೇಶದಲ್ಲಿರುವ ದೈವಗಾಳಾಗಿವೆ. ಈಗ ಇವರಲ್ಲಿ ಕೆಲವರಿಗೆ ಅಂದರೆ ಚಿಕ್ಕಮಗಳುರು, ಧಾರವಾಡ, ಜಿಲ್ಲೆಯ ಈಡಿಗರಿಗೆ ತೆಲುಗು ಭಾಷೆ ಮರೆತು ಹೋಗಿದೆ. ಆದರೆ ಅವರ ಹಿರಿಯರೆಲ್ಲಾ ತೆಲುಗನ್ನೇ ಮನೆಯ ಭಾಷೆಯಾಗಿ ಬಳಸುತ್ತಿದ್ದರಂತೆ. ಇಂದಿಗೂ ಇವರ ಸಂಬಂಧಿಗಳು ತೆಲಗುಮಾತನಾಡುವವರೇ ಇದ್ದಾರೆ. ಆದರೆ ಚಿತ್ರದುರ್ಗ, ತುಮಕೂರು, ಬಳ್ಳಾರಿ ಈಡಿಗರಲ್ಲಿ ಇಂದಿಗೂ ತೆಲುಗೇ ಮನೆಯ ಭಾಷೆಯಾಗಿದೆ. ಗುಲ್ಬರ್ಗ, ಬೀದರ್ , ಜಿಲ್ಲೆಗಳಲ್ಲಿನ ಈಡಿಗರನ್ನು 'ಕಲಾಲ್ ' ಗಳೆಂದು ಕರೆಯುತ್ತಾರೆ.ಇವರೂ ಒಂದು ಬಗೆಯಲ್ಲಿ ಅಲೆಮಾರಿಗಳೇ ಆಗಿದ್ದಾರೆ. (ಈ ಬಗ್ಗೆ ಎಲ್ಲಾ ಮಾಹಿತಿಗಳೂ ವಕ್ತೃಗಳಿಂದ ಸಂಗ್ರಹಿಸಲ್ಪಟ್ಟವುಗಳು ಅನುಬಂಧದಲ್ಲಿ ವಕ್ತೃ ಮಾಹಿತಿ ಕೊಡಲಾಗಿದೆ).

ಹೀಗೆ ಬಯಲು ಸೀಮೆಯ ಈಡಿಗರಿಗೆ ಸೇಂದಿ ಇಳಿಸುವ ಮತ್ತು ಮಾರುವ ಬಗ್ಗೆ ಒಂದು ಸುದೀರ್ಘ ಚರಿತ್ರೆಯೇ ಇದೆ.ಆದರೆ ದಕ್ಷಿಣಕನ್ನಡ ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಯ ಈಡಿಗರಿಗೆ ಸುದೀರ್ಘಚರಿತ್ರೆ ಇರುವ ಬಗ್ಗೆ ದಾಖಲೆಗಳಿಲ್ಲ. ದಾಖಲೆಗಳಿಲ್ಲವೆಂದ ಮಾತ್ರಕ್ಕೆ ಚರಿತ್ರೆ ಇಲ್ಲವೆಂದು, ಅರ್ಥವಲ್ಲ. ಈಗ ದೊರಕಿರುವ ಮಾಹಿತಿಗಳ ಪ್ರಕಾರ, ಬಯಲುಸೀಮೆಯ ಈಡಿಗರಿಗೆ ಕಳ್ಳು ತೆಗೆಯುವ ವೃತ್ತಿ ಪ್ರಾಥಮಿಕ ಅಗತ್ಯವಿದ್ದಂತೆ ಇವರಿಗೆ ಇಲ್ಲದಿರಲು ಸಾಧ್ಯವಿರಲಿಲ್ಲವೆನ್ನುವುದು ತಿಳಿಯುತ್ತದೆ. ಮಂಗಳೂರು ಜಿಲ್ಲೆಯ

ಮೂರ್ತೆ ದಾರರನ್ನ ಬಿಟ್ಟು ( ಈ ಬಗೆ ನಿರ್ಣಯಗಳನ್ನು ಕ್ಷೇತ್ರಾಧ್ಯಯನ ನೆಡೆಸಿ ಸಂಗ್ರಹಿಸಿದ ಮಾಹಿತಿಗಳ ಆಧಾರಗಳ ಮೂಲಕ ಹೇಳಬಹುದಾಗಿದೆ). ಬಯಲು ಸೀಮೆಯ ಈಡಿಗರಿಗೆ ಈ ವೃತ್ತಿ ಅತ್ಯಂತ ಪ್ರಾಥಮಿಕ ವೃತ್ತಿಯಾಗಿಯೇ ಬಹು ಹಿಂದಿಸಿಂದಲೂ ಬೆಳೆದು ಬಂದಿದೆ. ಅದಕ್ಕೆ ಪೂರಕವಾದ ಮಾಹಿತಿಯನ್ನು ಹಿಂದಿನ ಅಧ್ಯಯನದಲ್ಲಿ ಕೊಡಲಾಗಿದೆ. ಯಲ್ಲಮ್ಮನನ್ನು ಕುರಿತ ಜನಪದ ಮೂಲದ ಕಥೆಯೊಂದು ಈಡಿಗರ ಮಾರ್ತಾಡಗೌಡ ಮತ್ತು ಬಲ್ಲೇಗೌಡರ ಚರಿತ್ರೆಯ ಬಗ್ಗೆ ಒಳನೋಟಗಳನ್ನು ಕೊಡುತ್ತದೆ. ಈ ಕಥೆ ಮಧ್ಯಕಾಲದ ರಾಜನಾದ ಓರಂಗಲ್ಲು ರಾಜ ಮತ್ತು ಎಲ್ಲಮ್ಮ ದೇವತೆಯರ ನಡುವೆ ನಡೆದ ಯುದ್ಧದ ಕಥೆಯನ್ನು ಹೇಳುತ್ತದೆ. ಓರಂಗಲ್ಲು ರಾಜನು ಮಧ್ಯಕಾಲೀನ ಸಂದರ್ಭದಲ್ಲಿ ರಾಜನಾಗಿದ್ದನೆಂಬ ಊಹೆ ಸಾಭೀತಾದರೆ ಇಲ್ಲಿ ದೊರೆಯುವ ಮಾಹಿತಿಗಳು ಮಧ್ಯಕಾಲದವುಗಳೆಂದು ಊಹಿಸಬಹುದು. (ವಿವರಕ್ಕೆ ನೋಡಿ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು ಲೇ. ಜಿ.ಶಂ. ಪರಮಶಿವಯ್ಯ. -ಪು೧೮೭ರಿಂದ ೧೯೩- ೧೯೭೮) ಈ ವಿವರಗಳ ಪ್ರಕಾರ ಮಧ್ಯಕಾಲದಲ್ಲಿ ಈಡಿಗರ ವೃತ್ತಿ ಮತ್ತು ವ್ಯಾಪಾರ ಕುರಿತಂತೆ ಸ್ಪಷ್ಟಮಾಹಿತಿ ಸಿಗುತ್ತದೆ. ಈ ಸಂದರ್ಭದಲ್ಲಿ ಈಡಿಗರ ನಿವಾಸ ಈಚಲು ವನವಾಗಿದೆ. ವ್ಯಾಪಾರೀಕರಣದ ಪ್ರಕ್ರಿಯೆಯು ಸೇಂದಿಯನ್ನು ವ್ಯಾಪಿಸಿರುವ ಸಾಧ್ಯತೆಗಳಿವೆ. ಕೆಳವರ್ಗದವರಿಗೂ ಸೇಂದಿ ಲಭ್ಯವಾಗಿ, ಮೇಲ್ವರ್ಗದವರ ಹಿಡಿತದಿಂದ ತಪ್ಪಿಸಿಕೊಳ್ಳುತ್ತಿರುವುದೂ ತಿಳಿಯುತ್ತದೆ. ಮಧ್ಯಕಾಲೀನ ಸಂದರ್ಭದಿಂದ ವಸಾಹತುಶಾಹಿ ಆಡಳಿತ ವ್ಯವಸ್ಥೆ ಕರ್ನಾಟಕದಲ್ಲಿ ಕಾಲಿಡುವವರಿಗೆ ಕಳ್ಳು ಇಳಿಸುವ ವೃತ್ತಿಯು ಪಡೆದುಕೊಂಡ ಸಾಮಾಜಿಕ ನೆಲೆಗಳು ಬೇರೆ. ವಸಾಹತು ಶಾಹಿ ಆಡಳಿತ ವ್ಯವಸ್ಥೆ ಕರ್ನಾಟಕದಲ್ಲಿ ಅಸ್ಥಿಭಾರ ಹಾಕಿದ ಮೇಲೆ ಇದು ಪಡೆದು ಕೊಂಡ ಅವಸ್ಥೆಯೇ ಬೇರೆ.

ಈಚಲು ವನಗಳಲ್ಲಿ ಹೆಂಡ ಇಳಿಸಿಕೊಂಡು ತಮ್ಮ ಮನೆಗಳಲ್ಲೇ ಮಾರಾಟ ಮಾಡುತ್ತಿದ್ದಾಗ ಈ ವೃತ್ತಿ ಹೆಚ್ಚು ವ್ಯಾಪಾರಿ ಗುಣವನ್ನು ಪಡೆದು ಕೊಂಡಿರಲಿಲ್ಲ. ಅದೇ ಸಂದರ್ಭದಲ್ಲಿ ಈಚಲು ವನದಿಂದ ಸಾಕಷ್ಟು ಹೆಂಡವನ್ನು ಸಂಗ್ರಹಿಸಿ ನಗರಕ್ಕೆ ಪಟ್ಟಣಕ್ಕೆ ತಂದು ಮಾರುವ ಮತ್ತೊಂದು ಬಗೆಯ ವ್ಯವಸ್ಥೆಯೂ ಇತ್ತು. ಇದಕ್ಕೆ ವ್ಯಾಪಾರಿ ಗುಣಗಳು ಹೆಚ್ಚು ಅವರಿಸಿಕೊಂಡಿದ್ದರೂ ವಸಾಹತುಶಾಹಿ ವ್ಯವಸ್ಥೆಯ ನಂತರ ಈ ಪ್ರವೃತ್ತಿಯು ಹೆಚ್ಚು ವ್ಯಾಪಕವಾಗುತ್ತಾ ಬಂತು.

ವಸಾಹತು ಪೂರ್ವದಲ್ಲಿ ರಾಜರು ನಗರದಲ್ಲಿರುವ ಸೇಂದಿ ಅಂಗಡಿಗಳಿಗೆ ಮಾತ್ರ ಶುಲ್ಕ ಮತ್ತು ಅನುಮತಿ ಫೀಯನ್ನು ತೆಗೆದು ಕೊಳ್ಳುತ್ತಿದ್ದರು. ಬ್ರೀಟಿಷರು ತಮ್ಮ ಅದಾಯ ಮೂಲಗಳನ್ನು ವ್ಯಾಪಕಗೊಳಿಸಿ

ಅವುಗಳನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನದ ಫಲವಾಗಿ ಸೇಂದಿ ಅಂಗಡಿಗಳು ಅವರ ತೆರಿಗೆಯ ಪ್ರಮುಖ ಆದಾಯ ಮೂಲಗಳಾದವು. ಇದು ಇಷ್ಟಕ್ಕೆ ನಿಲ್ಲಲಿಲ್ಲ. ಈ ಪ್ರಕ್ರಿಯೆ ಮುಂದುವರೆದು ಅದು ವೃತ್ತಿಯ ಮೇಲೂ ತನ್ನ ಜಾಲವನ್ನು ವ್ಯಾಪಿಸಿಕೊಂಡಿತ್ತು. ಅಂದರೆ ಸೇಂದಿ ತೆಗೆಯುವ ವೃತ್ತಿಯ ಮೇಲೂ ತೆರಿಗೆ ಹಾಕಲು ಪ್ರಾರಂಭಿಸಿದರ್‍ಲೈ ಈಚಲು, ಬೊಗನೆ, ತೆಂಗು, ತಾಳೆಯ, ಮರಗಳಿಗೆ ಒಂದು ಮರಕ್ಕೆ ಇಷ್ಟೆಂದು ತೆರಿಗೆ ಹಾಕುವುದು ಪ್ರಾರಂಭವಾಯಿತು. ಈ ಬಗೆಯ ತೆರಿಗೆಯು ಅವರ ಸಾಮಾಜಿಕ ಮತ್ತು ಕೌಟುಂಬಿಕ ಜೀವನದ ಮೇಲೆ ವ್ಯಾಪಕ ಪರಿಣಾಮವನ್ನುಂಟು ಮಾಡಿತು. ಇದರ ಪರಿಣಾಮವನ್ನು ಗುರ್ತಿಸುವುದು ತುಂಬಾ ಕಷ್ಟದ ಕೆಲಸ. ಒಂದಂತೂ ಸ್ಪಷ್ಟ. ತಮ್ಮಿಷ್ಟಕ್ಕೆ ತಾವು ಕಳ್ಳುತೆಗೆದು ಮಾರುತ್ತಾ ತಮ್ಮ ಜೀವನವನ್ನು ಹೆಚ್ಚು ಕಡಿಮೆಯಿಲ್ಲದೆ ನಡೆಸುತ್ತಿದ್ದ ವೃತ್ತಿ ಪರ ಈಡಿಗರನ್ನಂತೂ ಈ ವ್ಯವಸ್ಥೆ ದಿವಾಳಿಯಾಗುವಂತೆ ಮಾಡಿತು. ಮರಗಳಿಗೆ ತೆರಿಗೆ ನೀಡಿ, ಕಳ್ಳು ಇಳಿಸಿ, ಮಾರಲು ಸಾಧ್ಯವಿರದ ಈ ವೃತ್ತಿಪರ ವರ್ಗವು ಇದೇ ಜಾತಿಯ ಶ್ರೀಮಂತರ ಕೈಕೆಳಗೆ ಕೂಲಿಗಳಾಗಿ ಮಾರ್ಪಟ್ಟರು. ಇದೇ ಜಾತಿಯಲ್ಲಿ ಶ್ರೀಮಂತರು ರೂಪುಗೊಂಡಿದ್ದು ಸಹ ಈ ಸೇಂದಿ ವ್ಯಾಪಾರ ಗುಣವನ್ನು ವ್ಯಾಪಕವಾಗಿ ಪಡೆದುಕೊಳ್ಳಲು ಸಾಧ್ಯವಾಯಿತು. ವ್ಯಾಪಾರದಲ್ಲಿ ಹಿಂದಿನಿಂದ ತೊಡಗಿಕೊಂಡಿದ್ದ ಈಡಿಗರು ತೆರಿಗೆ ನೀಡಲು ಸಮರ್ಥರಿದ್ದರು. ಇವರ ಕೈಕೆಳಗೆ ದುಡಿವ ಜನರಾಗಿ ಕಳ್ಳು ಇಳಿಸುವವರಾಗಿ ವೃತ್ತಿ ಪರ ಈಡಿಗರು ರೂಪುಗೊಂಡರು.(ಹಿಂದೆ ಇವರುಈಚಲು ವನದಿಂದ ನಗರಕ್ಕೆ ಸೇಂದಿ ಸಾಗಿಸಿ ಮಾರುತ್ತಿದ್ದವರಿಗೆ ವ್ಯಾಪರಗುಣ ಸಹಜವಾಗಿಯೇ ಹಿಡಿಸಿತು. ಇದರಿಂದ ಅವರಲ್ಲಿ ಬಂಡವಾಳವೂ ಶೇಖರಣೆಯಾಯಿತು. ಇವರೇ ಮುಂದೆ ಶ್ರೀಮಂತ ಗುತ್ತಿಗೆದಾರರಾಗಿರಲು ಸಾಧ್ಯವಾಗಿದೆ ).

ಮೊದಮೊದಲು ಒಂದೊಂದು ವನಗಳಿಗೆ ತೆರಿಗೆ ನೀಡಿ, ಒಟ್ಟಾರೆ ಅದರಿಂದ ಆಧಾಯವನ್ನು ಪಡೆಯುತ್ತಿದ್ದ ಶ್ರೀಮಂತ ವ್ಯಾಪಾರಿ ಈಡಿಗರು ಕ್ರಮೇಣ ಈ ಪ್ರಕ್ರಿಯೆಯೊಳಗೆ ಅತಿಶ್ರೀಮಂತರಾದರು. ಇನೇ ಹಂತದಲ್ಲಿ ಅನೇಕ ಈಚಲು ವನಗಳನ್ನೇ ವಹಿಸಿಕೊಳ್ಳುವ ಶಕ್ತಿ ಇವರಿಗೆ ಸಹಜವಾಗಿ ಪ್ರಾಪ್ತವಾಯಿತು. ಇದಕ್ಕೆ ಪೂರಕವೆನ್ನುವಂತೆ, ಬ್ರಿಟೀಶ್ ಸರ್ಕಾರವೂ ಸೇಂದಿಯನ್ನು ಹೋಬಳಿವಾರು, ತಾಲ್ಲೂಕವಾರು ಜಿಲ್ಲಾವಾರು ಹರಾಜುಕೂಗುವ ವ್ಯವಸ್ಥೆಯನ್ನು ಜಾರಿಗೆ ತಂದಿತು. ಈ ಗುತ್ತಿಗೆಯ ಅವಕಾಶವನ್ನು ಈಡಿಗ ವ್ಯಾಪಾರಿವರ್ಗವೇ ಚೆನ್ನಾಗಿ ಬಳಸಿಕೊಂಡಿತು. ಈ ವೃತ್ತಿ ವ್ಯಾಪಾರವಾಗಿ ಬೆಳಕಿಗೆ ಬಂದ ಮೇಲೆ ಇತರೆ ಜಾತಿಯ ಜನಗಳೂ ಈ ವ್ಯಾಪರಕ್ಕೆ ಬಂಡವಾಳವನ್ನು ಹೂಡಲು ಮೊದಲುಮಾಡಿದರು. ಹಿಂದೆ ಅನೇಕ ತಾಲ್ಲೂಕಗಳಲ್ಲಿ ಹಿಂದೂ ಮುಸ್ಲಿಮರೆಲ್ಲರು ಬ್ರಿಟೀಷ್ ನ ಕೆಲವು ಅಧಿಕಾರಿಗಳು ಈ ವ್ಯಾಪಾರಕ್ಕೆ ಬಂಡವಾಳಹೂಡಿಸಿದವರಿದ್ದಾರೆ. (ಮಾಹಿತಿ:

ದೊಡ್ಡ ಗಂಗಪ್ಪ - ೧೦೪ ವರ್ಷ. ಕಗ್ಗಲಕಟ್ಟೆ, ೨ ರಾಮಲಿಂಗಯ್ಯ ೪೫ ವರ್ಷ ದೊಡ್ಡತೇಕಲುವಟ್ಟಿ. ಈಡಿಗರು, ಮಾಜಿಗುತ್ತಿಗೆದಾರರು ಹೊಸದುರ್ಗ ತಾ||) (ಬ್ರಿಟೀಷ್ ರು ಗುತ್ತಿಗೆ ವ್ಯವಸ್ಥೆ ತಂದ ಹಿನ್ನೆಲೆಯಲ್ಲಿ ಅವರ ಮತ್ತು ಗುತ್ತಿಗೆ ದಾರರ ಹಿತಾಸಕ್ತಿಗಳಿವೆ.)

ಸೇಂದಿಯು ಬಂಡವಾಳವಾಗಿ ಬೆಳವಣಿಗೆ ಹೊಂದಿದಂತೆ ಕ್ರಮವಾಗಿ ೨ ಬಗೆಯ ಕೂಲಿ ಕಾರ್ಮಿಕರು ನಿರಂತರವಾಗಿ ಇವರನ್ನೇ ಅವಲಂಬಿಸಿರುವವರು ಶೋಷಣೆಗೆ ಒಳಪಟ್ಟಿದ್ದಾರೆ. (೧). ಕಳ್ಳು ಇಳಿಸುವ ವೃತ್ತಿ ಪರ ಈಡಿಗರು. (೨). ಕೂಲಿ ಕಾರ್ಮಿಕರು, ಇವರಲ್ಲಿ ರೈತಾಪಿಕೂಲಿಕಾರ್ಮಿಕರಿರಬಹುದು, ಕಾರ್ಖಾನೆ, ಮತ್ತಿತರೆ ನಗರದ ಕೂಲಿ ಕಾರ್ಮಿಕರು, ಜೀತದಾಳುಗಳಿರಬಹುದು. ಈ ಎರಡನೇ ವರ್ಗದವರು ಕರ್ನಾಟಕಾದ್ಯಂತ ಬಹುಸಂಖ್ಯಾತರಾಗಿದ್ದಾರೆ. ಈ ವರ್ಗಕ್ಕೆ ಎಲ್ಲಾ ಜಾತಿಯ ಜನರು ಸೇರಬಹುದಾದರೂ, ಮಾದಿಗರು, ವಡ್ಡರು ಮೊಗೇರರು ಕೊರಮರು, ಲಂಬಾಣಿಗರು, ಪಿಂಜಾರರು, ಹಕ್ಕಿಶಿಖಾರರು, ಮೊದಲಾಗಿ ದುಡಿವಜಾತಿಯವರೇ ಹೆಚ್ಚು. ಇವರ ಆಯಾಸ, ಮತ್ತಿತರ ಮಾನಸಿಕ ನೋವುಗಳ ನಿವಾರಣೆಗಾಗಿ, ಮನೋರಂಜನೆಗಾಗಿ ಒಟ್ಟಾರೆ ಅನೇಕ ಸಾಮಾಜಿಕ ಒತ್ತಡಗಳಿಂದ ಬಿಡುಗಡೆಗಾಗಿ, ಕಳ್ಳು ಸಿದ್ಧೌಷಧವಾಗಿ ಬಳಕೆಯಾಗುತ್ತಿತು. ಮಾದಿಗರಂತೂ ಬಹು ಹಿಂದಿನಿಂದಲೂ ಈಡಿಗರಿಗೆ ಪ್ರಮುಖ ಗ್ರಾಹಕರು, ಇಂದಿಗೂ ಕೆಲವು ಆಚರಣೆಗಳಲ್ಲಿ ಈಡಿಗ ಮತ್ತು ಮಾದಿಗರ ಸಂಬಂಧಗಳನ್ನು ಗುರ್ತಿಸಬಹುದು. ಉದಾ: ಅಮ್ಮನಿಗೆ ಘಟ ಉಕ್ಕಿಸುವುದು, ಹಿರಿಯರಿಗೆ ಸೇಂದಿಯನ್ನು ನೈವೇದ್ಯ ಮಾಡೆವುದು, ಪೂಜಿಸುವುದು ಇತ್ಯಾದಿ. ಹೀಗೆ ಹೆಂಡಕ್ಕೆ ಜೋತು ಬಿದ್ದ ಗ್ರಾಹಕರಿಗೆ ಕರ್ನಾಟಕಾದ್ಯಂತ ಎಲ್ಲಿಯೂ ಕೊರತೆಯಿಲ್ಲ. ಇದಕ್ಕೆ ತಂಕ್ಕಂತೆ, ತೆಂಗು ಬೋಗನೆ ಮತ್ತು ಈಚಲು, ತಾಳೆ ಮರಗಳ ಸಂಬಂಧದಲ್ಲಿ ಈಡಿಗರ ಅಸ್ಥಿತ್ವವನ್ನು ಗುರ್ತಿಸಬಹುದಾಗಿದೆ. ಬಯಲು ಸೀಮೆಯ ಈಡಿಗರ ಸ್ಥಿತಿಗತಿಗಳನ್ನು ನಿಯಂತ್ರಿಸುವ ಪ್ರಮುಖ ಅಂಶಗಳನ್ನು ಈ ಕೆಳಕಂಡಂತೆ ಗುರ್ತಿಸಬಹುದು. ಇದೇ ಅಂಶಗಳು ಉಳಿದೆಡೆಯಲ್ಲೂ ಪ್ರಭಾವಬೀರುವ ಸಾಧ್ಯತೆಯಿದೆ ಎನ್ನುವುದನ್ನು ತಳ್ಳಿಹಾಕಲಾಗದು.

೧. ಕಳ್ಳು ಇಳಿಸಲು ಬೇಕಾದ ಸಸ್ಯಗಳು.

೨. ಪಾನ ನಿರೋಧ ಅಥವಾ ಜಾರಿಗೆ ಸಂಬಂಧಿಸಿದ ಸರ್ಕಾರದ ನೀತಿಗಳು.

೩. ಸೇಂದಿಯ ಮೇಲೆ ಬಂಡವಾಳ ಶಾಹಿಗಳ ಪ್ರಭಾವ.

೪. ಭೌಗೋಳಿಕ ಸ್ವರೂಪ.

೫. ಗ್ರಾಹಕರ ಸಂಬಂಧ.

೧). ಮೈಸೂರು, ಬೆಂಗಳೂರು, ತುಮಕೂರು, ಕೋಲಾರ, ಚಿತ್ರದುರ್ಗ ಮತ್ತು ಚಿಕ್ಕ ಮಗಳೂರಿನ ಕೆಲವು ಭಾಗಗಳಲ್ಲಿ ಈಚಲು ಸಸ್ಯಗಳು ಯಥೇಚ್ಛವಾಗಿ ಬೆಳೆಯುವ ಹಾವಾಗುಣವಿದೆ. ಮುಖ್ಯವಾಗಿ ಹಳ್ಳಗಳ ಸಾಲಿನಲ್ಲಿ ಕೆರೆಯ ದಂಡೆಗಳಲ್ಲಿ ಜೌಗಿನ ಪ್ರದೇಶದಲ್ಲಿ ಈಚಲು ಮರಗಳು ಕಾಣಿಸಿಕೊಂಡಿವೆ. ಉಳಿದಂತೆ ಅಲ್ಲಲ್ಲಿ ಹರಡಿಕೊಂಡು ಬೆಳೆದಿವೆ. ಈಚಲು ಸಸ್ಯ ಸೇಂದಿಯನ್ನು ಹೆಚ್ಚು ಇಳುವರಿ ಕೊಡುತ್ತದೆ. ಕನಿಷ್ಠ ಹತ್ತರಿಂದ ೨೦ ಲೀಟರ್ ಸೇಂದಿ ಕೊಡುತ್ತದೆ. ಇದರಷ್ಟು ಹೆಚ್ಚು ಇಳುವರಿಯನ್ನು ತಾಳೆ ತೆಂಗು ಬೊಗನೆಗಳು ಕೊಡುವುದಿಲ್ಲ. (ಮಾಹಿತಿ, ಲೋಕಯ್ಯ ಪೂಜಾರ್ , ಬಿಲ್ಲವರು. ಕರ್ನಾಡು- ೬೦ ವರ್ಷ) ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿ ತಾಳೆ ಮರಗಳು ಹೆಚ್ಚು ಬೆಳೆಯುತ್ತವೆ. ಈಗಲೂ ಕೂಡ್ಲಿಗಿ ಮತ್ತು ಹೊಸಪೇಟೆಯ ನಡುವೆ ಸಾಕಷ್ಟು ತಾಳೇಮರಗಳ ವನಗಳನ್ನು ಕಾಣಬಹುದು. ತಾಳೆ ಈಚಲಿಗಿಂತ ಕಡಿಮೆ ಇಳುವರಿ ನೀಡುತ್ತದೆ. ಬಹುಶಃ ಈ ಭಾಗಗಳಲಲ್ಲಿ ಈಡಿಗರು ಈ ಕಾರಣಕ್ಕೇ ಕಡಿಮೆಯಿರುವ ಸಾಧ್ಯತೆಯಿರಬಹುದು.

೨). ಈ ಭಾಗಗಳಲ್ಲಿ ಮದ್ಯ ಕಂಟ್ರಾಕ್ಟರುಗಳು ಭಾರಿ ಪ್ರಮಾಣದ ಶ್ರೀಮಂತರೆ ಆಗಿದ್ದಾರೆ. ಉದಾ: ಹೊಸಪೇಟೆ, ರಾಯಚೂರು, ಗುಲ್ಬರ್ಗ, ಮೈಸೂರು ಚಿತ್ರದುರ್ಗಗಳಲ್ಲಿ ಭಾರಿ ಶ್ರೀಮಂತ ಮದ್ಯಗುತ್ತಿಗೆದಾರರನ್ನು ಇಂದಿಗೂ ಕಾಣಬಹುದು. ಇಂದೂ ಇದ್ದಾರೆಂಬುದನ್ನು ಪ್ರತ್ಯಕ್ಷ ದರ್ಶಿ ವಕ್ತೃಗಳು ತಿಳಿಸಿದ್ದಾರೆ. ( ಮಾಹಿತಿ, ಈ ಚಂದ್ರಶೇಖರ್ , -೩೬ ವರ್ಷ- ಈಡಿಗರು ಸಾರಾಯಿವೆಂಡರ್ . ಕಮಲಾಪುರ- ಹೊಸಪೇಟೆ ತಾ||) ಈ ಭಾಗದಲ್ಲಿ ಬಹುತೇಕ ಮಳೆ ಕಡಿಮೆ ಇರುವ ಭೂಮಿಯಾಗಿದ್ದು ಈಡಿಗರು, ತಮ್ಮ ವೃತ್ತಿಯನ್ನು ಬಿಟ್ಟು ಈ ಭೂಮಿಯನ್ನು ಕೃಷಿ ಮಾಡಲು ಇಚ್ಛಿಸಿಲ್ಲದಿರಬಹುದು. ಈ ಕಾರಣಕ್ಕಾಗಿ ಈ ಭಾಗಗಳಲ್ಲಿ ಬಹುತೇಕ ಭೂರಹಿತ ಕೂಲಿಕಾರ್ಮಿಕರಾಗಿ ಈಡಿಗರು ಜೀವನ ನಡೆಸುತ್ತಿದ್ದಾರೆ. ಶೇ.೨೦ ರಷ್ಟು ಜನ ಸಾರಾಯಿ ವೆಂಡರ್ ಗಳಾಗಿ ಜೀವನ ನಡೆಸುತ್ತಿದ್ದಾರೆ. ಉಳಿದವರು ಇತರೇ ಕೂಲಿಕಾರ್ಮಿಕರಾಗಿದ್ದಾರೆ. ಶೇ.೧ ರಷ್ಟು ಮಾತ್ರ ಭಾರಿ ಶ್ರೀಮಂತ "ಮದ್ಯ" ಗುತ್ತಿಗೆ ದಾರರಿದ್ದಾರೆ (ಮಾಹಿತಿ :ಕೆ.ನೀಲಪ್ಪ ೫೦ ವರ್ಷ, ಕುರುಬರು, ಕೃಷಿವೃತ್ತಿ, ಕಮಲಾಪುರ, ಹೊಸಪೇಟೆ).

ಈ ಜಿಲ್ಲೆಗಳ ಬಹುತೇಕ ಈಡಿಗರು. ಅಂದರೆ ಶೇ.೭೦ರಷ್ಟು ಕೂಲಿಕಾರ್ಮಿಕರಾಗಿಯೇ ಉಳಿದಿದ್ದಾರೆ. ಇದಕ್ಕೆ ಕಾರಣಗಳನ್ನು ಮುಂದಿನ ಅಧ್ಯಯನದಲ್ಲಿ ಗುರ್ತಿಸಬಹುದು. ಸಾಂಸ್ಕೃತಿಕವಾಗಿಯೂ ಈ ಭಾಗದ ಈಡಿಗರು ತಮ್ಮ ಅನನ್ಯತೆಯನ್ನು ಉಳಿಸಿಕೊಂಡಂತೆ ಕಾಣುವುದಿಲ್ಲ. ಈ ಭಾಗದ ಪ್ರಬಲ ಕೋಮಿನ ಸಾಂಸ್ಕೃತಿಕ ಚಹರೆಯೇ ಇವರನ್ನೂ ಆವರಿಸಿದೆ.

"ಕಳ್ಳು" ಬಂಡವಾಳ ವ್ಯವಸ್ಥೆಯೊಳಗೆ ಬೆಳೆಯಲು ಪ್ರಮುಖ ತಿರುವನ್ನು ಕೊಟ್ಟ ಬ್ರಿಟಿಷ್ ಆಡಳಿತ ವ್ಯವಸ್ಥೆಯ ಬಗ್ಗೆ ಅಲ್ಲಲ್ಲಿ ಸಾಕಷ್ಟು ಮಾಹಿತಿಗಳು ದೊರಕುತ್ತವೆ. ಆದರೂ ಖಚಿತವಾಗಿ ಕರ್ನಾಟಕದಲ್ಲಿ ಯಾವಾಗ 'ಕಳ್ಳಿ'ನ ಮರಗಳಿಗೆ ತೆರಿಗೆ ವಿಧಿಸಿದರೆಂಬುದಕ್ಕೆ ದಾಖಲೆಗಳು ಸಿಕ್ಕಿಲ್ಲ. ೧೮೫೦ರ ವೇಳೆಗಾಗಲೇ "ಈಚಲು, ಈಡಿಗ, ಕಲಾಲ್ ", ಮೊದಲಾದ ಶಬ್ದಗಳು ಆದಾಯದ ಪರಿಭಾಷೆಗಳ ಶಬ್ದ ಕೋಶದಲ್ಲಿ ದಾಖಲಾಗಿವೆ. ಈಡಿಗ, ಕಲಾಲ್ ಜಾತಿಯವರು ಮದ್ಯವನ್ನು ತಯಾರಿಸುವುದಕ್ಕೆ ಮತ್ತು ಮಾರುವುದಕ್ಕೆ ಲೈಸೆನ್ಸ್ ಪಡೆಯಬೇಕಿತ್ತು ಮತ್ತು ತೆರಿಗೆಯನ್ನು ಕೊಡುತ್ತಿದ್ದರು ಎನ್ನುವ ವಿವರಗಳ ದಾಖಲಾಗಿವೆ. ಈಚಲು ಮರವು ಸಹ ಈ ಪದಕೋಶದಲ್ಲಿ ದಾಖಲಾಗಿದೆ. ಅಬಕಾರಿ ಎನ್ನುವ ಪಾರಿಭಾಷಿಕದಡಿಯಲ್ಲಿ ಇವುಗಳನ್ನು ಪರಿಗಣಿಸಲಾಗಿದೆ. ಮತ್ತು ಈ ಎಲ್ಲಾ ಭಾಷೆಗಳು ಕನ್ನಡ ಮತ್ತು ತೆಲುಗಿನ ಮೂಲದವುಗಳೆಂದು ಹೇಳಲಾಗಿದೆ (ಹೆಚ್ಚಿನ ವಿವರಗಳಿಗೆ ನೋಡಿ Glossary of Judicial and Revenue Terms and of use full words Occuring I official Documents, pag-೧,೨೫೦, H.H.Willson, ೧೮೫೫ ಮೇಲಿನ ಎಲ್ಲ ವಿವರಗಳೂ ಈ ಗ್ರಂಥದಲ್ಲಿ ದೊರೆತವುಗಳು). ಈಚಲು ಮರಕ್ಕೆ ತೆರಿಗೆ ವಸೂಲಿ ಮಾಡುತ್ತಿದ್ದರೆಂಬ ನಿರ್ದಿಷ್ಟ ಮಾಹಿತಿಯು ಕುವೆಂಪುರವರ ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ದೊರಕುತ್ತದೆ. ಇಲ್ಲಿ ಬರುವ ಮಾರ್ ೯ ಎಂಬುವನು ಬ್ರಿಟಿಷ್ ಅಬಕಾರಿ ಅಧಿಕಾರಿಯಾಗಿದ್ದು, ಬೊಗನಿಮರಗಳಿಗೆ ಮಾರ್ ೯ ಮಾಡುವುದು ಅವನ ಕರ್ತವ್ಯ. ಅಂದರೆ ಆತ ಮಾರ್ ೯ ಮಾಡಿದ ಮರಗಳಿಗೆ ಕಳ್ಳು ಇಳಿಸುವವನು ತೆರಿಗೆ ನೀಡಬೇಕಿತ್ತು (ವಿವರಗಳಿಗೆ ನೋಡಿ: ಕಾನೂರು ಹೆಗ್ಗಡತಿ, ಲೇ: ಕುವೆಂಪು, ಪುಟ:೧೧೧, ೨೪೨).

## ೩.೩. ವಸಾಹತೋತ್ತರ ಕಾಲದ ಆರ್ಥಿಕ ನೆಲೆಗಳು

ವಸಾಹತೋತ್ತರ ಕಾಲದಲ್ಲಿ ಈಡಿಗರ ಆರ್ಥಿಕ ಸ್ಥಿತಿಗಳನ್ನು ಗುರುತಿಸಲು ನಮಗೆ ಸಿಗುವ ಮಾಹಿತಿಗಳು ೨ ಬಗೆಯವುಗಳು. ೧. ಸರ್ಕಾರ ನೀಡುವ ಅಂಕಿ-ಅಂಶಗಳು, ಇದನ್ನು ಹೊರತುಪಡಿಸಿದರೆ, ಮತ್ತೊಂದು ಮೂಲದಿಂದ ಮಾಹಿತಿಗಳು ಸಿಗಲು ಸಾಧ್ಯ. ೨. ಕ್ಷೇತ್ರಕಾರ್ಯದಿಂದ ದೊರೆಯುವ ಮಾಹಿತಿಗಳು. ಈ ಎರೆಡೂ ಬಗೆಯ ಮಾಹಿತಿಗಳಲ್ಲಿ ಯಾವುದೇ ಒಂದು ಬಗೆಯ ಮಾಹಿತಿಗಳು ಹೆಚ್ಚು ಖಚಿತವೆನ್ನಿಸಿಕೊಳ್ಳಲು ಸಾಧ್ಯವಿಲ್ಲ. ಎರೆಡೂ ಬಗೆಯ ಮಾಹಿತಿಗಳಿಗೂ ಅವುಗಳದ್ದೇ ಆದ ಮಿತಿಗಳಿರುತ್ತವೆ. "ಸರ್ಕಾರ ನೀಡುವ ಅಂಕಿ-ಅಂಶಗಳನ್ನು ಗಮನಿಸಿ ವಾಸ್ತವವನ್ನು ಗುರುತಿಸುವುದು ದೂರದಲ್ಲಿ ನಿಂತು 'ಗುಡ್ಡದ ನುಣಾಪನ್ನು

ಗುರುತಿಸಿದಂತೆಯೇ ಸರಿ" ಹಾಗೆಯೇ ಯಾವನೇ ಒಬ್ಬ ಸಂಶೋಧಕ ಇಡೀ ರಾಜ್ಯವನ್ನು ಸುತ್ತಿ, ಅಲ್ಲಿಯ ಸಮುದಾಯವೊಂದರ ಸಮಗ್ರ ಅಂಕಿ-ಅಂಶಗಳನ್ನು ಕಲೆಹಾಕಿ ಅಧ್ಯಯನ ಮಾಡಿ ಸಮಗ್ರವಾದ ಮತ್ತು ನಿರ್ದಿಷ್ಟವಾದ ಫಲಿತಾಂಶವನ್ನು ಕೊಡುವುದು ಕೂಡ ಕನಸಿನಲ್ಲಿ ಅರಮನೆಯನ್ನು ಕಟ್ಟಿದಂತೆಯೇ.

ಈ ಎರಡೂ ಬಗೆಯ ಮಾಹಿತಿಯನ್ನಿಟ್ಟುಕೊಂಡು ಅಧ್ಯಯನ ಮಾಡುವುದರ ಜೊತೆಗೆ, ಮೌಖಿಕ ಮತ್ತು ಲಿಖಿತ ಸಾಹಿತ್ಯದ ದಾಖಲೆಗಳನ್ನು ಬಳಸಿಕೊಂಡು ಅಧ್ಯಯನ ಮಾಡುವ ವಿಧಾನ ಈಚೆಗೆ ಕಾಣಸಿಕೊಳ್ಳುತ್ತಿದೆ. ಯಾವುದೇ ಒಂದು ಬಗೆಯ ಮಾಹಿತಿಯನ್ನಿಟ್ಟುಕೊಂಡು ಅಧ್ಯಯನ ಮಾಡುವುದಕ್ಕಿಂತ ಈ ಮೂರನೆಯ ಮಾದರಿಯ ಅಧ್ಯಯನಕ್ಕೆ ಮೊದಲಿನವುಗಳಿಗಿಂತಲೂ ಹೆಚ್ಚು ಖಚಿತ ಸ್ವರೂಪವನ್ನು ಕೊಡಲು ಸಾಧ್ಯವಾಗಬಹುದು.

ಇಲ್ಲಿ ಕೈಗೊಂಡಿರುವ ಅಧ್ಯಯನ ಕೂಡ ಮೂರನೆಯ ಮಾದರಿಯದ್ದಾಗಿರುತ್ತದೆ. ಅಂದಮಾತ್ರಕ್ಕೆ ಇದೊಂದು ಸೂಕ್ಷ್ಮವಾದ ಸಮಗ್ರ ಅಧ್ಯಯನವೆಂದು ಹೇಳಲಾಗದು. ಇದಕ್ಕೆ ಇದರದ್ದೇ ಆದ ಮಿತಿಗಳಿವೆ. ಸರ್ಕಾರವು ಈಡಿಗರ ಸ್ಥಿತಿಗತಿಗಳ ಬಗ್ಗೆ ಕೊಡುವ ಅಂಕಿ-ಅಂಶವನ್ನು ಗಮನಿಸಿದರೆ, ಪ್ರಮುಖವಾಗಿ ಮೂರು ವರ್ಗಗಳನ್ನು ಗುರ್ತಿಸಬಹುದು. ಉದಾಹರಣೆಗಾಗಿ ಕರ್ನಾಟಕದ ಎರಡನೇ ಹಿಂದುಳಿದ ವರ್ಗಗಳ ಆಯೋಗದ ವರದಿಯಲ್ಲಿ ನೀಡಿರುವ ಅಂಕಿ-ಅಂಶಗಳ ಪಟ್ಟಿಯನ್ನು ನೋಡಬಹುದು.

| | |
|---|---|
| ೧) ವಸತಿ ರಹಿತರು ಮತ್ತು ನಿವೇಶನರಹಿತರು | -೦೧೮೩೨೩ |
| ೨)ಕಚ್ಚಾ ಮನೆಯುಳ್ಳವರು | -೦೬೬೮೫೬ |
| ೩.)ಭೂರಹಿತರು | -೦೭೫೨೬೩ |
| ೪)೫೦೦೦ಕ್ಕೂ ಕಡಿಮೆ ಆದಾಯವಿರುವವರು | -೧೧೩೩೧೭ |
| ೫)ರೈತಾಪಿ ಕೂಲಿಕಾರ್ಮಿಕರು | -೧೨೪೬೩೨ |
| ೬)ನಾಲ್ಕನೇ ದರ್ಜೆ ನೌಕರರು | -೦೦೨೩೧೮ |
| ೭)ಅನಕ್ಷರಸ್ಥರು | -೩೧೨೬೬೪ |
| ೮)ಏಳನೇ ತರಗತಿಗಿಂತ ಕಡಿಮೆ ವಿದ್ಯಾವಂತರು | -೧೬೬೭೧೬ |
| ೯)ಉತ್ತಮ ವಸತಿವುಳ್ಳವರು | -೦೩೫೬೭೩ |

| | |
|---|---|
| ೧೦)೨೦,೦೦೦ಕ್ಕಿಂತ ಅಧಿಕ ಆದಾಯವುಳ್ಳವರು | -೦೦೨೦೧೧ |
| ೧೧)೨೦ ಎಕರೆಗಿಂತ ಅಧಿಕ ಭೂಮಿವುಳ್ಳವರು | -೦೦೩೩೫೬ |
| ೧೨)ಸ್ವಯಂ ಉದ್ಯೋಗವುಳ್ಳವರು | -೧೭೫೭೭೪ |
| ೧೩)ಪ್ರಥಮ ದರ್ಜೆ ನೌಕರರು(ಸರ್ಕಾರಿ) | -೦೦೦೩೩೭ |
| ೧೪)ದ್ವಿತೀಯದರ್ಜೆ ನೌಕರರು( " ) | -೦೦೦೮೩೮ |
| ೧೫)ತೃತೀಯ ದರ್ಜೆ ನೌಕರರು( " ) | -೦೦೫೨೯ |
| ೧೬) ಒಟ್ಟು ಎಸ್ .ಎಸ್ .ಎಲ್ .ಸಿ ವಿದ್ಯಾರ್ಥಿಗಳ ಸಂಖ್ಯೆ | -೦೧೩೮೨೦ |
| ೧೭)ಒಟ್ಟು ರಾಜ್ಯದ ಜನಸಂಖ್ಯೆ | -೯೧೭೯೫೩ |

ಈ ಪಟ್ಟಿಗೆ ಸಂಬಂಧಿಸಿದ ಹೆಚ್ಚಿನ ವಿವರಗಳಿಗೆ;(Report of the Second backward classes commission VIII, T. Venkatswamy, -೧೮-೧೮೬)

೧) ದತ್ತ ಪಟ್ಟಿಯನಾಧರಿಸಿ ಕೆಳಕಂಡಂತೆ ವರ್ಗೀಕರಿಸಬಹುದು.

ಮೊದಲ ವರ್ಗದಲ್ಲಿ ಆರ್ಥಿಕವಾಗಿ ಪ್ರಬಲರಿದ್ದಾರೆ ಉದಾ:

ಅ)೨೦,೦೦೦ಕ್ಕಿಂತ ಹೆಚ್ಚು ಆದಾಯವಿರುವವರು

ಆ)೨೦ ಎಕ್ಕರೆಗಿಂತ ಹೆಚ್ಚಿಗೆ ಜಮೀನುಳ್ಳವರು

ಇ) ಉತ್ತಮ ವಸತಿಯಿರುವವರು. ಇತ್ಯಾದಿ

ಇವರು ೨೦ ಸಾವಿರಕ್ಕಿಂತ ಎಷ್ಟಾದರೂ ಆದಾಯವಿರಬಹುದಾದವರು. ಅದನ್ನೂ ಮೀರಿ ಸರ್ಕಾದವರು ಅಂಕಿ- ಅಂಶಗಳನ್ನು ನೀಡಿಲ್ಲ. ಬಹುಶಃ ಇದರಲ್ಲಿ ಭಾರಿ ಬಂಡವಾಳದಾರರು ಅಂದರೆ ೨೦ ಲಕ್ಷದಿಂದ ೨೦ ಕೋಟಿಯವರೆವಿಗೂ ಆದಾಯವಿರುವವರಿಬಹುದು. ೨೦, ಎಕರೆಗಿಂತ ಹೆಚ್ಚು ಭೂಮಿ ಇರುವವರು. ೨೦ ರಿಂದ ೨,೦೦೦ ಎಕರಯವರೆಗೂ, ಎಸ್ಟೇಟ್ ಗಳನ್ನು ಹೊಂದಿದವರೂ ಸೇರಬಹುದು. ಹಾಗೆಯೇ ಉತ್ತಮ ವಸತಿಯೆಂದರೆ ೨ ಲಕ್ಷದಿಂದ ೮೦ ಲಕ್ಷ ಬೆಲೆಯ ಬಂಗಲೆಗಳನ್ನು ನಿರ್ಮಿಸಿಕೊಂಡವರೂ ಬರುತ್ತಾರೆ. ಈ ವರ್ಗವನ್ನು ಪ್ರಬಲವರ್ಗವೆಂದು ಗುರ್ತಿಸಬಹುದು. ಈ ಸಾಲಿನಲ್ಲಿ ಪ್ರಥಮದರ್ಜೆ ನೌಕರರೂ ಬರಬಹುದಾದ

ಸಾಧ್ಯತೆಗಳಿವೆ. ಉತ್ತಮ ಮಟ್ಟದಲ್ಲಿ ಶಿಕ್ಷಣ ಪಡೆದವರೆಂದರೆ I.A.S., I.P.S.ಗಳನ್ನು ಪಾಸುಮಾಡುವವರಾಗಿರುತ್ತಾರೆ. ಈ ಮಟ್ಟದ ಅರ್ಹತೆ ಮತ್ತು ಪ್ರಭಾವಗಳು ಪ್ರಥಮ ದರ್ಜೆ ನೌಕರಿಯ ಆಯ್ಕೆಯ ಮಾನದಂಡಗಳಾಗಿವೆ. ಈ ಬಗೆಯ ಸಾಧ್ಯತೆ ಮಧ್ಯಮವರ್ಗಕ್ಕೆ ಅಸಾಧ್ಯ. ಕೆಳವರ್ಗಕ್ಕಂತೂ ಸಾಧ್ಯತೆ ಇಲ್ಲವೇ ಇಲ್ಲ. ಈ ನೌಕರರು ತಮ್ಮ ನೌಕರಿಯ ಜೊತೆಗೆ ಇತರೆ ಖಾಸಗೀ ಆಸ್ತಿಯನ್ನೂ ಉನ್ನತ ಮಟ್ಟದಲ್ಲೆ ಹೊಂದಿರಲು ಸಾಧ್ಯ. ಅಂದಮೇಲೆ ಬಹುತೇಕ ಇವರಲ್ಲೂ ಪ್ರಬಲವರ್ಗಕ್ಕೆ ಸೇರಿದವರಾಗಿದ್ದಾರೆ.

೨. ೨ನೇ ವರ್ಗದಲ್ಲಿ ದ್ವಿತೀಯ ದರ್ಜೆ ನೌಕರರು ಸೇರಬಹುದು. ಚಿಲ್ಲರೆ ಬಂಡವಾಳಶಾಹಿಗಳು ಮತ್ತಿತರೆ ಚಿಲ್ಲರೆ ಭೂಮಾಲಿಕರು ಸೇರುತ್ತಾರೆ. ಸುಮಾರು ೧೦-೨೦ ಎಕರೆ ಭೂಮಿಯುಳ್ಳವರು ಅಂಗಡಿ ವ್ಯಾಪರಿಗಳು ಸಣ್ಣ ಪ್ರಮಾಣದ ಕೋಟವುಳ್ಳವರು ಸೇರುತ್ತಾರೆ. ಇವರನ್ನು ಮೇಲಿನ ಮಧ್ಯಮವರ್ಗವೆಂದು ಕರೆಯಬಹುದು.

೩. ಮೂರನೇ ವರ್ಗದಲ್ಲಿ ಎಲ್ಲಾ ವಿದ್ಯಾವಂತ ನಿರುದ್ಯೋಗಿಗಳು ೩-ಆನೇ ದರ್ಜೆನೌಕರರು, ೧-೩ ಎಕರೆ ಭೂಮಿಯುಳ್ಳವರು ಬರುತ್ತಾರೆ. ಇವರನ್ನು ಕೆಳಮಧ್ಯಮ ವರ್ಗದವರೆಂದು ಕರೆಯಬಹುದು.

೪. ನಾಲ್ಕನೇ ವರ್ಗಕ್ಕೆ ಎಲ್ಲಾ ಭೂರಹಿತ ಕೂಲಿಕಾರ್ಮಿಕರು, ವಸತಿಹೀನರು ನಿರ್ಗತಿಕರು, ನಿವೇಶನ ಹೀನರು ಮೊದಲಾಗಿ ಸೇರುತ್ತಾರೆ. ಇವರ ಜೀವನ ವಿಧಾನದ ಸ್ವರೂಪ ನಗರ ಮತ್ತು ಹಳ್ಳಿಗಳಲ್ಲಿ ವಿಭಿನ್ನವಾಗಿರುತ್ತದೆ.

ಹೀಗೆ ವರ್ಗೀಕರಿಸುವುದು ಕೂಡ ತೀರಾ ಸರಳವೆನ್ನಿಸಬಹುದು. ಈ ವರ್ಗದೊಳಗಡೆ ಆಂತರಿಕ ವೈರುಧ್ಯಗಳು ಸಾಕಷ್ಟು ಇವೆ. ಈ ವ್ಯವಸ್ಥೆ ಇನ್ನು ಸಂಕೀರ್ಣವಾಗಿರುತ್ತದೆ. ಹೀಗೆ ಅನೇಕ ವರ್ಗಗಳಾಗಿ ವಿಂಗಡಿಸಿರುವ ಈ ಜನರುಗಳ ಜೀವನ ವಿಧಾನ ಮತ್ತು ಆರ್ಥಿಕ ಸ್ಥಿತಿಗತಿಗಳು ಆಯಾ ವರ್ಗಕ್ಕನುಗುಣವಾಗಿ ಭಿನ್ನವಾಗಿರುತ್ತವೆ. ಸಾಮಾಜಿಕ, ಸಾಂಸ್ಕೃತಿಕವಾಗಿಯು ಕೂಡ ಇವರು ಪಡೆಯುವ ಸ್ಥಾನಮಾನಗಳು ಮತ್ತು ಆಚರಣೆಗಳು ಭಿನ್ನವಾಗಿಯೇ ಇರುತ್ತವೆ. ಇತರೆ ಒತ್ತಡಗಳು ಮತ್ತು ಸಮಸ್ಯೆಯ ಸ್ವರೂಪಗಳೂ ಭಿನ್ನವಿರುತ್ತವೆ. ಇಂಥ ಅವಸ್ಥೆಯು ತುಂಬಾ ಸಂಕೀರ್ಣವಾಗಿದ್ದು ಅವುಗಳನ್ನು ಸೂಕ್ಷ್ಮವಾಗಿ ಬಿಡಿಸಿ ಹೇಳುವುದು ಸಂಶೋಧಕನೊಬ್ಬನಿಗೆ ಬಹುದೊಡ್ಡ ಸವಾಲು ಕೂಡ. ಅದನ್ನು ಸಮರ್ಥವಾಗಿ ಎದುರಿಸುವುದು ಎಂಥವನಿಗೂ ಅಸಾಧ್ಯವೇನೋ?

ಮೇಲೆ ನೀಡಿದ ಅಂಕಿ-ಅಂಶಗಳು ಸರ್ಕಾರ ನೀಡಿದವುಗಳು. ಆದರೆ ವಾಸ್ತವದಲ್ಲಿ ಇಷ್ಟು ಸರಳವಾಗಿ, ಅವರ ಸ್ಥಿತಿಗತಿಗಳನ್ನು ಗುರ್ತಿಸಲಾಗದು. ಮತ್ತು ರಾಜ್ಯಾದ್ಯಂತ ಎಲ್ಲಾ ಈಡಿಗರಿಗೂ ಈ ಅಂಕಿ-ಅಂಶಗಳನ್ನು ಹೊಂದಿಸಿ ನೋಡುವುದು (ಒಂದೇ ರೀತಿ) ತೀರಾ ಸರಳೀಕರಿಸಿದಂತೆಯೇ ಸರಿ. ಉದಾಹರಣೆಗೆ ೧೯೮೪ರ ಸಮೀಕ್ಷೆಯಂತೆ ಕರ್ನಾಟಕದಲ್ಲಿ ಈಡಿಗ ಅನಕ್ಷರ ಸಂಖ್ಯೆ ೩,೧೨,೬೬೪ ಆಗಿದೆ. ಈ ಅಂಕಿ-ಅಂಶವನ್ನು ಇಡೀ ರಾಜ್ಯದ ಎಲ್ಲಾ ಭೂ ಪ್ರದೇಶಗಳಿಗೆ ಸಮಾನವಾಗಿ ಹಂಚಲು ಸಾಧ್ಯವಿಲ್ಲ ಮತ್ತು ಒಟ್ಟು ಈ ಅಂಕಿ-ಅಂಶಗಳೇ ತಪ್ಪಾಗಿರುವ ಸಾಧ್ಯತೆಗಳೂ ಇವೆ. ಈ ಅಂಕಿ-ಅಂಶಗಳ ವಿವರಗಳು ಹಾಗೂ ಅವುಗಳನ್ನು ಸಂಗ್ರಹಿಸುವ ವಿಧಿ ವಿಧಾನಗಳು ಏನೇ ಇರಲಿ. ಈ ಅಂಕಿ- ಅಂಶಗಳ ಆಧಾರದ ಮೇಲೆ ಇಷ್ಟು ಜನ ಶಿಕ್ಷಿತರು, ಇಷ್ಟುಜನ ಮುಂದವರಿದವರು ಎಂದು ಹೇಳುವುದು ಸರ್ಕಾರದ ಕ್ರಮ. ಆದರೆ ಇಂದು ಶಿಕ್ಷಣದ ಮೂಲಕ, ಆರ್ಥಿಕಾಭಿವೃದ್ಧಿ ಸಾಧ್ಯವೇ? ಎನ್ನುವ ಪ್ರಶ್ನೆಯೂ ನಮ್ಮ ಮುಂದಿದೆ. ಶಿಕ್ಷಣವು ನಮಗೆ ನೀಡುತ್ತಿರುವ ಜ್ಞಾನ ಅಥವಾ ತರಬೇತಿಗಳಾದರೂ ಯಾವ ಸ್ವರೂಪದವು ಮತ್ತು ಯಾವಸ್ಥಿತಿಗೆ ದುರ್ಬಲ ವರ್ಗದವರನ್ನು ಈ ಶಿಕ್ಷಣ ಕೊಂಡೊಯ್ಯುತ್ತಿದೆ ಎನ್ನುವುದು ಪ್ರಮುಖ ಚರ್ಚೆಗೊಳಪಡಬೇಕಾಗಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ದುರ್ಬಲ ವರ್ಗದವರು ಇಂದು ಶಿಕ್ಷಣದ ಮೂಲಕ ತುಂಬಾ ನಿಸ್ಸಹಾಯಕವಾಗಿ ನಿರುದ್ಯೋಗಿಗಳಾಗಿ ಮಾರ್ಪಾಡುತ್ತಿದ್ದಾರೆ. ದೈಹಿಕ ಶ್ರಮದಿಂದಲೂ ಅವರನ್ನು ವಿಮುಖಗೊಳಿಸಿ ಬೌದ್ಧಿಕ ಶ್ರಮಕ್ಕೂ ಅವಕಾಶವಿಲ್ಲದ ಸ್ಥಿತಿಗೆ ಈ ಶಿಕ್ಷಣ ತಳ್ಳುತ್ತಿದೆ. ವರ್ಷವರ್ಷಕ್ಕೆ ಸಮೀಕ್ಷೆಗಳು ನಡೆಯುತ್ತಲೇ ಇವೆ. ಸರ್ಕಾದ ಕಾರ್ಯಕ್ರಮಗಳು ಅನುಷ್ಠಾನಕ್ಕೆ ಬರುತ್ತಲೇ ಇವೆ. ಆದರೆ ಇವು ಯಾವುವೂ ದುರ್ಬಲ ವರ್ಗವನ್ನು ಅದರ ಸಮಗ್ರ ಸ್ವರೂಪದ ಸ್ಥಿತಿಯನ್ನು ಒಂದಿಂಚೂ ಬದಲಿಸಲು ಸಾಧ್ಯವಾಗಿಲ್ಲ. ಇವುಗಳಿಗೆ ಕಾರಣಗಳನ್ನು ಹುಡುಕುವ ಕೆಲಸ ಆಗಬೇಕಿದೆ.

ಹೀಗೆ ಈಡಿಗರ ವಿವಿಧ ವರ್ಗಗಳು ರೂಪುಗೊಳ್ಳಲು ಕಾರಣಗಳನ್ನು ಹುಡುಕುವುದಾದರೆ ಅದನ್ನು ಇಡೀ ವ್ಯವಸ್ಥೆಯ ಸಂರಚನೆಯ ಹಿನ್ನೆಲೆಯಲ್ಲಿ ನೋಡಬೇಕು. ಇದಕ್ಕೆ ಬಹುಮುಖವಾದಂತ ಕಾರಣಗಳಿವೆ.

ಉತ್ತರ ಕರ್ನಾಟಕವನ್ನೂ ಒಳಗೊಂಡಂತೆ ಇಡೀ ಬಯಲು ಸೀಮೆಯ ಈಡಿಗರ ಸ್ಥಿತಿಗತಿಗಳು ಮಲೆನಾಡಿನ ಈಡಿಗರಿಗಿಂತ ಸ್ವಲ್ಪ ಭಿನ್ನವಾಗಿದೆ ಎಂದು ಗುರ್ತಿಸಲಾಗಿದೆ. ಇದಕ್ಕೆ ಕಾರಣಗಳನ್ನು ಅನೇಕ ನೆಲೆಗಳಲ್ಲಿ ಗುರ್ತಿಸಬಹುದಾಗಿದೆ.

ಈ ಭಾಗದ ಜನಗಳನ್ನು ಸರ್ಕಾರದ ಅಂಕಿ-ಅಂಶಗಳ ರೀತಿಯಲ್ಲಿ ವಿಂಗಡಿಸಿದರೆ ಪ್ರಮುಖವಾಗಿ ೪ ವರ್ಗಗಳನ್ನು ಕಾಣುತ್ತೇವೆ.

೧ನೇ ವರ್ಗದಲ್ಲಿ ಇಂದು ಭಾರಿ ಭೂಮಾಲಿಕರು ಬಂಡವಾಶಾಹಿಗಳು

೨ನೇ ವರ್ಗದಲ್ಲಿ ಮೇಲ್ಮಧ್ಯಮವರ್ಗವೆನ್ನಿಸಿಕೊಂಡವರು ಬರಬಹುದು ಉದಾ: ದ್ವಿತೀಯ ಮತ್ತು ತೃತೀಯ ದರ್ಜೆಯ ನೌಕರರು ಸಾಮಾನ್ಯ ಭೂಮಾಲಿಕರು ಮತ್ತು ಚಿಲ್ಲರೆ ಬಂಡವಾಳಶಾಹಿಗಳು

೩ನೇ ವರ್ಗದಲ್ಲಿ ೪ನೇ ದರ್ಜೆ ನೌಕರರು, ೧-೩ ಎಕರೆ ಭೂಮಿಯುಳ್ಳವರು, ನಿರುದ್ಯೋಗಿ ವಿದ್ಯಾವಂತರು ಮೊದಲಾದವರು.

೪ನೇ ವರ್ಗದಲ್ಲಿ ಭೂರಹಿತ ಕೂಲಿಕಾರ್ಮಿಕರು ಮತ್ತು ನಗರದ ಕಾರ್ಖಾನೆಯ ಶ್ರಮಿಕರು ಇತ್ಯಾದಿ. ಅಲ್ಲದೆ ಇಂದು ಸೇಂದಿ ಇಳಿಸುವ ಕೆಲಸಗಳಲ್ಲಿ ನಿರತರಾಗಿರುವ ಕೂಲಿಕಾರರು ಈ ಗುಂಪಿಗೆ ಸೇರುತ್ತಾರೆ.

ಈ ಭಾಗದ ಈಡಿಗರು ಹೀಗೆ ಅನೇಕ ವರ್ಗಗಳಾಗಿ ರೂಪಗೊಳ್ಳುವ ಹಿಂದೆ ಒಂದು ಚರಿತ್ರೆಯೇ ಇದೆ. ಪ್ರಾಚೀನ ಕಾಲದಲ್ಲಿ ಈಚಲು ವನಗಳಲ್ಲಿ ಸಾಮೂಹಿಕವಾಗಿ ಸೇಂದಿ ಇಳಿಸಿಕೊಂಡು ಮಾರಿ, ಜೀವನ ನಡೆಸುತ್ತಿದ್ದು. ಆಗ ಶೋಷಣೆಯ ಸ್ವರೂಪ ಈಗಿನಷ್ಟು ವ್ಯಾಪಕವಾಗಿರಲಿಲ್ಲ (ಈಡಿಗರ ಮಟ್ಟಿಗೆ ಈ ಮಾತನ್ನು ಸೀಮಿತಗೊಳ್ಳಿಸಲಾಗಿದೆ). ಚರಿತ್ರೆಯು ವಿಕಾಸವಾದಂತೆ ಉತ್ಪಾದನಾ ಸಾಧನಗಳು ಮತ್ತು ಸಲಕರಣೆಗಳು ಬದಲಾಗುತ್ತವೆ. ಹೀಗೆ ಬದಲಾದ ಸಂದರ್ಭವು ಸಮಾಜದ ಎಲ್ಲಾ ಕ್ಷೇತ್ರದ ಮೇಲೂ ತಮ್ಮ ಪ್ರಭಾವ ಪರಿಣಾಮಗಳನ್ನು ಬೀರುತ್ತದೆ. ಈ ಪರಿಣಾಮಗಳ ಫಲವಾಗಿ ಕಳ್ಳು ಇಳಿಸುವ ವೃತ್ತಿಯಲ್ಲಿದ್ದ ಈಡಿಗರು ಇಂದು ಛಿದ್ರವಾಗಿದ್ದಾರೆ. ಬೇರೆ ಬೇರೆ ವಲಯಗಳಿಗೆ ಬೇರೆ ಬೇರೆ ವರ್ಗಗಳಾಗಿ ಚದುರಿ ಹೋಗಿದ್ದಾರೆ.

ಇದುವರಿಗೆ ನೋಡಿದಂತೆ ಈಡಿಗರ ವೃತ್ತಿಯ ಬೆಳವಣಿಗೆ, ಆಮೂಲಕ ನಡೆದ ಇವರ ಸಾಮಾಜಿಕ, ಸ್ಥಿತ್ಯಂತರಗಳು ತುಂಬಾ ಸಂಕೀರ್ಣವಾಗಿವೆ.

(೧)ವಸಾಹಾತುಶಾಹಿ ಕಾಲಘಟ್ಟದಲ್ಲಿ ಕಳ್ಳು ಇಳಿಸುವ ವೃತ್ತಿಯು ಹೆಚ್ಚು ವ್ಯಾಪಕತೆಯನ್ನು ಪಡೆದುಕೊಂಡಿತು. ಇದಕ್ಕೆ ಕಾರಣಗಳನ್ನು ಹೀಗೆ ಗುರ್ತಿಸಬಹುದು (ಅ)ಬ್ರಿಟಿಷರಿಗೆ ಇದು ಆದಾಯದ

ಮೂಲಗಳಲ್ಲಿ ಒಂದಾಗಿದ್ದರಿಂದ (ಆ)ಕೈಗಾರಿಕಾ ಕ್ರಾಂತಿಯ ಫಲವಾಗಿ ಸಾರಿಗೆ ವ್ಯವಸ್ಥೆ ಲಭ್ಯವಾದ ಈ ವ್ಯವಸ್ಥೆ ಸೇಂದಿಯನ್ನು ವಿವಿಧ ಮರಾಟ ಕೇಂದ್ರಕ್ಕೆ ಕೊಂಡೊಯ್ಯುವ ವ್ಯವಸ್ಥೆಗೆ ಪೂರಕವಾಯಿತು (ಇ) ಇದರ ಪ್ರತಿಫಲವಾಗಿ ಸೇಂದಿಯ ಗುತ್ತಿಗೆದಾರರು ವ್ಯಾಪಕವಾಗಿ ಬೆಳೆದದ್ದು (ಈ) ನಂತರದ ಅವಸ್ಥೆಯಲ್ಲಿ ಹೋಬಳಿ, ತಾಲೂಕು, ಜಿಲ್ಲಾವರು ಗುತ್ತಿಗೆ ವ್ಯವಸ್ಥೆ ಬೆಳೆದದ್ದು. ಈ ಅವಕಾಶವನ್ನು ಬಳಸಿಕೊಂಡ ಗುತ್ತಿಗೆದಾರರು ಭಾರಿ ಬಂಡವಾಳ ಶಾಹಿಗಳಾಗಿ ಬೆಳೆದದ್ದು. ಈ ಹಂತಗಳು ಒಂದು ವರ್ಗದ ಹಿತಾಸಕ್ತಿಯ ಅನುಕೂಲಕ್ಕಾಗಿ ಉದ್ದೇಶಪೂರ್ವಕವಾಗಿ ಹಂತ ಹಂತಗಳಲ್ಲಿ ರೂಪಗೊಂಡಿದೆ.

ಈ ನಾಲ್ಕು ಹಂತಗಳಲ್ಲಿ ಹೆಂಡವು ಬಂಡವಾಳಶಾಹಿಯಾಗಿ ಬೆಳೆಯಿತು. ಹೀಗೆ ಬೆಳೆದಂತೆ ಬಾರಿ ಬಂಡವಾಳಶಾಹಿಗಳು ರೂಪಗೊಂಡರು. ಒಂದು ಕಡೆ ಬಂಡವಾಳಶಾಹಿಗಳು ರೂಪಗೊಂಡರೆ, ತೆರಿಗೆ ನೀಡಿ ಲೈಸೆನ್ಸ್ ಪಡೆದು ವೃತ್ತಿಯನ್ನು ಮುಂದುವರಿಸಲಾರದೇ ಹೋದವರು,ಈ ಬಂಡವಾಳಿಗರ ಕೆಳಗೆ ಕೂಲಿಕಾರ್ಮಿಕರಾಗಿ ರೂಪಗೊಂಡರು. ಈ ವ್ಯವಸ್ಥೆ ೧೯೩೦ರವರೆಗೂ ಅವ್ಯಾಹತವಾಗಿ ನಡೆದುಕೊಂಡು ಬಂತು. ೧೯೩೦ರ ನಂತರ ಸ್ವಾತಂತ್ರ ಚಳುವಳಿಯು ಭಾರತಾದ್ಯಂತ ವ್ಯಾಪಿಸಿತು. ಗಾಂಧೀಜಿ ಈ ಸಂದರ್ಭದಲ್ಲಿ ಬ್ರಿಟಿಷರ ವಿರುದ್ಧ ಹೋರಾಟದ ಪ್ರಮುಖ ನಾಯಕರಾಗಿದ್ದು ಸರಿಯಷ್ಟೆ. ೧೯೩೦ರಲ್ಲಿ ಅಸಹಕಾರ ಚಳುವಳಿಗೆ ಗಾಂಧೀ ಕರೆ ನೀಡಿದರು. ಆ ಸಂದರ್ಭದಲ್ಲಿ ಮದ್ಯಪಾನವನ್ನು ತ್ಯಜಿಸಲು ಕರೆಕೊಟ್ಟರು. ಇದರ ಪರಿಣಾಮವಾಗಿ ಹೆಂಡದಂಗಡಿಗಳ ಪಿಕೆಟಿಂಗ್ ಗಳು ನಡೆದುವು. ಈಚಲು, ತಾಳೆವನಗಳಿಗೆ ನುಗ್ಗಿ ಚಳುವಳಿಕಾರರು ನುಗ್ಗಿ ಮರಗಳನ್ನು ಕಡಿದು ಭಾರೀ ಪ್ರಮಾಣದಲ್ಲಿ ಹಾನಿಯುಂಟು ಮಾಡಿದರು (ವಿವರಕ್ಕೆ ನೋಡಿ: ಕರ್ನಾಟಕ ರಾಜ್ಯ ಗ್ಯಾಸೆಟಿಯರ್ (ಸಂ), ಪು:೨೦೧-೨೦೨, ಸೂರ್ಯನಾಥ್ ಯು ಕಾಮತ್ , ಭಾಗ-೩, ೧೯೮೬). ಸೇಂದಿ ಅಂಗಡಿಗಳನ್ನು ಮುಚ್ಚಲಾಯಿತು. ಈಚಲು ಮರಗಳನ್ನು ಕಡಿಯಲಾಯಿತು. ಈ ಸಂದರ್ಭದಲ್ಲಿ ಕೂಲಿಗಳಾಗಿ ಈಚಲು ವನಗಳಲ್ಲಿದ್ದ ಈಡಿಗರಿಗೆ ಬಹು ತೊಂದರೆಯಾಯಿತು. ಇದಕ್ಕೆ ಪರ್ಯಾಯವಾಗಿ ಜೀವನದ ಬೇರೆ ಮಾರ್ಗಗಳನ್ನು ಹುಡುಕಿಕೊಳ್ಳುವ ಪ್ರಯತ್ನ ಮಾಡಿದರು. ಬಂಡವಾಳಶಾಹಿ ಈಡಿಗರು; ಅರೇಕಾ ಮತ್ತು ಲಿಕ್ಕರ್ ಷಾಪ್ ಗಳನ್ನು ಸರ್ಕಾರದ ಅನುಮತಿಯಿಂದ ನಡೆಸುತ್ತಿದ್ದರು. ಮತ್ತು ಇತರೆ ವ್ಯಾಪಾರಿ ವಲಯಗಳಿಗೂ ಪ್ರವೇಶಿಸಿದರು. ಅವರಲ್ಲಿದ್ದ ಬಂಡವಾಳ ಇದಕ್ಕೆ ಸಹಕರಿಸಿತು. ಉದಾ: ಭೂಮಿಯನ್ನು ಕೊಂಡು ಭೂಮಾಲಿಕರಾದವರಿರಬೇಕು, ಇತರೇ ವ್ಯಾಪರಗಳಿಗೆ ಪ್ರವೇಶಿಸಿದ ರಿರಬೇಕು. ಆದರೆ ಕೂಲಿಕಾರ್ಮಿಕರಿಗೆ ಈ ಸಂದರ್ಭ ದಿಗಿಲನ್ನುಂಟು ಮಾಡಿತು. ಅನೇಕರು ಕೆಲಸಕ್ಕಾಗಿ ನಗರದ ಕಾರ್ಖಾನೆಗಳಿಗೆ ವಲಸೆ ಹೋದ

ಸಾಧ್ಯತೆಗಳಿವೆ. ಹಳ್ಳಿಯಲ್ಲಿದ್ದವರು ಭೂಮಾಲಿಕರ ಕೈಕೆಳಗೆ ಗೇಣೀದಾರರಾಗಿಯೋ, ಕೂಲಿಗಾಳಾಗಿಯೋ ಸೇರಿಕೊಂಡಿದ್ದಾರೆ. ಇಂಥವರ ಜೀವನ ಇಂದಿಗೂ ಹೀಗೆಯೇ ಇದೆ. ಉದಾ: ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲೂಕಿನ ಕಗ್ಗಲಕಟ್ಟೆ ಎಂಬ ಗ್ರಾಮವನ್ನು ತೆಗೆದುಕೊಳ್ಳೋಣ.

ಈ ಹಳ್ಳಿಯಲ್ಲಿ ೧೨೫ ಮನೆಗಳಿವೆ. ಈಡಿಗರು ೨೫ ಮನೆಯವರಿದ್ದಾರೆ. ಗೊಲ್ಲರು ೮೦ ಮನೆಯವರಿದ್ದು ಬೇಡರು ೧೫ ಮನೆಯವರಿದ್ದಾರೆ, ಇತರೆ ೫ ಮನೆಗಳಿವೆ. ಇಲ್ಲಿನ ಬೆಲ್ಲದ ಈಡಿಗರು ಬಹುತೇಕ ಕಳ್ಳು ತೆಗೆಯುವ ವೃತ್ತಿಯವರೇ ಆಗಿದ್ದರು. ಇಲ್ಲಿಯ ದೊಡ್ಡ ಗಂಗಪ್ಪ ಎಂಬುವರು ಕೊಡುವ ಮಾಹಿತಿಯ ಪ್ರಕಾರ ಹಿಂದೆ ಇವರೇ ಸೇಂದಿ ತೆಗೆದು ಮಾರುತ್ತಿದ್ದರು. ಗುತ್ತಿಗೆ ವ್ಯವಸ್ಥೆ ತಾಲೂಕು, ಜಿಲ್ಲಾವಾರು, ಬೆಳೆದಂತೆ ಹಣದ ಕೊರತೆಯಿಂದ ಈ ವೃತ್ತಿಯನ್ನು ಬಿಟ್ಟರು. ಜೋಡಿ ಗ್ರಾಮವೆಂಬಲ್ಲಿ ಕಾಡು ಕಡಿದು ಜಮೀನು ಮಾಡಿದ್ದರೂ ಸಹ, ಅಂದಿನ ಭೂ ಮಾಲಿಕರಿಗೆ ಕೊಡಬೇಕಾದ ಗೇಣಿ ಸಮಸ್ಯೆ ಮತ್ತು ಅಸ್ಥಿರವಾದ ಮಳೆಯ ಸಮಸ್ಯೆಗಳಿಂದ ಆ ಊರನ್ನು ಬಿಟ್ಟು ಕಗ್ಗಲಕಟ್ಟೆಗೆ ಬಂದು ನೆಲೆಸಿದ್ದಾರೆ. ಈಗ ರೈತಾಪಿ ಕೂಲಿಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ಕೂಲಿ ಕೆಲಸ ಸಿಗದಿದ್ದರೆ ಜೀವನಕ್ಕೆ ತುಂಬಾ ತೊಂದರೆ.ಇಂಥದ್ದೆ ಸಮಸ್ಯೆ ಈ ಊರಿನ ಬಹುತೇಕರು ಇದ್ದಾರೆ.

೧) ಈ ಊರಿನಲ್ಲಿ ಒಟ್ಟು ಈಡಿಗರ ಸಂಖ್ಯೆ- ೧೦೦

೨) ಅಕ್ಷರಸ್ಥರು - ೧೬

೩) ಜಮೀನು ಇರುವುದು ನಾಲ್ಕು ಕುಟುಂಬಕ್ಕೆ ಮಾತ್ರ (೨ ರಿಂದ ೩ ಎಕರೆ)

೪) ಉಳಿದವರೆಲ್ಲಾ ಅನಕ್ಷರಸ್ಥರು ಮತ್ತು ಕೂಲಿಕಾರ್ಮಿಕರು

೫) ಈ ಊರಿಂದ ಹೊರಗಡೆ ವಲಸೆ ಹೋಗಿ ಕೆಲಸ ಮಾಡುತ್ತಿರುವವರು ೧೮ ಮಂದಿ (ಕೆಲಸದ ವಿವರ ಹೀಗಿದೆ: ಬಾಂಬೆಯಲ್ಲಿ ಐಸ್ ಕ್ರೀಮ್ ಮಾರುವುದು, ಸಿಮೆಂಟ್ ಕಾರ್ಖಾನೆಗಳಲ್ಲಿ ಕೂಲಿಗಳಾಗಿ ದುಡಿಯುವುದು ಇತ್ಯಾದಿ ಈ ಹಳ್ಳಿಗೆ ಯಾವುದೇ ಸಾರಿಗೆ ವ್ಯವಸ್ಥೆಯಿಲ್ಲ.

ಹೀಗೆ ಒಂದು ವರ್ಗ ಸಂಪೂರ್ಣ ಕೂಲಿಕಾರ್ಮಿಕರಾಗಿ ರೂಪುಗೊಳ್ಳಲು ಪಾನನಿರೋಧವು ಕಾರಣವಾಗಿದೆ. ಇನ್ನು ಇದೇ ಹಳ್ಳಿಯ ಕೆಲವು ಜನ ೧೯೮೦ರ ವರೆಗೂ ದೂರದ ಊರುಗಳ ಈಚಲು ವನಗಳಲ್ಲಿ 'ಕಳ್ಳು' ಇಳಿಸುವವರಾಗಿಯೇ ಕೆಲಸ ಮಾಡುತ್ತಿದ್ದರಂತೆ. ಸರ್ಕಾರ ಪಾನ ನಿಷೇಧವನ್ನು ಜಾರಿಗೆ ತಂದ ನಂತರ ವಿಧಿಯಿಲ್ಲದೆ ಈ ಕೆಲಸವನ್ನು ಮಾಡಬೇಕಾಗಿದೆ ಎನ್ನುತ್ತಾರೆ.

ಹೊಸದುರ್ಗ ತಾಲೂಕಿನ ದೊಡ್ಡ ತೇಕಲವಟ್ಟಿಯಲ್ಲಿ ಸುಮಾರು ೩೦ ಈಡಿಗರ ಮನೆಗಳಿವೆ. ಈಚೆಗೆ ಎಲ್ಲರೂ ನಗರ ಪ್ರದೇಶಗಳಲ್ಲಿ ಚಿಕ್ಕಪುಟ್ಟ ಕ್ಯಾಂಟೀನ್ ಗಳನ್ನು ನಡೆಸುತ್ತಾ ಜೀವನ ಸಾಗಿಸುತ್ತಿದ್ದಾರೆ. ಮತ್ತೆ ಕೆಲವರು ಸಾರಾಯಿ ವ್ಯಾಪಾರಿಗಳಾಗಿದ್ದಾರೆ. ಸಾಮಾನ್ಯವಾಗಿ ಪ್ರತಿ ಊರುಗಳಲ್ಲಿ ಈಡಿಗರೇ ಹೆಚ್ಚಾಗಿ ಸಾರಾಯಿ ಅಂಗಡಿಗಳಲ್ಲಿ ವೆಂಡರಗಳಾಗೀ ಕೆಲಸ ಮಾಡುತ್ತಿರುತ್ತಾರೆ. ಆದರೆ ಈ ಉದ್ಯೋಗ ೧೦೦ಕ್ಕೆ ಒಬ್ಬ ಈಡಿಗನಿಗೆ ಮಾತ್ರ ಲಭ್ಯವಾಗಿದೆ. ಉಳಿದವರೆಲ್ಲರೂ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗಿ, ಅಂಗಡಿ, ಹೋಟೇಲು ಮತ್ತು ಕಾರ್ಖಾನೆಗಳಿಗೆ ಕೆಲಸಕ್ಕೆ ಸೇರಿಕೊಂಡಿದ್ದಾರೆ. ಈಡಿಗರಲ್ಲಿ ಶ್ರೀಮಂತರು ತುಂಬಾ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಬಹುತೇಕ ಶ್ರೀಮಂತರು ನಗರಗಳಲ್ಲಿ ಮದ್ಯವ್ಯಾಪರ ಮತ್ತಿತರೆ ವಲಯಗಳಲ್ಲಿ ತೊಡಗಿಕೊಂಡಿದ್ದಾರೆ. ಬೆಂಗಳೂರು, ತುಮಕೂರು, ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಮದ್ಯ ಗುತ್ತಿಗೆದಾರರಾಗಿ ಶ್ರೀಮಂತರಾದ ಕೆಲವು ಈಡಿಗರು ರಾಜಕೀಯವಾಗಿಯೂ ಮೇಲೆ ಬಂದಿದ್ದಾರೆ. ಇಲ್ಲಿ ಈಡಿಗರು ಬಹುಸಂಖ್ಯಾತರಲ್ಲದಿದ್ದರೂ ಅವರ ಆರ್ಥಿಕ ಶಕ್ತಿಯು ಅವರನ್ನು ಆಮಟ್ಟಕ್ಕೆ ಏರಿಸಲು ಸಾಧ್ಯವಾಗಿದೆ. ರಾಜಕೀಯವಾಗಿ ಈಡಿಗರ ಕ್ಷೇತ್ರಗಳು ಸಾಕಷ್ಟಿವೆ (ವಿವರಗಳಿಗೆ ನೋಡಿ: ಈಡಿಗ, ಸ್ವರ್ಣ ಸಂಚಿಕೆ, ಪು: ೩೨, ೩೩, ೧೯೯೫).

ವಿಶೇಷವಾಗಿ ಕಳ್ಳು ಇಳಿಸುತ್ತಿದ್ದ ಕೂಲಿಕಾರ್ಮಿಕ ಈಡಿಗರ ಜೀವನದ ಜೊತೆ, ಸರ್ಕಾರವೂ ಪಾನನಿಷೇಧವೆಂಬ ನೀತಿಯನ್ನು ಜಾರಿ ಮಾಡುವುದು ಮತ್ತು ಸಡಿಲಿಸುವುದನ್ನು ನಿರಂತರವಾಗಿ ಮಾಡುತ್ತಾ, ಆಟವಾಡಿದೆ. ಅದಕ್ಕೆ ಪರ್ಯಾಯವಾಗಿ ಈ ಜನರ ಪುನರ್ವಸತಿ ಕಲ್ಪಿಸುವ ಯಾವುದೇ ಕಾರ್ಯಗಳೂ ನಡೆದಿಲ್ಲ. ಒಂದು ವೇಳೆ ಸರ್ಕಾರದಿಂದ ಏನೇ ಕಾರ್ಯಯೋಜನೆಗಳು ನಡೆದರೂ ಇಡೀ ವ್ಯವಸ್ಥೆಯೇ ಇಂದು ವಿವಿಧ ವರ್ಗಗಳಾಗಿ ಸಂಕೀರ್ಣಾವಸ್ಥೆ ಮುಟ್ಟಿರುವಾಗ ಈ ಯೋಜನೆಗಳು ಗುರಿಮುಟ್ಟಲಾರವು. ಇಡೀ ವ್ಯವಸ್ಥೆ ಇಂದು ಬಂಡವಾಳಶಾಹಿಗಳ ಹಿಡಿತದಲ್ಲಿದೆ. ಇಂಥ ವರ್ಗ ವ್ಯವಸ್ಥೆಯೊಳಗಡೆ, ಸರ್ಕಾರದ ಕಣ್ಣೊರೆಸುವ ಯೋಜನೆಗಳು ತೀವ್ರವಾದ ಯಾವುದೇ ಬದಲಾವಣೆಯನ್ನು ತರಲು ಸಾಧ್ಯವಾಗುವುದು ತುಂಬಾ ಕಷ್ಟದ ಮಾತು. ವರ್ಗತಾರತಮ್ಯವನ್ನಿಟ್ಟುಕೊಂಡು ಆಳುವ ಯಾವ ಬಗೆಯ ಸರ್ಕಾರದ ಯೋಜನೆಗಳ ಗತಿಯೂ ಇಷ್ಟೆ. ಉದಾ: ಭಾರತದ ಇದುವರೆಗಿನ ಸ್ಥಿತಿಯನ್ನು ಗಮನಿಸುವುದು.

ಕರ್ನಾಟಕದಲ್ಲಿ ೧೯೩೭ರಿಂದೀಚೆಗೆ ಪಾನನಿರೋಧ ನೀತಿಗೆ ಜಾರಿಗೆ ಬರುತ್ತಲೂ ಇದೆ ಸಡಿಲವಾಗುತ್ತಲೂ ಇದೆ. ಈ ಹಾವು ಏಣಿ ಆಟದಲ್ಲಿ, ಈಡಿಗರ ಜೀವನ ವಿಧಾನ ತೀರಾ ದುರವಸ್ಥೆಯನ್ನು ಮುಟ್ಟಿದೆ.

ಉದಾ: ಪಾನನಿರೋಧ ಕಾರ್ಯಕ್ರಮದ ಅನುಷ್ಠಾನ ಕುರಿತು ನೋಡೋಣ.

೧. ೧೯೩೭ರಲ್ಲಿ ಕಾಂಗ್ರೆಸ್ ಮಂತ್ರಿಗಳು ಪಾನನಿರೋಧವನ್ನು ಒಪ್ಪಿ ಅಲ್ಲಲ್ಲಿ ಜಾರಿಗೆ ತಂದರು

೨. ಹಳೆಯ ಮೈಸೂರು ಪ್ರದೇಶದಲ್ಲಿ ೧೯೩೮ರಲ್ಲಿ ಪ್ರಾಯೋಗಿಕವಾಗಿ ರಾಮನಗರ ಚನ್ನಪಟ್ಟಣ ತಾಲೂಕುಗಳಲ್ಲಿ ಜಾರಿಗೆ ತರಲಾಯಿತು.

೩.೧೯೪೭ರಲ್ಲಿ ಮ ಳಕಾಲ್ಮೂರು, ಪಾವಗಡದಲ್ಲಿ ಜಾರಿಗೆ ತರಲಾಯಿತು.

೪. ೧೯೫೬ರ ವೇಳೆಗೆ ೫ ಜಿಲ್ಲೆಗಳಲ್ಲಿ ಜಾರಿಗೆ ತರಲಾಯಿತು. ಇದೇ ಅವಧಿಯಲ್ಲಿ ಮೊದಲ ಬಾರಿಗೆ ಪಾನ ಪ್ರತಿಬಂಧಕವನ್ನು ಅಳವಡಿಸಲಾಯಿತು. ಹಳೆಮೈಸೂರಿನ ಕೆಲವು ಜಿಲ್ಲೆಗಳು ಮತ್ತು ಕಲ್ಬುರ್ಗಿ ಜಿಲ್ಲೆಯನ್ನು ಹೊರತು ಪಡಿಸಿ, ಉಳಿದೆಲ್ಲಾ ಪ್ರದೇಶದಲ್ಲಿ ಜಾರಿಯಲ್ಲಿತ್ತು.

೫. ೧೯೬೭ರ ಅಧಿ ನಿಯಮವನ್ನು ಜಾರಿಗೆ ತಂದು ೧೯೬೧ರ ಕರ್ನಾಟಕ ಪಾನನಿರೋಧ ಅಧಿನಿಯಮ ಸೂಚಿಸಿದ್ದ ಸ್ಥಳಗಳಲ್ಲಿ ಪಾನನಿರೋಧವನ್ನು ಸಡಿಲಿಸಬಹುದಾದ ಅನುಕೂಲವನ್ನು ಪಡೆಯಲಾಯಿತು.

ಪಾನ ನಿರೋಧವನ್ನು ತೆಗೆದು ಹಾಕಿದರೂ ಕೂಡ, ಕಳ್ಳಭಟ್ಟಿ ಸಾರಾಯಿಯ ತಯಾರಿಕೆ ಮುಂದುವರೆಯುತ್ತಲೇ ಇತ್ತು.

೬. ೧೯೮೧ರಲ್ಲಿ ವಿಷಪೂರಿತ ಕಳ್ಳಭಟ್ಟಿ ಕುಡಿದು ಸಾವಿಗೀಡಾದ ಘಟನೆಯ ಹಿನ್ನೆಲಯಲ್ಲಿ ನ್ಯಾಯಧೀಶ ದೇಸಾಯಿ ನೇತೃತ್ವದ ವಿಚಾರಣಾ ಸಮಿತಿ ನಿಯಮಿಸಲಾಯಿತು. ಇದು ೧೯೮೩ರಲ್ಲಿ ವರದಿ ಸಲ್ಲಿಸಿತು. ೭, ೧೯೭೧ರಲ್ಲಿ ಪಾನ ಸಂಯಮ ಮಂಡಳಿ ಅಸ್ಥಿತ್ವಕ್ಕೆ ಬಂತು.

(ಇದಿಷ್ಟು ಪಾನ ನಿರೋಧ ಕುರಿತ ಸರ್ಕಾರದ ನೀತಿಯ ಸ್ಥೂಲ ರೂಪ. ವಿವರಕ್ಕೆ ನೋಡಿ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ (ಸಂ), ಸೂರ್ಯನಾಥ್ ಯು ಕಾಮತ್ , ಪು:೨೦೧, ೨೦೨, ಭಾಗ-೩).

ಪಾನನಿರೋಧ ಕುರಿತು ಸರ್ಕಾರವು ಅನುಸರಿಸಿರುವ ನೀತಿಯು ಈಡಿಗ ಕೂಲಿಕಾರ್ಮಿಕರ ಮೇಲೆ ಬೀರಿರಬಹುದಾದ ಪರಿಣಾಮಗಳನ್ನು ಆಲೋಚಿಸಲು ಅವಕಾಶ ಕೊಟ್ಟಿದೆ. ಪಾನನಿರೋಧ ಜಾರಿಗೆ ಬಂದರೆ ಕಳ್ಳು ಇಳಿಸುವವರಿಗೆ ಕೆಲಸವಿಲ್ಲ. ಅದಕ್ಕೆ ಪರ್ಯಾಯವಾಗಿ ಇತರೆ ಕೂಲಿ ಕೆಲಸಗಳಿಗೆ ಹೊಂದಿಕೊಳ್ಳುತ್ತಿರುವಾಗಲೇ ಪುನಃ ನಿರೋಧ ನೀತಿಯನ್ನು ಸಡಿಲಿಸುವುದರಿಂದ ಮತ್ತೆ ಈ ವೃತ್ತಿಗೆ ಬರುತ್ತಾರೆ. ಈ ಬಗೆಯ ಏಳು ಬೀಳುವಿನ ಕಥೆ ಬ್ರಿಟಿಷರಿಂದ ಭಾರತದವರಿಗೆ ಅಧಿಕಾರ ಲಭ್ಯವಾದಂದಿನಿಂದ ನಿರಂತರವಾಗಿ ನಡೆಯುತ್ತಲೇ ಬಂದಿದೆ.

೧. ಇಡೀ ರಾಜ್ಯಕ್ಕೆ ಅನ್ವಯವಾಗುವಂತೆ ೧-೭-೧೯೯೦ನೇ ವರ್ಷದಲ್ಲಿ ಸೇಂದಿ ನಿಷೇಧ ಜಾರಿಗೆ ಬಂದಿದೆ (ನೋಡಿ : No.HD/೨೭/EDC/೯೦, Dated ೧-೦-೧೯೯೦).

೨. ೧೭-೧೦-೧೯೯೦ ರಂದು ದಕ್ಷಿಣ ಕನ್ನಡದಲ್ಲಿ ಸೇಂದಿ ನಿಷೇಧ ರದ್ದಾಗಿ ಮಾರಾಟಕ್ಕೆ ಅನುಮತಿ ದೊರಕಿದೆ (ಕಾರಣಗಳನ್ನು ಮುಂದೆ ಚರ್ಚಿಸಲಾಗಿದೆ)

೩. ೧೯೯೪-೯೫ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಚಿತಾಪುರ ಚಿಂಚೋಳಿ, ಸೇಡಂ, ಯಳಂದೂರು ತಾಲೂಕುಗಳು ಮತ್ತು ಗುಲ್ಬರ್ಗ ಜಿಲ್ಲೆ ರಾಯಚೂರು ಜಿಲ್ಲೆ ಮತ್ತು ದೇವ ದುರ್ಗ ತಾಲೂಕುಗಳಲ್ಲಿ, ಸೇಂದಿ ಮಾರಾಟಕ್ಕೆ ಅನುಮತಿ ನೀಡಿದೆ. ಇದಕ್ಕೆ ಕಾರಣ, ಅಲ್ಲಿಯ ಸೇಂದಿ ಕೂಲಿಕಾರ್ಮಿಕರ ಸಂಖ್ಯೆ ಹೆಚ್ಚಾಗಿರುವುದೂ ಆಗಿದೆ. ದಕ್ಷಿಣ ಕನ್ನಡ ಜಿಲ್ಲೆಯವರು ಮೂರ್ತದಾರರ ಸಂಘವನ್ನು ರೂಪಿಸಿಕೊಂಡು ಹೋರಾಟ ಮಾಡಿ ಸೇಂದಿ ತೆಗೆಯುವುದನ್ನು ಉಳಿಸಿಕೊಂಡಿದ್ದಾರೆ. ಹಾಗೆಯೇ ಗುಲ್ಬರ್ಗಾ, ರಾಯಚೂರು ಜಿಲ್ಲೆಗಳಲ್ಲಿ ಈಡಿಗರು ಬಹುಸಂಖ್ಯಾತರೇ ಆದ್ದರಿಂದ ಸಂಘಟನೆ ಸಾಧ್ಯವಾಯಿತು. ಈಡಿಗರಲ್ಲೆ ರಾಜಕೀಯವಾಗಿ ಮುಂದೆ ಬಂದ ಕೆಲವು ರಾಜಕಾರಣಿಗಳು ಇಂಥ ಅವಕಾಶವನ್ನು ಬಳಸಿಕೊಂಡರು. ಇದರ ಹಿಂದೆ ರಾಜಕಾರಣಿಗಳಿಗೆ ಇರಬಹುದಾದ ಆಸಕ್ತಿಯ ಸ್ವರೂಪ ಬಹುಮುಖವಾದದ್ದು. ಈ ಪ್ರದೇಶದಲ್ಲಿ ಈಡಿಗ ರಾಜಕಾರಣಿಗಳು, ಸೇಂದಿ ಮತ್ತು ಮದ್ಯ ಗುತ್ತಿಗೆದಾರರೂ ಆಗಿದ್ದಾರೆ. ಹಾಗಾಗಿ ಅವರಿಗೆ ಕೂಲಿಕಾರ್ಮಿಕರನ್ನು ಒಗ್ಗೂಡಿಸಿ ಹೋರಾಟಕ್ಕೆ ತರುವ ಅಗತ್ಯವಿತ್ತು. ಇದರ ಫಲವಾಗಿ ಈ ಕಡೆಗಳಲ್ಲಿ ಹೋರಾಟಗಳು ಪ್ರಬಲವಾದವು. ಇವರೇ ರಾಜಕೀಯ ಪ್ರತಿನಿಧಿಗಳೂ ಆಗಿ ಆಯ್ಕೆಯಾದ್ದರಿಂದ ಸರ್ಕಾರಕ್ಕೆ ಒತ್ತಾಯ ತಂದರು. ನಿಷೇಧವನ್ನು ಪುನಃ ಸಡಿಲಗೊಳಿಸಿ ಮಾರಾಟಕ್ಕೆ ಅವಕಾಶ ನೀಡಿದರು. ದಕ್ಷಿಣಕನ್ನಡದ ಹೋರಾಟ ಇದಕ್ಕಿಂತ ಸ್ವಲ್ಪ ಭಿನ್ನವಾಗಿರುವ ಸಾಧ್ಯತೆಯಿದೆ.

ಮೇಲಿನ ವಿವರಗಳನ್ನು ಗಮನಿಸಿದರೆ, ಈ ಪ್ರದೇಶಗಳಲ್ಲೂ ಹೋರಾಟ ಹೆಚ್ಚಾಗಿ, ಸೇಂದಿ ಇಳಿಸಲು ಮತ್ತು ಮಾರಲು ಅವಕಾಶಗಿಟ್ಟಿಸಿ ಕೊಂಡಿದ್ದರ ಹಿನ್ನೆಲೆಯಲ್ಲಿ ಯಾವ ಹಿತಾಸಕ್ತಿಗಳು ಯಾವ ವರ್ಗದ ಪರವಾಗಿವೆ ಎನ್ನುವುದು ಸ್ಪಷ್ಟವಾಗುತ್ತವೆ. ಸೇಂದಿ ನಿಷೇಧವಾದರೆ ಗುತ್ತಿಗೆದಾರರ ಅಸ್ತಿತ್ವಕ್ಕೂ ಧಕ್ಕೆಯಾಗುತ್ತದೆ ಎನ್ನುವುದು ಗಮನಾರ್ಹ ಸಂಗತಿ.

ಈ ಹೋರಾಟದ ಫಲವಾಗಿ ಕೂಲಿಕಾರ್ಮಿಕರ ಜೀವನದಲ್ಲಾದ ಪರಿಣಾಮ ಮತ್ತು ಬದಲಾವಣೆಗಳನ್ನು ಗುರ್ತಿಸುವುದು ಮುಖ್ಯ. ಏಕೆಂದರೆ ಈ ಸಂಘಟನೆಯಲ್ಲಿ ಮೇಲು ನೋಟಕ್ಕೆ ಭಾಗವಹಿಸಿದ್ದವರೆಲ್ಲರೂ ಸೇಂದಿ ಇಳಿಸುವ ಮತ್ತು ಮಾರಾಟ ಮಾಡುವ ಕೂಲಿಕಾರ್ಮಿಕರು ಮಾತ್ರ. ಇದರ ಮುಂದಾಳತ್ವವನ್ನು ಅಬಕಾರಿ ಗುತ್ತಿಗೆದಾರರು ಮತ್ತು ರಾಜಕಾರಣಿಗಳು ವಹಿಸಿದ್ದರು. ಈ ಹೋರಾಟ ಕೂಲಿಕಾರ್ಮಿಕರ ಹೋರಾಟವೆಂದೇ ಹೆಸರಾಗಿದೆ.

ಹಿಂದೆ ಪಾನ ನಿಷೇಧದಿಂದ, ತಮ್ಮ ಕೆಲಸ ಕಳೆದುಕೊಂಡ ಕೂಲಿಕಾರ್ಮಿಕರು ಬೇರೆ ಬೇರೆ ಕೂಲಿಗಳಿಗೆ ಅಂಟಿಕೊಳ್ಳಲು ಯತ್ನಿಸುತ್ತಿದ್ದರು. ತಕ್ಷಣ ನಿಷೇಧ ಸಡಿಲಿಸಿತು. ಪುನಃ ಈ ವೃತ್ತಿಗೆ ಬಂದರು. ಪುನಃ ನಿಷೇಧ, ಮತ್ತೆ ಕೂಲಿ ಕಳೆದುಕೊಂಡರು. ಈ ಪರಿಣಾಮವನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ ಇಡೀ ಕೂಲಿಕಾರ್ಮಿಕರ ಜೀವನ ತೀರಾ ಅನಿಶ್ಚಿತವಾಯಿತು. ದಿಕ್ಕುತಪ್ಪಿತು.

೧೯೯೪-೯೫ರಲ್ಲಿ ಪುನಃ ಸೇಂದಿ ಮಾರಾಟಕ್ಕೆ ಗುಲ್ಬರ್ಗಾ, ರಾಯಚೂರು ಮೊದಲಾದ ಉತ್ತರ ಕರ್ನಾಟಕದ ಜಿಲ್ಲೆ, ತಾಲೂಕುಗಳಲ್ಲಿ ಅವಕಾಶವನ್ನು ಸರ್ಕಾರ ಕಲ್ಪಿಸಿದೆ. ಈಗಲಾದರೂ ಇವರ ಜೀವನದ ತಳಪಾಯದಲ್ಲಾದ ಬದಲಾವಣೆಯೇನು? ಮಾಮೂಲಿ ಕೂಲಿಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಇಷ್ಟು ಮಾತ್ರವಲ್ಲ ಮತ್ತೆ ಸರ್ಕಾರವು ಸೇಂದಿ ನಿಷೇಧವನ್ನು ಜಾರಿಗೆ ತಂದರೆ ಯಾವಾಗ ಕೆಲಸ ಕಳೆದುಕೊಳ್ಳುತ್ತೇವೊ ಎನ್ನುವ ಭಯವೂ ಇಂದೂ ಇವರನ್ನು ಕಾಡುತ್ತಿದೆ. ಅವರ ಕೂಲಿಯಿಂದ ಜೀವನಾವಶ್ಯಕತೆಗಳು ಈಡೇರಲು ಸಾಧ್ಯವಿಲ್ಲ. ಸಮಾಜದ ಇತರೆ ಭೌತಿಕ ಮತ್ತು ಮಾನಸಿಕ ಒತ್ತಡಗಳಿಂದ ತಪ್ಪಿಸಿಕೊಳ್ಳಲೂ ಸಾಧ್ಯವಿಲ್ಲ. ಇಂದಿನ ಬಂಡವಾಳಶಾಹಿ ಉತ್ಪಾದನಾ ಮಾದರಿಯು ಜಾತಿಯ ಭಾವನಾತ್ಮಕ ಬೇರುಗಳನ್ನು ಕತ್ತರಿಸಿ ಹಾಕುತ್ತಿದೆ. ಅಂದ ಮೇಲೆ ಈ ಜನರು ಬಹುಸಂಖ್ಯಾತರಾಗಿರುವ ಪ್ರದೇಶಗಳಲ್ಲೂ ಮೇಲೆ ತಿಳಿಸಿದ ಹಿಂಸೆಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

ಕೈಗಾರಿಕಾ ಕ್ರಾಂತಿಯ ಫಲವಾಗಿ ಇಂದು ತೃತೀಯ ಜಗತ್ತುಗಳ ಉತ್ಪಾದನಾ ವಿಧಾನದಲ್ಲಿ ತೀವ್ರ ವೇಗದ ಬದಲಾವಣೆಗಳಾಗುತ್ತಿವೆ. ಅಂದ ಮಾತ್ರಕ್ಕೆ ಹಿಂದಿನ ಊಳಿಗಮಾನ್ಯ ವ್ಯವಸ್ಥೆಯ ಉತ್ಪಾದನ ಮಾದರಿ ಸಂಪೂರ್ಣ ನಾಶವಾಗಿಲ್ಲ. ಇವೆರೆಡೂ ಉತ್ಪಾದನಾ ವಿಧಾನಗಳಲ್ಲಿ ಕೂಲಿಕಾರ್ಮಿಕರು ತೀರಾ ಹಿಂಸಾತ್ಮಕ ರೀತಿಯಲ್ಲಿ ಶೋಷಣೆಗೆ ಒಳಪಡುತ್ತಿದ್ದಾರೆ. ಈ ಪರಿಣಾಮದ ಹಿನ್ನೆಲೆಯಲ್ಲಿ ನೋಡುವುದಾದರೆ ಬಂಡವಾಳಶಾಹಿ ಉತ್ಪಾದನಾ ಮಾದರಿಯು ಭೌತಿಕವಾಗಿ ಆ ಮೂಲಕ ಮಾನಸಿಕವಾಗಿ ಹಿಂಸಾತ್ಮಕ ವಾತಾವರಣವನ್ನು ಕೂಲಿಕಾರ್ಮಿಕರಿಗಾಗಿ ನಿರ್ಮಿಸಿದೆ. ಭಾರತದ ಸ್ಥಿತಿಯೂ ಇದಕ್ಕಿಂತ ಭಿನ್ನವಲ್ಲ. ಇಂದು ಬಹುಸಂಖ್ಯಾತ ಈಡಿಗರು ಈ ಎರೆಡೂ ಮಾದರಿಯ ಉತ್ಪಾದನಾ ವಿಧಾನದಡಿಯಲ್ಲಿ ನಲುಗುತ್ತಿದ್ದಾರೆ.

ಹಿಂದೆ ತಿಳಿಸಿದಂತೆ ಉತ್ತರ ಕರ್ನಾಟಕದ ಕಳ್ಳು ಇಳಿಸುತ್ತಿರುವ ಕೂಲಿಕಾರ್ಮಿಕರು ಕಳ್ಳು ತೆಗೆದು ಜೀವನ ಮಾಡುತ್ತಿದ್ದರೂ, ಇದನ್ನು ಪೂರ್ತಿ ಊಳಿಗಮಾನ್ಯ ವ್ಯವಸ್ಥೆಯ ಉತ್ಪಾದನಾ ಮಾದರಿಯೆಂದು ಹೇಳಲಾಗುವುದಿಲ್ಲ. ಕಾರಣ ಇಂದು ಸೇಂದಿಯು ವ್ಯಾಪಾರಿ ಗುಣವನ್ನು ಪಡೆದುಕೊಂಡಿದೆ. ಅದರ ಸಾಗಾಣಿಕೆ ಮತ್ತು ಉತ್ಪಾದನೆಯ ಹೆಚ್ಚಳಕ್ಕೆ ಆಧುನಿಕ ಉಪಕರಣಗಳು ಮತ್ತು ರಾಸಾಯನಿಕ ಉತ್ಪನ್ನಗಳು ಬಳಕೆಯಾಗುತ್ತಿವೆ. ಹಿಂದೆ ದುಡಿವ ಜನರಿಗೆ ತಾಯಿಯ ಹಾಲಾಗಿದ್ದ ಸೇಂದಿ ಇಂದು ವಿಷವಾಗಿ ಪರಿವರ್ತನೆಯಾಗಿದೆ. ಕಳ್ಳು ಬಂಡವಾಳಶಾಹಿ ಸರಕಾಗಿ ಪರಿವರ್ತನೆಯಾಗುತ್ತಿರುವ ಸ್ಥಿತ್ಯಂತರದ ಕಥೆಯನ್ನು ಈ ಕೆಳಗಿನ ಕವಿತೆಯೊಂದು ಸಮರ್ಥವಾಗಿ ಕಟ್ಟಿಕೊಡುತ್ತದೆ.

ಕಳ್ಳುಬುಂಡೆ ನಮ್ಮಮ್ಮ
ನಿನ್ನ ಮರೆಯಲಾರೆ,
ಬುದ್ದಿಬಂದಾಗಿನಿಂದ
ಬುಂಡೆ ಜೊತೆ ಬಾಳ್ವೆಯಮ್ಮ
ಖಂಡ, ಖಂಡ ಕರಗಿದರೂ
ಬುಂಡೆ ಬಿಡಲಾರೆ ತಾಯಿ
ನೀನಿಲ್ದೆ ನಾನಿಲ್ಲ
ನಾನಿಲ್ದೆ ನೀನಿಲ್ಲ

ಈ ಬಗೆಯ ಸಂಬಂಧ ಹಿಂದೆ ಕಳ್ಳಿಗೂ ಮತ್ತು ದುಡಿವ ಜನರಿಗೂ ಇತ್ತು. ಇದು ಇಂದಿಗೂ ಆಚರಣೆಗಳಲ್ಲಿ ಉಳಿದುಕೊಂಡುಬಂದಿದೆ. ಒಂದು ಬಗೆಯ ಕರುಳು ಬಳ್ಳಿಯ ಸಂಬಂಧವನ್ನು ಮೇಲಿನ ಸಾಲುಗಳು ಸೂಚಿಸುತ್ತವೆ.

ಹಸಿದ ಮಕ್ಕಳ ಹಿಂಡು
ಕೂಳು ಕೂಳೆನ್ನುತಾವೆ
ಈ ಗೋಳು ಮರೆಯಲು ನಾನು
ನಿನಗೆ ಶರಣಾದೆ ನಮ್ಮ.

ಹಿಂದೆ ಊಳಿಗಮಾನ್ಯ ವ್ಯವಸ್ಥೆಯ ಶೋಷಣೆಯ ಪರಿಣಾಮದ ಫಲವಾಗಿ ಅದರನೋವನ್ನು ಮತ್ತು ದುಡಿತದಿಂದಾದ ದೇಹದ ನೋವನ್ನು ಮರೆಯಲು ಕಳ್ಳನ್ನು ಕುಡಿಯುತ್ತಿದ್ದರು. ಇಂದಿನ ಶೋಷಣೆಯ ಸ್ವರೂಪ ಮತ್ತು ನೋವಿನ ತೀವ್ರತೆ ಅದಕ್ಕಿಂತಲೂ ಭಿನ್ನವಾಗಿದೆ. ಏಕೆಂದರೆ ಇದು ಬಂಡವಾಳಶಾಹಿ ಉತ್ಪಾದನಾ ವಿಧಾನವಿದೆ. ಮನುಷ್ಯ ಶ್ರಮಕ್ಕೆ ಬದಲಾಗಿ ಯಂತ್ರಗಳು ಉಪಯೋಗವಾಗುತ್ತಿವೆ. ನಿರುದ್ಯೋಗ ಹಸಿವು ಮತ್ತು ಬಡತನಗಳ ಭಯ, ಸಂಕಟಗಳಿವೆ. ಬೀದಿ ಬದಿಯ ಎಂಜಲಿಗೆ ಕೈಯೊಡ್ಡುವಂತೆ ವ್ಯವಸ್ಥೆ ಇವರನ್ನು ದೂಡಿದೆ.

ಪದ್ಯದ ಮುಂದಿನ ಸಾಲು ಸೇಂದಿ ಸಾಮೂಹಿಕ ಉತ್ಪಾದನ ವಿಧಾನದಿಂದ ಈಡಿಗರ ಕರುಳು ಬಳ್ಳಿಯ ಸಂಬಂಧವನ್ನು ಹರಿದುಕೊಂಡು ಬಂಡವಾಳಶಾಹಿಯಾಗಿ ಬೆಳೆಯುತ್ತಿರುವುದನ್ನು ಸೂಚಿಸುತ್ತಿದೆ.

ಈಡಿಗರ ಕುಲದೈವ
ಈಚಲವ್ವನ ಮಗಳೆ

ಈ ಸಾಲುಗಳು ಈಚಲು ಮರ, ಕಳ್ಳು ಮತ್ತು ಈಡಿಗರ ಸಂಬಂಧವನ್ನು ಸೂಚಿಸುತ್ತವೆ. ಸೇಂದಿ ಈಡಿಗರಿಗೆ ಕುಲದೈವ ಅಂದರೆ ತಾಯಿ. ತಾಯಿ ಶಬ್ದ ಕರುಳು ಬಳ್ಳಿಯ ಸಂಬಂಧ ಸೂಚಕ. ಈ ಕರುಳು ಬಳ್ಳಿಯನ್ನು ಹರಿದುಕೊಂಡು ಹೋಗುವ ಸಾಲುಗಳನ್ನು ಮುಂದ ನೋಡೋಣ.

ಈಡಿಗರ ಕೈದಾಟಿ
ಕೋಡೆಯೋರಿ ಕುಳಿತೆ ತಾಯಿ
ಕೋಡೆಯ ಸುತ್ತಮುತ್ತ
ಕೋಟ್ಯಾಧೀಶರ ಕೂಟವಮ್ಮ
ಬಸವರಾಜ, ನೆಟ್ಟಕಲ್ಲಪ್ಪರ
ಸಾಮ್ರಾಜ್ಯವೇ ಬೆಳೆಯಿತಮ್ಮ

ಮೇಲಿನ ಸಾಲುಗಳು ಕಳ್ಳು ಈಡಿಗವೆಂಬ ಸಮೂಹದ ಕೈದಾಟಿ, ಕೇವಲ ಕೆಲವೇ ಕೆಲವು ಕೋಟ್ಯಾಧೀಶರ ಕೈಯಲ್ಲಿ ಸಿಕ್ಕಿ ಕೊಂಡಿರುವುದನ್ನು ಸೂಚಿಸುತ್ತವೆ. ಈ ಕೋಟ್ಯಾಧೀಶರು ಬಂಡವಾಳಶಾಹಿಗಳ ಸೂಚಕವಾಗಿದೆ. ಈ ಕೋಟ್ಯಾಧೀಶರಾದರೂ ಯಾರು? ಬಸವರಾಜು, ನೆಟ್ಟಕಲ್ಲಪ್ಪರು ಈಡಿಗರು ತಾನೆ? ಇಲ್ಲಿ ಜಾತಿಯವರಾದ ಬಂಡವಾಳಿಗರೇ ಈಡಿಗರ ಮತ್ತು ಹೆಂಡದ ಕರುಳು ಬಳ್ಳಿ ಸಂಬಂಧವನ್ನು ಕಿತ್ತು ಕೊಂಡರಲ್ಲವೇ?(ಬಸವರಾಜ ನೆಟ್ಟಕಲ್ಲಪ್ಪನವರುಚಾರಿತ್ರಿಕ ವ್ಯಕ್ತಿಗಳು) ಹೀಗೆ ಕಿತ್ತುಕೊಳ್ಳುವ ಸಂಬಂಧದಲ್ಲಿ ತಮ್ಮವರೇ ಆದರ ಈಡಿಗರ ಮೇಲೆ ಅವರು ತೋರಿರುವ ನೀತಿಯಾದರೂ ಏನು? ಪರಿಣಾಮ ಸ್ಪಷ್ಟವಾಗಿಯೇ ಇದೆಯಲ್ಲವೇ?

ಈ ಬಂಡವಾಳಶಾಹಿಗಳ ಕೈಯ್ಯಲ್ಲಿ ಸಿಲುಕಿಕೊಂಡ ಕಳ್ಳು ತನ್ನ ಹಿಂದಿನ ರೂಪವನ್ನು ಬದಲಿಸಿಕೊಳ್ಳಲಿಲ್ಲವೇ? ಅದು ಯಾವರೂಪವೆಂಬುದನ್ನು ಮುಂದಿನ ಸಾಲುಗಳು ಹೇಳುತ್ತವೆ.

ನೀರು ಪೌಡರು ಕಲಸಿ
ಬೆರಕೆ ಮಾಡಿದರಲ್ಲೆ
ಬೆಳದಿಂಗಳ ಮೈಬಣ್ಣ
ತೊನ್ನ ರೂಪ ತಾಳಿ ತಲ್ಲೆ
ಹಾಲಿನಂತೆ ಇದ್ದವಳು
ಹಾಲಾಹಲ ವಾದೆಯಲ್ಲೆ
ಊರೂರು ಪಡಕಾನೆಗೆ
ಮಾರಿಯಾಗಿ ಬಂದಿರುವೆ

ಗುಟುಕು ಕುಡಿದರೇನೆ ಸಾಕು
ಗಾಯವೆಲ್ಲ ಉರಿಯುತ್ತೈತೆ
ಗುಂಡಿಗೆ ರಕ್ತ ಹಿಂಗಿ
ಕಣ್ಣು ಕುರುಡಾಗುತ್ತೈತೆ

ಸಮೂಹದ ಉತ್ಪಾದನೆಯಾಗಿದ್ದಾಗ ಕಳ್ಳು "ಬೆಳದಿಂಗಳ" ಬಣ್ಣವನ್ನು ಪಡೆದುಕೊಂಡಿತ್ತು. ಅದು ಬಂಡವಾಳಶಾಹಿಗಳ ಕೈಗೆ ಸಿಲುಕಿ ಅವರ ಹಿತಾಸಕ್ತಿಗಳನ್ನು ಈಡೇರಿಸುವಂತಾದಾಗ, ಅದರ ಮೈಯ್ಯ ಬಣ್ಣ "ತೊನ್ನ ಬಣ್ಣವಾಗಿದೆ (ಇದು ದುಡಿದವವರಿಗೆ ಮಾತ್ರ) ಹಾಲಿನಂತಿದ್ದ ಕಳ್ಳು ಹಾಲಾಹಲವಾಗಿದೆ. ಗೋಳನ್ನು ಮರೆಸುತ್ತಿದ್ದ ಕಳ್ಳು ಗಾಯವನ್ನು ಉರಿಯುವಂತೆ ಮಾಡುತ್ತಿದೆ. ಊರೂರಿನ ಪಡಕಾನೆಗೆ ಮಾರಿಯಾಗಿ, ಸಾವಿನ ಪ್ರತೀಕವಾಗಿ ಬರುತ್ತಿದ್ದಾಳೆ ದುಡಿವ ಜನರ ಗುಂಡಿಗೆಯ ರಕ್ತ ಹೀರುತ್ತಿದ್ದಾಳೆ. ಕಣ್ಣನ್ನು ಕುರುಡು ಮಾಡುತ್ತಿದ್ದಾಳೆ. ಈ ಇಷ್ಟು ವಿವರಗಳಲ್ಲಿ ಒಟ್ಟು ಸ್ಪಷ್ಟವಾಗುವುದಿಷ್ಟೆ. ಹಿಂದೆ, ಅಂದರೆ ಸಾಮೂಹಿಕ ಉತ್ಪಾದನಾ ವ್ಯವಸ್ಥೆಯಲ್ಲಿದ್ದಾಗ ಈಡಿಗರಿಗೆ ಮತ್ತು ದುಡಿವ ಜನರಿಗೆ ಜೀವನಕ್ಕೆ ಆಧಾರವಾಗಿ, ನೋವನ್ನು ನಿವಾರಿಸುವ ತಾಯಿಯಾಗಿದ್ದಳು. ಕರುಳಬಳ್ಳಿ ಸಂಬಂಧವನ್ನು ಈ ಕಳ್ಳು ಹೊಂದಿತ್ತು. ಈಗ ಅವರ ಹಿಡಿತದಲ್ಲಿಲ್ಲ. ಮೇಲೆ ಹೇಳಿರುವಂತೆ ಒಂದು ಪ್ರಬಲ ವರ್ಗದ ಮುಷ್ಠಿಯಲ್ಲಿದ್ದು. ಅವರ ಹಿತಕ್ಕನುಗುಣವಾಗಿ ರೂಪುಗೊಂಡಿದ್ದಾಳೆ. ಅವರ ಹಿತ ಕಾಯುವವಳಾಗಿದ್ದಾಳೆ. ದುಡಿವ ಜನರಿಗೆ ಸಾವಾಗಿ ಪರಿಣಮಿಸಿದ್ದಾಳೆ. ಈಡಿಗರ ಸಮೂಹದಿಂದ ದೂರವಾಗಿದ್ದಾಳೆ. ಅಂದರೆ ಬೇರೆ ಜಾತಿಯ ಬಂಡವಾಳಶಾಹಿಗಳ ಹಿಡಿತದಲ್ಲೂ ಕಳ್ಳು ಸಿಕ್ಕಿ ಕೊಂಡಿದೆಯೆಂದೇ ಅರ್ಥ.

ಇಂದು ದುಡಿವ ಜನ ಸೇಂದಿ ಬಗ್ಗೆ ತಳೆಯುವ ನಿಲುವನ್ನು ಮುಂದಿನ ಸಾಲುಗಳು ಸೂಚಿಸುತ್ತವೆ.

ಚುನಾವಣೆಯ ಸಮಯದಲ್ಲಿ
ಆಳುವವರ ಅಸ್ತ್ರವಾಗಿ
ಕೊರಳ ಕಡಿಯ ಬಂದವಳೆ
ಬಡವರ ಬಾಳಿನಿಂದ
ದೂರನೀನು ತೊಲಗಮ್ಮ

ಕಳ್ಳು ಬುಂಡೆ ನಮ್ಮಮ್ಮ

ನಿನ್ನ ಮರೆತು ಬದುಕುವೆ

ಈ ಸಾಲುಗಳಲ್ಲಿ ಇಂದು ಕಳ್ಳಿನ ಬಗ್ಗೆ ದುಡಿವ ಜನರ ನಿಲುವೇನು ? ಎನ್ನುವುದು ಸ್ಪಷ್ಟವಾಗುತ್ತದೆ. ಇಷ್ಟಾದರೂ ಕಳ್ಳನ್ನು ಬಿಟ್ಟು ಅವರು ಬದುಕುವಂತಿಲ್ಲ. ಅವರ ನೋವಿನ ತಾತ್ಕಲಿಕ ನಿವಾರಣೆಗೆ ಕಳ್ಳೆ ಔಷಧಿಯಾಗಿದೆ. ಒಂದು ರೀತಿಯಲ್ಲಿ ಕಳ್ಳು ಇವರಿಗೆ ಅನಿವಾರ್ಯ. ಈ ಅವಲಂಬನೆ ಇರುವುದರಿಂದಲೇ ಬಂಡವಾಳಿಗರಿಗೆ ತಮ್ಮ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳಲು ಸುಲಭ ಸಾಧ್ಯವಾಗುತ್ತಿದೆ. ಇಂದಿಗೂ ಈ ಸ್ಥಿತಿ ಹಾಗೆಯೇ ಮುಂದುವರೆಯುತ್ತಿದೆ.

"ಯಾವುದೇ ಸಾಹಿತ್ಯ ಕೃತಿ, ಅಂದರೆ ಕವನ, ಕಥೆ, ಕಾದಂಬರಿ ಮೊದಲಾದವುಗಳು ಆಯಾಯ ಕಾಲಘಟ್ಟದ ಚಾರಿತ್ರಿಯ ಅಭಿವ್ಯಕ್ತಿಯಾಗಿ ಮೂಡಿಬರುತ್ತವೆ" ಎನ್ನುವ ಮಾತು ಬಹು ಸ್ಪಷ್ಟವಾದದ್ದು. ಈ ಮಾತನ್ನು ಒಪ್ಪಿಕೊಂಡರೆ, ಮೇಲಿನ ಕವಿತೆ ಒಂದು ಚರಿತ್ರೆಯನ್ನು ಕಟ್ಟಿಕೊಡುತ್ತದೆ ಎನ್ನುವ ಮಾತು ಕೂಡ ಸ್ಪಷ್ಟವಾಗುತ್ತದೆ. ಈ ಕಾರಣಕ್ಕೆ ಈ ಕವಿತೆಯನ್ನು ಮಾಹಿತಿಯನ್ನಾಗಿ ಈ ಕಾವ್ಯದಲ್ಲಿ ಬಳಸಿಕೊಳ್ಳಲಾಗಿದೆ (ಮಾಹಿತಿಗೆ ನೋಡಿ: ಪಂಚಮ-೧೯೮೪, ಸಂಚಿಕೆ:೭, ಲೇ:ಕೆ.ರಾಮಯ್ಯ, ಸಂ:ಗೋವಿಂದಯ್ಯ, ಮೈಸೂರು).

ಇಂದು ಉತ್ತರಕರ್ನಾಟಕದ ಕೆಲವು ಭಾಗ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸೇಂದಿ ಮಾರಾಟ ಚಾರಿಯಲ್ಲಿದೆ. ಉಳಿದ ಭಾಗದಲ್ಲಿ ಪೂರ್ಣ ನಿಷೇಧವಾಗಿದೆ. ಇದರಿಂದ ದುಡಿವ ವರ್ಗದವರ ಜೀವನದ ಸ್ಥಿತಿಗತಿಗಳ ಮೇಲೆ ಉಂಟಾದ ಪರಿಣಾಮಗಳನ್ನು ಹಿಂದೆ ಗುರುತಿಸಲಾಗಿದೆ. ಆದರೆ ಸೇಂದಿ ಗುತ್ತಿಗೆಯನ್ನು ಅವಲಂಬಿಸಿದ್ದ ಬಂಡವಾಳ ಶಾಹಿಗಳು ಇದಕ್ಕೆ ಪರ್ಯಾಯವಾಗಿ ಕಂಡುಕೊಂಡ ಮಾರ್ಗಗಳೇನು? ಇವರಿಗೆ ಎದುರಾದ ಸಮಸ್ಯೆಗಳೇನು? ಏಕೆಂದರೆ ಬಹುತೇಕ ಗುತ್ತಿಗೆ ದಾರರೆಲ್ಲಾ ಈಡಿಗರೇ ಆಗಿದ್ದಾರಲ್ಲವೇ? ಈ ಬಗ್ಗೆ ವಿಚಾರ ಮಾಡಿದರೆ, ಕೂಲಿಕಾರ್ಮಿಕರ ಮೇಲೆ ಬೀರಿದ ಪರಿಣಾಮಕ್ಕಿಂತ ತೀರಾ ಭಿನ್ನವಾದ ಪರಿಣಾಮ ಇವರ ಮೇಲಾಗಿರುವುದನ್ನು ಕಾಣಬಹುದು.

ಗುತ್ತಿಗೆದಾರರು ಹೇಳಿಕೇಳಿ ಶ್ರೀಮಂತರು, ಸೇಂದಿ ನಿಷೇಧವಾದರೆ, ಅದೇ ಬಂಡವಾಳವನ್ನು ಇತರೇ ವಲಯಗಳಲ್ಲಿ ಊಡಲು ಅವಕಾಶವಿದೆ. ಇದು ಒಂದು ಅವಕಾಶವಾದರೆ, ಮತ್ತೊಂದು ಸಾಧ್ಯತೆಗೆ ಸರ್ಕಾರವೇ

ಅನುವು ಮಾಡಿಕೊಟ್ಟಿದೆ. ಇದು ಹೇಗೆ? ಎನ್ನುವುದು ಮುಂದಿನ ಪ್ರಶ್ನೆ.

"೧೯೩೩ರಲ್ಲಿ ಮೈಸೂರು ಸಕ್ಕರೆ ಕಂಪನಿ ಲಿ., ಶೇ.೫೫ ರಷ್ಟು ಸರ್ಕಾರಿ ಬಂಡವಾಳದೊಡನೆ ಸ್ಥಾಪನೆಯಾಯಿತು. ಸಕ್ಕರೆಯ ಜೊತೆಗೆ ಹಲವು ಬಗೆಯ ಮದ್ಯಗಳು, ಕೈಗಾರಿಕಾ ಸ್ಪಿರಿಟ್ ಮತ್ತು ಪವರ್ ಅಲ್ಕೋಹಾಲ್ ಗಳಂಥ ಉಪಯುಕ್ತ ಉತ್ಪನ್ನಗಳೂ ಸಂಸ್ಥೆಯ ಉಪ-ಉತ್ಪಾದನೆಯಲ್ಲಿ ಸೇರಿವೆ"( ಉಲ್ಲೇಖ ಕರ್ನಾಟಕ ರಾಜ್ಯ ಗ್ಯಾಸೆಟೀಯರ್ , ಭಾಗ-೨, ಪು:೧೬, ಸೂರ್ಯನಾಥ್ ಯು ಕಾಮತ್ , ೧೯೮೫). ಮೇಲಿನ ಉಲ್ಲೇಖದನ್ವಯ ಕರ್ನಾಟಕದಲ್ಲಿ ಆಲ್ಕೋಹಾಲ್ ಉತ್ಪಾದನೆಗೆ ಹೊಸ ತಿರುವು ಬಂದಿರುವುದು ಖಚಿತ (ಅಂದರೆ ಮದ್ಯ ಉತ್ಪಾದನೆಯ ವಿಧಾನದಲ್ಲಿ ಕ್ರಾಂತಿಕರವಾದ ಬದಲಾವಣೆ ಸಂಭವಿಸಿದೆ ಎಂದರ್ಥ). ಇದರ ಮುಂದುವರೆದ ಹಂತಗಳಲ್ಲಿ ಸಕ್ಕರೆ ಕಾರ್ಖಾನೆಗಳು ಕರ್ನಾಟಕಾದ್ಯಂತ ವ್ಯಾಪಕವಾಗಿ ಬೆಳೆದಿವೆ. ಇಂದು ಕರ್ನಾಟಕದಲ್ಲಿ ೨೦ಕ್ಕೂ ಹೆಚ್ಚು ಸಕ್ಕರೆ ಕಾರ್ಖಾನೆಗಳಿವೆ (ವಿವರಗಳಿವೆ ನೋಡಿ: ಕರ್ನಾಟಕ ರಾಜ್ಯ ಗ್ಯಾಸೆಟಿಯರ್ , ಭಾಗ:೩, ಪು:೩೩, ಸೂರ್ಯನಾಥ್ ಯು ಕಾಮತ್ , ೧೯೮೫). ಸಕ್ಕರೆ ಕಾರ್ಖಾನೆಗಳ ಬೆಳವಣಿಗೆಯ ಜೊತೆಗೇ ಮದ್ಯ ತಯಾರಿಕೆಯ ಕಾರ್ಖಾನೆಗಳೂ ಬೆಳೆಯಲು ಅವಕಾಶವಿದೆ. ಏಕೆಂದರೆ ಸಕ್ಕರೆಯ ಉಪ ಉತ್ಪನ್ನವಾದ "ಮೊಲಾಸೆಸ್ ", ಸ್ಪಿರಿಟ್ ತಯಾರಿಕೆಗೆ ಬಳಕೆಯಾಗುತ್ತದೆ. ಸ್ಪಿರಿಟ್ ನ್ನು ಸಾರಾಯಿ ಮತ್ತು ಮದ್ಯ ತಯಾರಿಕೆಗೆ ಬಳಕೆ ಮಾಡಲಾಗುತ್ತಿದೆ. ಸರ್ಕಾರವೇ ಈ ಕಾರ್ಖಾನೆಗಳಿಗೆ ಅನುಮತಿ ನೀಡಿದೆ. ಅದಕ್ಕನುಗುಣವಾಗಿ ರಾಜ್ಯಾದ್ಯಂತ ಮಾರಾಟಕ್ಕೆ ವ್ಯಾಪಕ ಅನುಮತಿ ಮತ್ತು ಅನುಕೂಲಗಳನ್ನು ಮಾಡಿಕೊಟ್ಟಿದೆ. ಡಿಸ್ಟಿಲರಿ ಮತ್ತು ಅರೆಕಾ, ಕಾರ್ಖಾನೆಗಳ ಅನುಮತಿ ಪಡೆದ ಇಂದಿನ ಬಹುತೇಕ ಬಂಡವಾಳಿಗರು ಈಡಿಗರೇ ಆಗಿದ್ದಾರೆ. ಹಾಗೆಂದು ಇತರೆ ಜಾತಿಯವರೂ ಇಲ್ಲವೆಂದು ಅರ್ಥವಲ್ಲ(ಹೀಗೆ ಸರ್ಕಾರವೇ ಖುದ್ದಾಗಿ ಮದ್ಯ ಕಾರ್ಖಾನೆಗಳು ಮತ್ತು ಮಾರಾಟದ ಅಂಗಡಿಗಳಿಗೆ ಅನುಮತಿ ಕೊಟ್ಟ ಹಿನ್ನೆಲೆಯಲ್ಲಿ ಸರ್ಕಾರದ ಹಿತಾಸಕ್ತಿಯು ಇದೆ ಎನ್ನುವುದು ಗಮನಾರ್ಹ. ಮದ್ಯ ಕಾರ್ಖಾನೆಗಳು ಮತ್ತು ಮಾರಾಟ ಅಂಗಡಿಗಳಿಂದ ಬರಬಹುದಾದ ತೆರಿಗೆಯು ರಾಜ್ಯಾದಾಯ ದಲ್ಲಿಬಹುದೊಡ್ಡ ಮೊತ್ತ ಎನ್ನುವುದು ಗಮನಾರ್ಹ).

೧೯೩೦ ರಿಂದ ಈಚೆಗೆ ಸೇಂದಿಯ ಬಹುತೇಕ ಸ್ಥಾನವನ್ನು ಸಾರಾಯಿ ಪಡೆದುಕೊಂಡಿತು. ಮೇಲ್ವರ್ಗದವರಿಗೆ ಐ.ಎಂ.ಎಫ್ .ಎಲ್ .ನ ಉತ್ಪಾದನೆಗಳಿವೆ. ಅಂದರೆ ಬ್ರಾಂಡಿ, ವಿಸ್ಕಿ, ಜೀನ್ , ಬೀರು ಇತ್ಯಾದಿಗಳು ಉತ್ಪಾದನೆಗೆ ಲಭ್ಯವಾಗುತ್ತಿವೆ. ಸರ್ಕಾರಕ್ಕೆ ಇದರಿಂದ ಕೋಟ್ಯಾಂತರ ರೂಪಾಯಿಗಳ ಲಾಭವಿದೆ. ಉದಾ: ೧೯೭೪-೭೫ನೇ ಸಾಲಿನಲ್ಲಿ ಸಾರಾಯಿಯಿಂದ ದೊರೆಯುತ್ತಿದ್ದ ಆದಾಯ ೩,೮೫೦ ಲಕ್ಷ ರೂಗಳು.

ಇತರೇ (ಅಂದರೆ ಡಿಸ್ಟಿಲರಿ ಉತ್ಪಾದನೆಗಳಿಂದ) ಆದಾಯ ೭೧, ೩೬೫ ಲಕ್ಷ ರೂಪಾಯಿಗಳು. ಅಂದ ಮೇಲೆ ಸರ್ಕಾರದ ಬಹುಮುಖ್ಯ ಆದಾಯದ ಮೂಲ ಇದಾಗಿರುವುದು ಸ್ಪಷ್ಟ. ಇದನ್ನು ಇನ್ನೂ ಖಚಿತ ಪಡಿಸಿಕೊಳ್ಳಬೇಕಾದರೆ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯವು ನೀಡುವ ೧೯೯೪ರ ಅಂಕಿ-ಅಂಶಗಳ ಒಂದು ಪಟ್ಟಿಯನ್ನು ನೋಡುವುದು ಉಚಿತ.

I. ೧೯೯೪-೯೫ನೇ ಸಾಲಿನಲ್ಲಿ ಮದ್ಯ ಅಂಗಡಿಗಳಿಗೆ ಅನುಜ್ಞೆ ಪತ್ರ ನೀಡಿರುವ ಅಂಗಡಿಗಳು(ರಾಜ್ಯದಲ್ಲಿ)

| | |
|---|---|
| ೧. ಸಾರಾಯಿ ಅಂಗಡಿಗಳು | - ೧೦, ೩೫೪ |
| ೨. ಸಾರಸಗಟು ಅಂಗಡಿಗಳು | -೦೦,೩೭೦ |
| ೩. ಚಿಲ್ಲರೆ ಅಂಗಡಿಗಳು | -೦೩೬೧೭ |
| ೪. ಕ್ಲಬ್ ಗಳು | -೦೦೧೧೩ |
| ೫. ಹೋಟೆಲ್ ಮತ್ತು ವಸತಿಗೃಹ | -೦೦೦೭೧ |
| ೬. ಬಾರ್ಸ್ | -೦೩೧೦೨ |
| ೭. ಇತರೆ | -೦೦೨೨೦ |

ಈ ಎಲ್ಲವುಗಳೂ ಹರಾಜು ಕೂಗುವ ಅಂದರೆ ಗುತ್ತಿಗೆ ವ್ಯವಸ್ಥೆಯಿಂದ ಕೆಲವೇ ಜನರ ಕೈಕೆಳಗಿವೆ. ಅಂಗಡಿಗಳಲ್ಲಿ ಕೆಲಸ ಮಾಡುತ್ತಿರುವ ಮತ್ತು ಮದ್ಯ ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರು ಎಲ್ಲಾ ಜಾತಿಯವರೂ ಇದ್ದಾರೆ. ಇವರಲ್ಲಿ ಬಹುತೇಕರು ದಿನಗೂಲಿ ಕಾರ್ಮಿಕರು. ಒಂದು ಕಾರ್ಖಾನೆಯಲ್ಲಿ ೫೦೦ ಜನರಿರಬಹುದಾದರೆ ಅಲ್ಲಿ ಖಾಯಂ ನೌಕರರು ಕೇವಲ ೧೦-೧೫ರವರೆಗೆ ಮಾತ್ರವಿರಬಹುತು. ಉಳಿದವರೆಲ್ಲಾ ದಿನಗೂಲಿ ನೌಕರರು ಮಾತ್ರ. ಈ ಖಾಯಂ ನೌಕರರು ಮ್ಯಾನೇಜ್ ಮೆಂಟ್ ವ್ಯವಸ್ಥೆಯನ್ನು ನೋಡಿಕೊಳ್ಳುವವರಾಗಿರುತ್ತಾರೆ. ಕರ್ನಾಟಕದ ಬಹುತೇಕ ಡಿಸ್ಟಿಲರಿಗಳಲ್ಲಿ ಮ್ಯಾನೇಜರ್ , ಮತ್ತಿತರೆ ಹಾಗೂ ಕೂಲಿ ಕಾರ್ಮಿಕರು ಶೇ.೫೦ ರಷ್ಟು ಈಡಿಗರೇ ಇರುತ್ತಾರೆ. ಇದರ ಹಿಂದೆ ಮಾಲಿಕರಿಗಿರುವ ಉದ್ದೇಶ ಬೇರೆ. ಜಾತಿ ಮತ್ತು ರಕ್ತ ಸಂಬಂಧಗಳು, ಇಂಥ ಕಾರ್ಖಾನೆಗಳಲ್ಲಿ ವರ್ಗ ಸಂಘರ್ಷವನ್ನು ಮುಚ್ಚಿ ಹಾಕುವ ಕೆಲಸವನ್ನೂ ಮಾಡುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಹಾಗಾಗಿ ಕರ್ನಾಟಕದ ಬಹುತೇಕ ಲಿಕ್ಕರ್ ಹಾಗೂ ಸಾರಾಯಿ ಷಾಪ್ ವೆಂಡರ್ಸ್ ಹಾಗೂ ಕಾರ್ಖಾನೆಗಳ ಕಾರ್ಮಿಕರು ಮತ್ತು ಮಾಲಿಕರು ಬಹುಪಾಲು ಈಡಿಗರೇ ಆಗಿದ್ದಾರೆ. ಮೇಲೆ ತಿಳಿಸಿದಂತೆ ಇದರ ಹಿಂದೆ ಇರುವ ತಂತ್ರದ ಸಾಧ್ಯತೆಯನ್ನು ತಳ್ಳಿ ಹಾಕಲು ಸಾಧ್ಯವಿಲ್ಲ.

೧೯೯೪-೯೫ರಲ್ಲಿ ಕರ್ನಾಟಕದಲ್ಲಿ ಬಳಸಲಾದ ಅಧಿಕೃತ ಮದ್ಯದ ಪ್ರಮಾಣ

| ಬಳಸಿದ ಮದ್ಯ | ಲಕ್ಷ ಲೀಟರಗಳಲ್ಲಿ |
|---|---|
| ೧. ಸಾರಾಯಿ | -೮೩೩ |
| ೨.ಮದ್ಯ(ಬ್ರಾಂಡಿ, ವಿಸ್ಕಿ ಮೊದಲಾದವುಗಳು) | -೨೦೯ |
| ೩.ಬೀರ್ | -೪೮೬ |

೧೯೯೨-೯೩ರ ಮದ್ಯ ಬಳಕೆಯನ್ನು ಪರಿಶೀಲಿಸಿದರೆ, ೧೯೯೪-೯೫ನೇ ಸಾಲಿನಲ್ಲಿ ಅದರ ಪ್ರಮಾಣ ಹೆಚ್ಚಿರುವುದು ಕಂಡುಬರುತ್ತದೆ. (ಆಧಾ 1992- 94 ತಖ್ತೆ)

| ಮದ್ಯ | ಲಕ್ಷ ಲೀಟರಗಳಲ್ಲಿ |
|---|---|
| ೧.ಸಾರಾಯಿ | -೬೭೬ |
| ೨.ಮದ್ಯ | -೧೯೭ |
| ೩.ಬೀರ್ | -೪೧೯ |

ಈ ಮೇಲಿನ ಅಂಕಿ-ಅಂಶಗಳನ್ನು ಕರ್ನಾಟಕ ಅಂಕಿ-ಅಂಶಗಳ ನೋಟ ೧೯೯೨-೯೩, ೧೯೯೪-೯೫ರ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ತೆಗೆದುಕೊಳ್ಳಲಾಗಿದೆ.

ಇದುವರೆಗೆ ನಾವು ಗಮನಿಸಿದ ಅಂಕಿ-ಅಂಶಗಳು ಅಧಿಕೃತವಾದವುಗಳು.ಇದಲ್ಲದೆ ದಿನಬೆಳಗಾದರೆ ಇಂದು ನಾವು ಅನಧಿಕೃತ ಮದ್ಯ ಸಾಗಾಣಿಕೆ ಮತ್ತು ಮಾರಾಟದ ಬಗ್ಗೆ ವರದಿಗಳನ್ನು ಪತ್ರಿಕೆಗಳಲ್ಲಿ ಮತ್ತು ಪ್ರತ್ಯಕ್ಷದರ್ಶಿಗಳಿಂದ ಕೇಳುತ್ತಿರುತ್ತೇವೆ. ಇದರ ಪ್ರಮಾಣ ಅಧಿಕೃತ ಬಳಕೆಗಿಂತಲೂ ಹೆಚ್ಚಾಗಿರುವ ಸಾಧ್ಯಯಿದೆ. ಅಂದ ಮೇಲೆ ಮಾಲೀಕರ ಆದಾಯದ ಅಂಕಿ-ಅಂಶಗಳಲ್ಲೂ ಈ ಬದಲಾವಣೆಯಾಗಿರುತ್ತದೆ. ಇದನ್ನು ಊಹಿಸಿಕೊಳ್ಳಬೇಕು.

ಹಿಗೆ ರಾಜ್ಯಾದ್ಯಂತ ಆವರಿಸಿರುವ ಮದ್ಯ ಕಾರ್ಖಾನೆಗಳು ಸೇಂದಿಯ ಸ್ಥಾನವನ್ನು ಆಕ್ರಮಿಸಿವೆ. ಸೇಂದಿಯನ್ನು ಇಂದು ಸಾರಾಯಿ ಮದ್ಯಕ್ಕಿಂತ ಕೀಳೆಂದು ಭಾವಿಸಲಾಗಿದೆ. ವಸಾಹಾತುಶಾಹಿ ವ್ಯವಸ್ಥೆಯಲ್ಲಿ

ಕ್ರೈಸ್ತ ಮಿಷನರಿಗಳು ಹೀಗೆ ಕೀಳೆಂದು ತಿಳಿಸುವ ಕೆಲಸವನ್ನು ರಚನಾತ್ಮಕವಾಗಿ ಮಾಡುತ್ತಿದ್ದವೆಂಬುದನ್ನು ಪ್ರತ್ಯಕ್ಷದರ್ಶಿಗಳು ಹೇಳುತ್ತಾರೆ ಮತ್ತು ಇದು ಸತ್ಯ ಕೂಡ (ಕ್ರೈಸ್ತ ಮಿಷನರಿಗಳು ಹೀಗೆ ಸೇಂದಿಯನ್ನು ಕೀಳೆಂದು ಪ್ರಚಾರ ಮಾಡುವ ಉದ್ದೇಶ ಬೇರೆಯೇ ಇತ್ತು. ೧. ಅವರ ಧರ್ಮಪ್ರಚಾರಕ್ಕೆ ಅನುಕೂಲ ಮಾಡಿಕೊಳ್ಳುವುದು, ೨. ಬ್ರಿಟಿಷ್ ರ ಉತ್ಪಾದನೆಗಳಾದ ಎಫ್ .ಎಂ.ಎಲ್ ., ಅಂದರೆ ಫಾರಿನ್ ಮೇಡ್ ಲಿಕ್ಕರ್ ಗೆ ಭಾರತದಲ್ಲಿ ಮಾರುಕಟ್ಟೆಯನ್ನು ವ್ಯಾಪಕವಾಗಿ ಹೆಚ್ಚಿಸಿಕೊಳ್ಳುವ ಉದ್ದೇಶ ಇದಾಗಿತ್ತು). ಇದಕ್ಕೆ ಪೂರಕವಾಗಿ ಮತ್ತೊಂದು ಕಾರಣವೆಂದರೆ ೧೯೨೦ರ ಅಸಹಕಾರ ಚಳುವಳಿಯಲ್ಲಿ ಪಾನ ನಿರೋಧಕ್ಕೆ ಗಾಂಧೀಜಿ ಕರೆಕೊಟ್ಟದ್ದೂ ಇರಬಹುದು. ಇಂದು ಮೇಲ್ವರ್ಗದವರ ದೃಷ್ಟಿಯಲ್ಲಿ ಸೇಂದಿ ಕೀಳಾಗಿದೆ. ವಿಸ್ಕಿ, ಬ್ರಾಂಡಿಗೆ ಹೋಲಿಸಿದರೆ ಸಾರಾಯಿ ಕೀಳಾಗಿದೆ. ಇದನ್ನು ಬಳಸುವ ವರ್ಗದ ಮೇಲೆ ಹೀಗೆ ಶ್ರೇಣೀಕರಣ ಸ್ಥಿತಿ ಉಂಟಾಗಿದೆ. ಇಡೀ ರಾಜ್ಯಕ್ಕೆ ಸಾಕಾಗುವಷ್ಟು ಮದ್ಯ ಮತ್ತು ಸಾರಾಯಿಗಳನ್ನು ಕಲೆವೇ 'ಡಿಸ್ಟಿಲರಿಗಳು' ಮತ್ತು 'ಅರೆಕಾ' ಕಾರ್ಖಾನೆಗಳು ಮಾಡುತ್ತಿವೆ. ಈ ಕಾರ್ಖಾನೆಗಳಲ್ಲಿ ಕೆಲಸ ಮಾಡುವವರ ಸಂಖ್ಯೆ ಕಡಿಮೆ. ಕಾರಣ, ಯಂತ್ರಗಳೇ ಬಹುತೇಕ ಕೆಲಸಗಳನ್ನು ಮಾಡುತ್ತವೆ. ಇದರ ಪರಿಣಾಮವಾಗಿ ಸೇಂದಿಯು ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ಈ ವೃತ್ತಿಯನ್ನು ಅವಲಂಬಿಸಿದ ಲಕ್ಷಾಂತರ ಜನ ಬೀದಿಪಾಲಾದರು. ಅವರುಗಳ ಅಂಕಿ-ಅಂಶಗಳನ್ನು ನಿಖರವಾಗಿ ಕೊಡಲು ಸಾಧ್ಯವಾಗದು. ಕೆಲವೇ ಕೆಲವು ಈಡಿಗರು ಬಂಡವಾಳಶಾಹಿಗಳಾಗಿ ರೂಪುಗೊಂಡರು ಸರ್ಕಾರ ಹಿಂದುಳಿದ ವರ್ಗಗಳ ಆಯೋಗಗಳನ್ನು ರಚಿಸಿ ಮೀಸಲಾತಿಯನ್ನು ಜಾರಿಗೆ ತಂದಿದ್ದರ ಫಲವಾಗಿ ಕೆಲವೇ ಕೆಲವು ಬಡಮಧ್ಯಮ ವರ್ಗದವರು ಶಿಕ್ಷಣ ಪಡೆದು ಸರ್ಕಾರಿ ನೌಕರರಾದರು. ಇಂಥವರು ಮಧ್ಯಮವರ್ಗದವರಿಗಾಗಿ ರೂಪಗೊಂಡರು (ವಿವರಗಳಿಗೆ ನೋಡಿ: Report of the Second Back-ward Classes, -III, ೧೯೮೬) ಮಿಲ್ಲರ್ ಆಯೋಗ, ನಾಡಗೌಡ, ಆಯೋಗ, ಟಿ.ವೆಂಕಟಸ್ವಾಮಿ ಆಯೋಗ, ಚಿನ್ನಪ್ಪರೆಡ್ಡಿ ಆಯೋಗಗಳ ವರದಿಗಳು ಈಡಿಗರ ಸ್ಥಿತಿಗತಿಗಳ ಬಗ್ಗೆ ಸ್ಥೂಲವಾದ ಅಂಕಿ-ಅಂಶಗಳನ್ನು ನೀಡುತ್ತವೆ. ಅಂದರೆ ಈ ಅಂಕಿ-ಅಂಶಗಳೇ ಅಂತಿಮವಲ್ಲವೆಂಬ ಎಚ್ಚರಿಕೆಯೂ ಅಗತ್ಯ.

## ಮಲೆನಾಡಿನ ಈಡಿಗರ ಸ್ಥಿತಿಗತಿಗಳು

ಬಯಲು ಸೀಮೆಯ ಈಡಿಗರ ಸ್ಥಿತಿಗಳಿಗಿಂತ ಮಲೆನಾಡಿನ ದೀವರು, ನಾಮಧಾರಿಗಳು ಮತ್ತು ಬಿಲ್ಲವರ ಸ್ಥಿತಿಗತಿಗಳು ಬಹಾಳಷ್ಟು ಭಿನ್ನ. "ಶಿವಮೊಗ್ಗ ಜಿಲ್ಲೆಯ ಮಲೆನಾಡು ಭಾಗದಲ್ಲಿ ಭೂಮಿ ಹಿಂದಿನಿಂದಲೂ

ಮೇಲ್ಜಾತಿಯ ಕೆಲವೇ ಜಮೀನ್ದಾರರನ್ನೇ ಅವಲಂಬಿಸಿ ಬದುಕಬೇಕಿತ್ತು"(ಉಲ್ಲೇಖ:ಶಿವಮೊಗ್ಗ ಜಿಲ್ಲೆಯ ಸಮಾಜವಾದಿ ಚಳುವಳಿಗಳು ಎಂ.ಫಿಲ್ ., ಪ್ರಬಂಧ ಪು:೩೦, ಸಂಶೋಧಕ ಜಿ.ಎಸ್ .ಕೀರ್ತಿನಾಥ-೧೯೯೩, ಅಪ್ರಕಟಿತ). ಮೇಲ್ಕಂಡ ಶೇ. ೯೦ ಜನರಲ್ಲಿ ಶೇ.೮೦ ರಷ್ಟು ದೀವರಾಗಿದ್ದರು. ಇವರೆಲ್ಲರೂ ಭೂ ಮಾಲಿಕರಲ್ಲಿ ಗೇಣಿದಾರಾಗಿದ್ದರು. ೧೯೩೨-೩೪ರಲ್ಲಿ ಜಾರಿಗೆ ಬಂದ ಭೂಸುಧಾರಣಾ ಶಾಸನದ ಪರಿಣಾಮವಾಗಿ ಈ ಭಾಗದಲ್ಲಿ ಪ್ರಮುಖವಾಗಿ ಎರಡು ಸಂಘಟನೆಗಳು ರೂಪತಾಳಿಕೊಂಡವು. (೧) ಮಲೆನಾಡು ಗೇಣಿದಾರರ ಸಂಘ, (೨) ಸಾಗರ ತಾಲೂಕು ರೈತ ಸಂಘ, ಈ ಸಂಘಟನೆಗಳು ೧೯೬೯ರಲ್ಲಿ ಸರ್ಕಾ ಭೂಮಿಯನ್ನು ವಶಪಡಿಸಿಕೊಂಡು ಭೂಹೀನ ರೈತರಿಗೆ ಹಂಚುವ ಯೋಜನೆಯನ್ನು ಪರಿಣಾಮಕಾರಿಯಾಗಿ ಮಾಡಿದವು. ಇದರಲ್ಲಿ ಕಾಗೋಡು ಸತ್ಯಾಗ್ರಹ ಪ್ರಮುಖವಾದುದಾಗಿತ್ತು. ಸಾಗರ ತಾಲೂಕು ರೈತಸಂಘ ೧೯೫೦ರಲ್ಲಿ ಸ್ಥಾಪನೆಯಾಯಿತು. ಇದರಲ್ಲಿ ಶೇ.೯೦ ಜನ ದೀವರೇ ಸದಸ್ಯರಾಗಿದ್ದರು. ಇದು ಈ ಹೋರಾಟದಲ್ಲಿ ಪ್ರಮುಖ ಪಾತ್ರವಹಿಸಿತ್ತು. "೧೯೭೪ರಲ್ಲಿ ಬಂದ ಭೂ ಸುಧಾರಣೆ ಶಾಸನದ ಪ್ರಕಾರ ದೀವಜನರು ಹಿಂದೆ ಗೇಣಿಗೆ ಪಡೆದು ಸಾಗುವಳಿ ಮಾಡುತ್ತಿದ್ದ ತುಂಡು ಭೂಮಿಗೆ ಮಾಲಿಕರಾದರು"(ಈಡಿಗ ಸುವರ್ಣ ಸಂಚಿಕೆ, ಪು:೬೩, ೬೪, ೧೯೯೩).

ಈ ಮೇಲಿನ ಮಾಹಿತಿಗಳು ಶಿವಮೊಗ್ಗ ಜಿಲ್ಲೆಯ ದೀವರ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುವುದು ಸ್ಪಷ್ಟ. ಇದಕ್ಕಿಂತ ಹಿಂದೆ ಶ್ರೀ ಗಣಪತಿಯಪ್ಪನವರು ಹೇಳುವಂತೆ, " ದೀವರು ಅಲ್ಲಿನ ಭೂಮಾಲಿಕರ ಗುಲಾಮರಾಗಿದ್ದರು. ಸಾಮಾಜಿಕವಾಗಿಯೂ ಯಾವುದೇ ಸ್ಥಾನಮಾನಗಳಿರಲಿಲ್ಲ. ದೀವರು ಎನ್ನುವ ಜನರು ಇದ್ದಾರೆಂಬುದೇ ಪಟ್ಟಣವಾಸಿಗಳಿಗೆ ತಿಳಿದಿರಲಿಲ್ಲ." ಈ ಹೇಳಿಕೆಯ ಪ್ರಕಾರ ದೀವರ ಹಿಂದಿನ ಸ್ಥಿತಿಗತಿಗಳನ್ನು ಊಹಿಸಬಹುದು. ಅಂದರೆ ನೂರಕ್ಕೆ ತೊಂಬತ್ತರಷ್ಟು ದೀವರಿಗೆ ಸ್ವಂತ ಭೂಮಿಯಿರದೆ ಗೇಣೀದಾರರು ಮಾತ್ರವಾಗಿದ್ದರು. ಇವರು ೧೯೭೪ರ ಶಾಸನದಂತೆ ಭೂಮಿಗೆ (ತುಂಡು ಭೂಮಿ ಮಾತ್ರ) ಮಾಲಿಕರಾದ ಮೇಲೆ ಸಾಮಾಜಿಕವಾಗಿ ರಾಜಕೀಯವಾಗಿ ರಾಜ್ಯಕ್ಕೆ ಪರಿಚಿತರಾದರು. ಇಂದು ದೀವರ ರಾಜಕೀಯ ನಾಯಕರು ಕರ್ನಾಟಕದ ರಾಜಕಾರಣದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದಾರೆ. ಜಿಲ್ಲೆಯ ಹೊಸನಗರ, ತೀರ್ಥಹಳ್ಳಿ, ಸೊರಬ, ಸಾಗರದಲ್ಲಿ ಬಹುಸಂಖ್ಯಾತರು ಇವರೇ ಆದ್ದರಿಂದ ಈ ಜನರ ರಾಜಕಾರಣಿಗಳು ರಾಜ್ಯದ ರಾಜಕೀಯದಲ್ಲಿ ನಿರಂತರವಾಗಿ ಪಾಲುಗೊಳ್ಳಲು ಸಾಧ್ಯವಾಗಿದೆ. ಮತ್ತು ಈ ರಾಜಕೀಯದ ಪರಿಣಾಮವಾಗಿ ಜಿಲ್ಲೆಯ ದೀವರ ಸಾಮಾಜಿಕ ಪ್ರತಿಷ್ಠೆ ಭಾವನಾತ್ಮಕ ನೆಲೆಯಲ್ಲಿ ರಾಜ್ಯದಲ್ಲಿ ಗಟ್ಟಿಕೊಂಡಿದೆ. ಆರ್ಥಿಕವಾಗಿ ಕೆಲವೇ ಬೆರಳೆಣಿಕೆಯಷ್ಟು ಜನರಿಗೆ ಮಾತ್ರ ಸರ್ಕಾರದಿಂದ ಸೌಲಭ್ಯಗಳು ಸಿಗಲು ಸಾಧ್ಯ. ಇಂಥವರು ಹಿಂದೆಯೇ

ಹೇಳಿರುವಂತೆ ಈ ಜನಸಮುದಾಯದೊಳಗೇ ಒಂದು ವರ್ಗವಾಗಿ ರೂಪಗೊಂಡಿದ್ದಾರೆ.

ಸ್ಪಷ್ಟವಾಗಿ ಹೇಳುವುದಾದರೆ,

೧)ತುಂಡು ಭೂಮಿಯುಳ್ಳ ರೈತರು ಇಲ್ಲಿ ಶೇ. ೭೦ ರಷ್ಟಿದ್ದಾರೆ.

೨)ಸರ್ಕಾರದ ಸೌಲಭ್ಯ ಪಡೆದು ಆರ್ಥಿಕ ಸ್ಥಿತಿಗಳನ್ನು ರೂಪಿಸಿಕೊಂಡವರು ಶೇ.೧೦ ರಷ್ಟಿದ್ದಾರೆ.

೩)೧೦ ರಿಂದ ೨೦ ಎಕರೆಯವರೆಗೆ ಭೂಮಿಯುಳ್ಳವರು ಶೇ.೧೫ ರಷ್ಟಿದ್ದಾರೆ.

೪) ಭಾರಿ ಭೂಮಾಲಿಕರು ಶೇ.೫ ರಷ್ಟು ಮಾತ್ರ. ಈ ವರ್ಗದಲ್ಲಿ ಬಂಡವಾಳಿಗರೂ ಸೇರುತ್ತಾರೆ

(ಮಾಹಿತಿ: ಎನ್ . ಹುಚ್ಚಪ್ಪ ಮಾಸ್ತರ, ೬೦ ವರ್ಷ, ತಾಳಗುಪ್ಪ, ಸಾಗರ ತಾ||).

ದೀವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳಿಗೆ ಅಂದಿನ ಸಾಮಾಜಿಕ ವಾತಾವರಣ ಯಾವ ರೀತಿ ಕಾರಣವಾಗಿರಬಹುದೆಂಬುದನ್ನು ಕೂಡ ಈ ಸಂದರ್ಭದಲ್ಲಿ ಗಮನಿಸಬೇಕಾಗುತ್ತದೆ. ಹಿಂದೆ ತಿಳಿಸಿದಂತೆ, ಶಿವಮೊಗ್ಗ ಜಿಲ್ಲೆಯಲ್ಲಿ ಸಮಾಜವಾದಿಗಳ ಚಳುವಳಿ ತೀವ್ರಗೊಂಡಿದ್ದು. ೧೯೭೦ರಲ್ಲಿ ಸರ್ಕಾರಿ ಜಮೀನನ್ನು ವಶಪಡಿಸಿಕೊಂಡು ಭೂ ರಹಿತರಿಗೆ ಹಂಚಲಾಗಿದೆ. ಈ ಸಂದರ್ಭದಲ್ಲಿ ಜಿಲ್ಲಾದ್ಯಂತ ಸುಮಾರು ೧೦,೦೦೦ ಎಕರೆ ಭೂಮಿಯನ್ನು ಭೂರಹಿತರಿಗೆ ಹಂಚಿಕೊಟ್ಟಿದ್ದು. ಶಿಕಾರಿಪುರ ತಾಲೂಕು ಒಂದರಲ್ಲೆ ೪,೭೦೦ ಎಕರೆ ಸರ್ಕಾರಿ ಭೂಮಿ ಹಂಚಿಕೊಡಲಾಗಿದೆ. ಕಾಗೋಡು ಸತ್ಯಾಗ್ರಹದಲ್ಲಿ ಶಾಂತವೇರಿ ಗೋಪಾಲಗೌಡ ಲೋಹಿಯಾ ಭಾಗವಹಿಸಿದ್ದು. ಈ ಸತ್ಯಾಗ್ರಹ ದೇಶಾದ್ಯಂತ ಪ್ರಚಾರ ಪಡೆದುಕೊಂಡಿತು. ಹೀಗೆ ಜಿಲ್ಲೆಯಲ್ಲೆ ಈ ಚಳುವಳಿ ಪ್ರಬಲವಾಗಲು ಹೊರಗಿನ ಪ್ರಭಾವಗಳೂ ಇಲ್ಲದಿಲ್ಲ. ಉದಾ: ಅದೇ ಸಂದರ್ಭದಲ್ಲಿ ಆಂದ್ರದ ತೆಲಾಂಗಣ ಮತ್ತು ನಕ್ಸಲ್ ಭಾರ್ ಗಳಲ್ಲಿ ಭೂಮಿಗಾಗಿ ಹೋರಾಟ ಪ್ರಾರಂಭವಾಗಿತ್ತು. ಭೂಮಾಲಿಕರಿಂದ ಮತ್ತು ಸರ್ಕಾರದಿಂದ ಭೂಮಿಯನ್ನು ವಶಪಡಿಸಿಕೊಂಡಿದ್ದು, ಭೂರಹಿತರಿಗೆ ಹಂಚಲಾಗುತಿತ್ತು. ಈ ಘಟನೆ ದೇಶದ್ಯಂತ ಸರ್ಕಾರದವರಿಗೆ, ಭೂಮಾಲಿಕರಿಗೆ ಭಯ ಹುಟ್ಟಿಸಿತು. ಈ ಘಟನೆ ಶಿವಮೊಗ್ಗದ ಸಮಾಜವಾದಿಗಳ ಮತ್ತು ರೈತರ ಚಳುವಳಿಗೆ ಸ್ಪೂರ್ತಿಯೂ ಆಗಿರಲು ಸಾಧ್ಯ. ೧೯೭೪ರಲ್ಲಿ ದೇವರಾಜ ಅರಸರ ಸರ್ಕಾರ ಭೂ ಸುಧಾರಣಾ ಕಾನೂನನ್ನು ಜಾರಿಗೆ ತರಲು ನಕ್ಸಲೀಯರ ಹೋರಾಟದ ಬಿಸಿಯಾದ ಸ್ಪರ್ಷವೂ ಕಾರಣವಾಗಿರುವುದನ್ನು ಅಲ್ಲಗೆಳೆಯಲಾಗದು. ಈ ನಕ್ಸಲೀಯ ಭೂರಹಿತರ ಹೋರಾಟವೇ ಒಂದು ವಿಧದಲ್ಲಿ ದೇಶದ ಭೂರಹಿತರ ಹೋರಾಟಗಾರರಿಗೆ ಮಾದರಿಯೂ ಹೌದು ಸ್ಪೂರ್ತಿಯೂ ಹೌದು.

ಈ ಪ್ರಭಾವದಿಂದ ಶಿವಮೊಗ್ಗ, ಉತ್ತರಕನ್ನಡ ಮತ್ತು ದಕ್ಷಿಣಕನ್ನಡದಲ್ಲಿ ಭೂಮಿಗಾಗಿ ಹೋರಾಟಗಳು ನಡೆದವು. ಗೇಣಿದಾರರಿಗೆ ತುಂಡು ಭೂಮಿಗಳು ಸಿಕ್ಕದವು. ಗೇಣಿದಾರರಲ್ಲದ ಬಹುತೇಕರು ಸರ್ಕಾರಿ ಜಮೀನನ್ನು ವಶಪಡಿಸಿಕೊಂಡು ಸಾಗುವಳಿ ಮಾಡಿದರು. ಹೀಗೆ ಭೂಮಿ ಪಡೆದ ಯಾರೂ ಭಾರಿ ಭೂಮಾಲಿಕರಾಗಿಲ್ಲವೆನ್ನವುದು ಸ್ಪಷ್ಟ. ಮೇಲ್ಕಂಡ ಈ ಮೂರು ಜಿಲ್ಲೆಗಳಲ್ಲಿ ಈಡಿಗರೇ ಅಂದರೆ ದೀವರು, ಬಿಲ್ಲವರು ಮತ್ತು ನಾಮಧಾರಿಗಳೇ ಬಹುಸಂಖ್ಯಾತರಾಗಿರುವುದರಿಂದ, ಒಂದು ರೀತಿಯಲ್ಲಿ ಸಂಘಟನಾತ್ಮಕ ಹೋರಾಟ ಸಾಧ್ಯವಾಯಿತು. ಅಂದಿನ ಚರಿತ್ರೆಯಲ್ಲಿ ಈ ಮಲೆನಾಡು ಭಾಗವೆಲ್ಲಾ ಊಳಿಗಮಾನ್ಯ ಉತ್ಪಾದನಾ ವ್ಯವಸ್ಥೆಯಲ್ಲಿತ್ತು ಎನ್ನುವುದು ಮುಖ್ಯ. ಈ ವ್ಯವಸ್ಥೆಯಲ್ಲಿ ಜಾತಿಕೇಂದ್ರಿತವಾದ ಸಂಬಂಧಗಳು ಹೆಚ್ಚು ಗಟ್ಟಿಯಾಗಿರುತ್ತವೆ. ಏಕೆಂದರೆ ಈ ವ್ಯವಸ್ಥೆಯಲ್ಲಿ ಸಾಮೂಹಿಕ ಉತ್ಪಾದನಾ ವ್ಯವಸ್ಥೆಯು ಅಸ್ತಿತ್ವದಲ್ಲಿರುತ್ತದೆ. ಉದಾ: ಭೂಹೀನ ಕೂಲಿಕಾರ್ಮಿಕರೂ ಆಗಿರಬಹುದು, ಇವರು ಒಡೆಯುನ ಭೂಮಿಯಲ್ಲಿ ಸಾಮೂಹಿಕವಾಗಿಯೇ ದುಡಿಯಬೇಕಾಗಿರುತ್ತದೆ. ಈ ಕಾರಣಕ್ಕೆ ಈ ಸಂಬಂಧಗಳು ಗಟ್ಟಿಯಾಗಿರುತ್ತವೆ. ಈ ಜಾತಿ ಕೇಂದ್ರಿತ ಭಾವನಾತ್ಮಕ ಸಂಬಂಧವೇ ಭೂ ಹೋರಾಟದಲ್ಲಿ ದೀವರನ್ನು ಸಂಘಟನಾತ್ಮಕವಾಗಿ ರೂಪಿಸಲು ಕಾರಣವಾಯಿತು. ಹೋರಾಟ ಫಲಕೊಟ್ಟಿತು ಕೂಡ. ಉತ್ತರ ಕನ್ನಡದ ನಾಮಧಾರಿಗಳು ಕೂಡ ಈ ವಲಯಕ್ಕೆ ಸೇರುತ್ತಾರೆ. ಈ ಹೋರಾಟದಲ್ಲಿ ಅವರೂ ಕೂಡ ಭಾಗಿಗಳೇ. ಆದ್ದರಿಂದ ಒಟ್ಟಾರೆ ಇವರ ಜೀವನದಲ್ಲಿ ಅಂಥ ಭಿನ್ನತೆಗಳು ಎದ್ದು ಕಾಣುವಷ್ಟರಮಟ್ಟಿಗೆ ಇಲ್ಲ.

ಹೀಗೆ ಭೂಮಿಯನ್ನು ಹೋರಾಟದಿಂದ ಪಡೆದ ಇವರು ಆನುಷಂಗಿಕವಾದ ಕೆಲವು ಕಸುಬುಗಳನ್ನು ಮಾಡುತ್ತಿದ್ದರು. ಕಳ್ಳು ಇಳಿಸುವುದು ಕೂಡ ಈ ಕಾರಣಕ್ಕೆ ಉಪಕಸುಬಾಗಿ ರೂಪಗೊಂಡಿತು. ಈ ಮೊದಲು ಗೇಣಿದಾರರಾಗಿದ್ದರಿಂದಲೂ, ಬೊಗನೆ, ತೆಂಗು, ಈಚಲು ಸಸ್ಯಗಳು ನಾಶವಾಗಿದ್ದರಿಂದಲೂ, ಕಳ್ಳು ಇಳಿಸುವುದು ಇವರಿಗೆ ಪ್ರಧಾನವಾದ ಕಸುಬಾಗಲು ಸಾಧ್ಯವಾಗಲೇ ಇಲ್ಲ. ಇಂದಿಗೂ ಕೂಡ, ಈ ಯಾವುದೇ ಸಸ್ಯಗಳು ಅಲ್ಲಿ ಹೆಚ್ಚಾಗಿ ಕಾಣುವುದಿಲ್ಲ. ಅಲ್ಲಲ್ಲಿ ಒಂದೊಂದು ಬೊಗನೆ ಮರಗಳು ಕಾಣುತ್ತವೆ. ತೆಂಗನ್ನು ಬೇರೆ ಉಪಯೋಗಕ್ಕೆ ಬಳಸುತ್ತಾರೆ. ಸೇಂದಿ ನಿಷೇಧ ಕಾನೂನು ಜಾರಿಗೆ ಬಂದ ಮೇಲೆ ಸಂಪೂರ್ಣ ನಿಂತು ಹೋಯಿತು. ಈ ನಿಷೇಧಕ್ಕೆ ಈ ಭಾಗದಲ್ಲಿ ಈಡಿಗರಿಂದ ಯಾವುದೇ ಪ್ರತಿಭಟನೆ ಬರಲಿಲ್ಲ. ಕಾರಣ ಸ್ಪಷ್ಟವಾಗಿಯೇ ಇದೆ. (೧) ಭೂಮಿಯಿರುವುದು (೨) ಸಸ್ಯಗಳಿಲ್ಲದಿರುವುದು., ಹೀಗಾಗಿ ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಯ ಜೀವನ ವಿಧಾನ ಬಯಲು ಸೀಮೆಯಈಡಿಗರಿಗಿಂತ ಸ್ವಲ್ಪಮಟ್ಟಿನ ಸಮೃದ್ಧಿಯನ್ನು ತಂದಿದೆ ಎನ್ನಬಹುದು

(ದೀವರಲ್ಲಿ ಸೇಂದಿಗೆ ಬದಲಾಗಿ ಇಂದು ಈ ಭಾಗದಲ್ಲಿ ಕಳ್ಳಭಟಿ ಸಾರಾಯಿಯು ಹಳ್ಳಿ ಹಳ್ಳಿಯಲ್ಲಿ ವ್ಯಾಪಕವಾಗಿದೆ). ಸಾಮಾಜಿಕವಾಗಿ ಕೂಡ ಇವರು ಬಹುಸಂಖ್ಯಾತರಾದ್ದರಿಂದ ಇತರೇ ಜಾತಿಗಳ ಒತ್ತಡವನ್ನು ಎದುರಿಸಬಲ್ಲವರಾಗಿದ್ದಾರೆ. ರಾಜಕೀಯವಾಗಿ ಈ ಜನರ ನಾಯಕರು ಮೇಲೆ ಬಂದಂತೆ ಇತರೆ ಜಾತಿಯ ಅಲ್ಪಸಂಖ್ಯಾತ ಮೇಲ್ಜಾತಿಯವರು ಕೂಡ ಇವರನ್ನು ಯಾವುದೇ ರೀತಿಯಲ್ಲಿ ತುಳಿಯಲು ಸಾಧ್ಯವಾಗಲಿಲ್ಲ. ಒಟ್ಟಿನಲ್ಲಿ ಇವರ ಸಂಖ್ಯಾಬಲ, ಸಂಘಟನಾಬಲ, ಹೋರಾಟದ ಸ್ಫೂರ್ತಿಗಳು ಇವರ ಸ್ಥಿತಿಗತಿಗಳನ್ನು ನಿರ್ಧರಿಸುವ ಪ್ರಮುಖ ಅಂಶಗಳೆನ್ನಬಹುದು. ಈ ಸ್ಥಿತಿಗೆ ಇತರೇ ಪ್ರಭಾವಗಳಿದ್ದರೂ ಈ ವ್ಯವಸ್ಥೆಯೊಳಗಿನ ಆಂತರಿಕ ವೈರುಧ್ಯವೇ (ಅಂದರೆ ಗೇಣಿದಾರ ಭೂಮಾಲಿಕ ವರ್ಗ ವೈರುಧ್ಯಗಳು) ಇವರ ಬದಲಾವಣೆ ಮತ್ತು ಪ್ರಗತಿಗೆ ಮೂಲ ಕಾರಣವಾಗಿರುವುದರಲ್ಲಿ ಭಿನ್ನಾಭಿಪ್ರಾಯವಿಲ್ಲ).

ದಕ್ಷಿಣಕನ್ನಡ ಜಿಲ್ಲೆಯ ಬಿಲ್ಲವರಲ್ಲೂ ಇದೇ ಬಗೆಯ ಸಾಮ್ಯತೆಗಳಿವೆ. ಆದರೆ ಸ್ವಲ್ಪಮಟ್ಟಿನ ವ್ಯತ್ಯಾಸವೂ ಇದೆ. ಇಲ್ಲಿನ ಪ್ರಮುಖ ವ್ಯತ್ಯಾಸಗಳನ್ನು ಮಾತ್ರ ಗುರುತಿಸಲಾಗಿದೆ. (೧) ಭೂಸುಧಾರಣಾ ಕಾಯಿದೆಯು ದಕ್ಷಿಣಕನ್ನಡಲ್ಲೂ ಸಾಕಷ್ಟು ಬದಲಾವಣೆ ಮಾಡಿದೆ. ಸಾಮಾಜಿಕವಾಗಿ ದೀವರಂತೆಯೇ ಬಿಲ್ಲವರೂ ವ್ಯವಸ್ಥೆಯೊಳಗಡೆ ಕಡೆಗಣಿಸಲ್ಪಟ್ಟವರು. ಅಲ್ಲಿಯ ಪ್ರಮುಖ ಜನವರ್ಗವಾದ ಭಂಟ ಮತ್ತು ಬ್ರಾಹ್ಮಣರು, ಇವರನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರು. ಇಲ್ಲಿನ ಬಹುತೇಕ ಭೂ ಒಡೆತನವನ್ನು ಭಂಟರು ಮತ್ತು ಬ್ರಾಹ್ಮಣರೇ ಹೊಂದಿದ್ದರು. ಇವರ ಗೇಣಿದಾರರಾಗಿ ಬಹುಸಂಖ್ಯಾತ ಬಿಲ್ಲವರು ಜೀವನ ನಡೆಸುತ್ತಿದ್ದರು. ಇಂದಿಗೂ ಭಂಟರು, ಬ್ರಾಹ್ಮಣರೇ ಅಧಿಕ ಭೂ ಒಡೆತನದಲ್ಲಿ ಪ್ರಥಮ ಸ್ಥಾನದಲ್ಲಿದ್ದಾರೆ. ಇನ್ನು ಗೇಣಿದಾರರಲ್ಲದ ಬಹುಸಂಖ್ಯಾತ ಬಿಲ್ಲವರು ಈ ಭಾಗದ ಕಾಡಿನಲ್ಲಿ ಹೆಚ್ಚಾಗಿ ವಾಸವಾಗಿದ್ದವರು. ಇವರು ಕಾಡಿನ ತಾಳೆ, ಬೊಗನೆ ಮತ್ತು ತೆಂಗಿನ ಮರಗಳನ್ನು ಕಳ್ಳು ತೆಗೆಯಲು ಬಳಸಿಕೊಳ್ಳುತ್ತಿದ್ದರು. ಕಳ್ಳು ತೆಗೆದು ಮಾರಿ ಜೀವನ ಮಾಡುವುದೇ ಇಂಥವರಿಗೆ ಪ್ರಧಾನ ಕಸುಬು[(ಕುಂದಾಪುರ ಮತ್ತು ಕಾಸರಗೋಡು, ಕೇರಳಾಗಳಲ್ಲಿ ಬಹುತೇಕ ತೆಂಗಿನಮರಗಳಿಂದ ಕಳ್ಳು ಇಳಿಸುವ ಮೂರ್ತೆದಾರರಿದ್ದಾರೆ. ಮಂಗಳೂರು ಮತ್ತು ಭಂಟ್ವಾಳ ತಾಲೂಕಿನ ಮೂರ್ತೆದಾರರು ತಾಳೆಮರದಿಂದ ಕಳ್ಳು ತೆಗೆಯುತ್ತಾರೆ.) (ಕಳ್ಳು, ಮೂರ್ತೆ, ಸೇಂದಿ, ಹೆಂಡ, ಸಿದ್ಧಿರಸ, ಸಾಂಭಾವಿ, ಮದನಸುರಿ ಮೊದಲಾದ ಹೆಸರುಗಳು ಸೇಂದಿಗಿವೆ ಎನ್ನುವುದು ಗಮನಾರ್ಹ)] ಮಂಗಳೂರಿನ ಬಿಲ್ಲವರು ತೆಂಗಿನಮರಗಳನ್ನು ಪೂಜ್ಯಭಾವದಿಂದ ನೋಡುತ್ತಾರೆ. ತೆಂಗಿನ ಮರ ಬಹುಪಯೋಗಿಯಾದ್ದರಿಂದ ಕಳ್ಳು ಇಳಿಸುವುದಕ್ಕೆ ಬಳಸುವುದಿಲ್ಲವಂತೆ ಹಾಗೆಯೇ ಈಚೆಗೆ ತಾಳೆ ಮರದಿಂದ ಕಳ್ಳು ಇಳಿಸಿ ಮಾರುವುದನ್ನೇ

ಪ್ರಧಾನ ಕಸುಬಾಗಿಸಿಕೊಂಡಿದ್ದಾರೆ. ಬೆಲ್ಲವನ್ನು ಕಳ್ಳಿನಿಂದ ತೆಗೆಯುವುದು ಇಂದು ಕಡಿಮೆಯಾಗಿದೆ. ಕಾರಣ ಕಳ್ಳನ್ನು ಕಾಯಿಸಿ ಪಾಕ ತೆಗೆಯಲು ಸೌದೆ ಕೊರತೆಯಿದೆಯಂತೆ). ಈ ಭಾಗದಲ್ಲಿ ತಾಳೆ ಮತ್ತು ಬೊಗನೆ ಸಸ್ಯಗಳು ಹೇರಳವಾಗಿವೆ ( ಈಚೆಗೆ ತಾಳೆ ಮತ್ತು ತೆಂಗಿನ ಸಸ್ಯಗಳು ಹೆಚ್ಚಾಗಿವೆ. ಬೊಗನೆ ಸಸ್ಯ ನಾಶವಾಗುತ್ತಿದೆ. ಇದಕ್ಕೆ ಕಾರಣ ಕಾಡು ಊಳುವ ಭೂಮಿಯಾಗಿ ಬಳಕೆಯಾಗುತ್ತಿರುವುದು ಮತ್ತು ಬೊಗನೆ ಮರ ಮನೆಗಳನ್ನು ನಿರ್ಮಿಸಿಕೊಳ್ಳಲು ಅಗತ್ಯವಾದ ಮುಟ್ಟುಗಳಾಗಿರುವುದು ಹಾಗೂ ಸೇಂದಿ ತೆಗೆಯುವ ವಿಧಾನವು ಬಹಳ ಕಷ್ಟವಿರುವುದು ಕೂಡ (ಮಾಹಿತಿ: ಲೊಕಯ್ಯ ಪೂಜಾರ್ , ಬಿಲ್ಲವ, ೬೦ವರ್ಷ, ಕುರ್ನಾಡು, ಬಂಟ್ವಾಳ).

ಈ ಭಾಗದಲ್ಲಿ ಜನಪ್ರಿಯವಾಗಿರುವ ಗಾದೆಯೆಂದು ಇಲ್ಲಿನ ಆರ್ಥಿಕ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತದೆ. “ಕಡಲಾಯಿ, ಮಡಲಾಯಿ, ವಕ್ಕಲಾಯಿ”, ಅಂದರೆ ಕಡಲಿಗ, ಮಡಲಿಗ, ಒಕ್ಕಲಿಗ ಎನ್ನುವ ಅರ್ಥ. ಕಡಲಿನಲ್ಲಿ ಮೀನು ಹಿಡಿದು ಬದುಕುವವನು ಕಡಲಿಗ ಅಂದರೆ ಮೊಗುವೀರರು. ಮಡಿಲಾಯಿ ಎಂದರೆ ತೆಂಗಿನಗರಿ ಎಂಬ ಅರ್ಥವಿದೆ. ತೆಂಗಿನ ಮರದಿಂದ ಕಳ್ಳು ಇಳಿಸಿ ಜೀವನ ಸಾಗಿಸುವವನು ಕಾಡಿನ ತೆಂಗಿನ ಒಡೆತನವಿರುವವನು ಎನ್ನುವ ಅರ್ಥ. ಇವರು ಬಿಲ್ಲರು, ಮೂರ್ತೆದಾರರು ಎಂದು ಕರೆಯಲ್ಪಡುತ್ತಾರೆ. ಒಕ್ಕಿಲಾಯಿ ಎಂದರೆ, ಭಂಟರಿಗೆ ಹೇಳುವ ಮಾತು. ಭೂಮಿಯಿಂದ ಒಕ್ಕಲುತನವನ್ನು ಕೈಗೊಂಡವರು ಎಂದರ್ಥ. ಈ ಮೂರು ಜನವರ್ಗ ದಕ್ಷಿಣಕನ್ನಡದಲ್ಲಿ ಬಹುಸಂಖ್ಯಾತರಾಗಿದ್ದಾರೆ. ಇಂದು ಈ ಮೂರು ವರ್ಗವೂ ಅಲ್ಲಿನ ರಾಜಕೀಯ ಆರ್ಥಿಕ, ಸಾಮಾಜಿಕ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರವಹಿಸುತ್ತಿವೆ. ಉದಾ: ೧೯೮೮ರ ಸಮೀಕ್ಷೆಯಲ್ಲಿ ಈ ೩ ಜನವರ್ಗದ ಸಂಖ್ಯೆ ಹೀಗಿದೆ

| ಕೋಮು | ಸಂಖ್ಯೆ |
|---|---|
| ೧)ಬಿಲ್ಲವರು | - ೪,೨೫,೬೮೮ |
| ೨)ಭಂಟರು | -೨,೮೧,೦೦೦ |
| ೩)ಮೊಗವೀರರು | -೧,೧೩,೬೪೮ |

(ಮಾಹಿತಿ: Report of the Second Backward Classes, T.Venkataswamy, ೧೯೮೬,-p.೫೪)

ಉಳಿದ ಎಲ್ಲಾ ಕೋಮುಗಳು ಅಲ್ಪಸಂಖ್ಯಾತರು ಇವರಲ್ಲಿ ಬಹುಸಂಖ್ಯಾತರೆಂದರೆ ಬಿಲ್ಲವರೇ. ನಂತರದ ಸ್ಥಾನವನ್ನು ಮೊಗವೀರರು, ಭಂಟರು ಪಡೆದುಕೊಂಡಿದ್ದಾರೆ (ಪ್ರಬಲರು ಮತ್ತು ಪ್ರಬಲವರ್ಗ ಎನ್ನುವ ಎರಡು

ಶಬ್ದಗಳನ್ನು ಅಧ್ಯಯನದ ಆರಂಭದಿಂದಲೂ ಬಳಸಿಕೊಳ್ಳಲಾಗಿದೆ. ಇವುಗಳನ್ನು ಎರಡು ಅರ್ಥದಲ್ಲಿ ಬಳಸಬಹುದು., ೧.ನಿರ್ದಿಷ್ಟ ಭೂಪ್ರದೇಶದಲ್ಲಿ ಯಾವುದೇ ಜಾತಿಯ ಅಥವಾ ವರ್ಗದ ಬಹುಸಂಖ್ಯಾತ ಜನರನ್ನು ಪ್ರತಿನಿಧಿಸುವ ಅರ್ಥದಲ್ಲಿ,೨. ಜನಸಂಖ್ಯೆಯಲ್ಲಿ ಕಡಿಮೆಯಿದ್ದರು. ಆರ್ಥಿಕವಾಗಿ ಶಕ್ತಿಯುತರಾದವರನ್ನು ಪ್ರತಿನಿಧಿಸುವ ಮತ್ತೊಂದು ಅರ್ಥದಲ್ಲಿ. ಈ ಶಬ್ದಗಳನ್ನು ಆಯಾಯ ಸಂದರ್ಭ ಮತ್ತು ಸನ್ನಿವೇಶಕ್ಕೆ ಅನುಸಾರವಾಗಿ ಅರ್ಥನೀಡುವಂತೆ ಬಳಸಿಕೊಳ್ಳಲಾಗಿದೆ). ಡಾ: ಚಂದ್ರ ಪೂಜಾರ್ ಅವರು ಬಿಲ್ಲವರನ್ನು ೨ ಭಾಗವಾಗಿ ಗುರ್ತಿಸುತ್ತಾರೆ.

೧.ಭೂರಹಿತ ಮೂರ್ತೆದಾರರು

೨.ಭೂಮಿಯುಳ್ಳ ಮೂರ್ತೆದಾರರು

ಇವರು ತಮ್ಮ ಸಮೀಕ್ಷೆಯಲ್ಲಿ ಎಲ್ಲಾ ಬಿಲ್ಲವರನ್ನೂ ತೆಗೆದುಕೊಂಡಿಲ್ಲ. ಮೂರ್ತೆ ತೆಗೆಯುವವರನ್ನು ಮಾತ್ರ ಭೇಟಿ ಮಾಡಿ ಕ್ಷೇತ್ರಕಾರ್ಯದಿಂದ ಮಾಹಿತಿ ಸಂಗ್ರಹಿಸಿದ್ದಾರೆ. ಇವರು ಕೊಡುವ ಅಂಕಿ-ಅಂಶಗಳು ಕೇವಲ ಮೂರ್ತೆದಾರರಿಗೆ ಮಾತ್ರ ಸಂಬಂಧಿಸಿದವುಗಳು. ಮೂರ್ತೆದಾರರಲ್ಲದೆ ಕೇವಲ ಕೃಷಿಯನ್ನವಲಂಬಿಸಿದ ಬಿಲ್ಲವರೂ ಶೇ.೩೦ರಷ್ಟಿದ್ದಾರೆ. ಶೇ.೩೦ರಷ್ಟು ಬಿಲ್ಲವರು ಹೋಟೆಲು, ನೌಕರಿ ಇತ್ಯಾದಿಗಳಲ್ಲಿ ಹಂಚಿ ಹೋಗಿದ್ದಾರೆ. ಆಧುನಿಕ ಶಿಕ್ಷಣ ಮತ್ತು ಸರ್ಕಾರದ ಹಿಂದುಳಿದ ವರ್ಗಗಳ ಮೀಸಲಾತಿಯ ಫಲವಾಗಿ ಶೇ. ೧೦ ರಷ್ಟು ಬಿಲ್ಲವರು ಇಂದು ಸರಕಾರಿ ನೌಕರಿಯಲ್ಲಿದ್ದಾರೆ. ಈ ವರ್ಗದ ಬಿಲ್ಲವರಿಗಿಂತ ಮೂರ್ತೆದಾರ ಬಿಲ್ಲವರ ಸ್ಥಿತಿಮಾತ್ರ ತೀರಾ ಧಾರಣವಾಗಿತ್ತು. ಕೇವಲ ಭೂಮಿಯನ್ನು ಅವಲಂಬಿಸಿರುವ, ಬಿಲ್ಲವರು ಭೂಸುಧಾರಣ ಚಳುವಳಿಯಿಂದ ಜೀವನಕ್ಕಾಗುವಷ್ಟು ಭೂಮಿಯನ್ನು ಹೊಂದಿದ್ದಾರೆ. ಇಂಥವರು ಮೂರ್ತೆ ಕೆಲಸಕ್ಕೆ ಕೈ ಹಾಕಿಲ್ಲ. ಇದೇ ವರ್ಗದಿಂದಲೇ ಸಾಕಷ್ಟು ಜನರು ಹೋಟೆಲುಗಳನ್ನು ನಡೆಸುತ್ತಾ ಉತ್ತಮ ಮಟ್ಟದ ಜೀವನವನ್ನು ನಡೆಸುತ್ತಿದ್ದಾರೆ. ಇವರ ಭೂಮಿಯ ಆದಾಯವು ಬೇರೆ ಕ್ಷೇತ್ರಗಳಿಗೆ ತೆರಳಲು ಆಧಾರವಾಯಿತು. ಇಂಥವರು ೨ ರಿಂದ ೪ ಎಕರೆಗಳಷ್ಟು ಭೂಮಿ ಹೊಂದಿದ್ದಾರೆ (ಮಾಹಿತಿ: ಕ್ಷೇತ್ರಕಾರ್ಯದಿಂದ ಮಾಹಿತಿ ನೀಡಿದವರು: ಬಾಲಪ್ಪು ಪೂಜಾರಿ ಕುರ್ನಾಡು).

ಭೂಸುಧಾರಣಾ ಕಾಯಿದೆಯಿಂದ ಭೂಮಿ ಪಡೆದವರು ಶೇ.೬೦. ಆದರೆ ಭೂಮಿಯೇ ದೊರೆಯದೆ ಅರ್ಧ ದಿಂದ ಒಂದು ಎಕರೆಯಷ್ಟು ಭೂಮಿಯುಳ್ಳವರು ಶೇ.೪೦ ಜನ. ಈಗ ಮೂರ್ತೆ ಕಸುಬನ್ನು ಪ್ರಧಾನವಾಗಿ

ಅನುಸರಿಸುತ್ತಿರುವವರು ಶೇ.೪೦ ಜನ ಮಾತ್ರ. ಭೂಮಿಯುಳ್ಳ ಬಿಲ್ಲವರೂ ಕೂಡ ಕೆಲವರು ಮೂರ್ತೆ ಕಸುಬನ್ನು ಆನುಷಂಗಿಕವಾಗಿ ಮುಂದುವರಿಸುತ್ತಿದ್ದಾರೆ. ಇದು ಇವರಿಗೆ ಪ್ರಾಥಮಿಕ ಕಸುಬಲ್ಲ .

೧೯೯೦ರಲ್ಲಿ ಸೇಂದಿ ನಿಷೇಧವನ್ನು ಸರ್ಕಾರ ಜಾರಿಗೆ ತಂದದ್ದು ಸರಿಯಷ್ಟೆ. ಈ ಸಂದರ್ಭದಲ್ಲಿ ದಕ್ಷಿಣಕನ್ನಡದಲ್ಲಿ ಅದನ್ನು ವಿರೋಧಿಸಿ ಭಾರಿ ಪ್ರತಿಭಟನೆ ನಡೆಯಿತು. ಮೂರ್ತೆದಾರರು ಸಂಘಟನೆಯಾಗಿ ಹೋರಾಟ ನಡೆಸಿದರು. ಇದರಲ್ಲಿ ರಾಜಕೀಯ ನಾಯಕರುಗಳೂ ಪ್ರಮುಖವಾಗಿ ಭಾಗವಹಿಸಿದ್ದರು. ಈ ಸಮುದಾಯದ ಕೆಲವು ರಾಜಕಾರಣಿಗಳು ವಿಧಾನಸೌಧದಲ್ಲಿ ಚರ್ಚಿಸಿ ನಿರೋಧವನ್ನು ವಾಪಾಸು ತೆಗೆದುಕೊಳ್ಳುವಂತೆ ಒತ್ತಾಯಿಸಿದರು (ಈ ರಾಜಕಾರಣಿಗಳ ಹಿತಾಸಕ್ತಿಗಳು ಸ್ಪಷ್ಟವಾಗಿಯೇ ಇವೆ). ಆದರೆ ಇವರು ಈ ನಿರೋಧವನ್ನು ಒಂದು ದೀರ್ಘ ಹೋರಾಟವಾಗಿ ಮುಂದುವರಿಸುವ ಅನಿವಾರ್ಯತೆಯನ್ನು ಕುರಿತು ಚರ್ಚಿಸುವುದು ಮುಖ್ಯ. ಈ ಬಗ್ಗೆ ಸವಿವರವಾದ ಮಾಹಿತಿಯನ್ನು ಡಾ॥ ಚಂದ್ರ ಪೂಜಾರರು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ್ದಾರೆ. ಆದರೆ ಪ್ರಕಟಿಸಿಲ್ಲ.

ಮೇಲೆ ತಿಳಿಸಿದ ಶೇ.೪೦ ಜನ ಅರ್ಧದಿಂದ ಒಂದು ಎಕರೆ ಭೂಮಿಯುಳ್ಳವರು. ಈ ಭೂಮಿಯಲ್ಲಿ ಇವರ ಕನಿಷ್ಟ ಜೀವನದ ಅವಶ್ಯಕತೆಗಳೂ ಈಡೇರಲಾರವು. ಇದಕ್ಕೆ ಪರ್ಯಾಯವಾಗಿ ಪ್ರಾಥಮಿಕ ಮತ್ತು ಶಾಶ್ವತವಾದಂಥ ಜೀವನವನ್ನು ಇವರು ಕಂಡುಕೊಳ್ಳಲೇ ಬೇಕಿತು. ಆದರೆ ಇವರು ಹೊಸದಾಗಿ ಕಂಡುಕೊಳ್ಳಲೂ ಅವಕಾಶ ಇರಲಿಲ್ಲ. ಏಕೆಂದರೆ ಅವರ ಪಾರಂಪರಿಕ ವೃತ್ತಿಯೇ ಕಳ್ಳು ತೆಗೆಯುವುದಾಗಿದೆ. ಅದನ್ನೇ ಇವರು ಮುಂದುವರಿಸಿಕೊಂಡು ಬಂದರು. ಇದನ್ನು ಬಿಟ್ಟು ಅವರು ಜೀವನ ನಡೆಸುವಂತಿಲ್ಲ. ಕರ್ನಾಟಕದ ಇತರೆ ಜಿಲ್ಲೆಗಳಿಗೆ ಹೋಲಿಸಿದರೆ ಈ ಜಿಲ್ಲೆಯ ಜನಸಂಖ್ಯೆ ಬಹುಮಟ್ಟಿಗೆ ಹೆಚ್ಚಾಗಿಯೇ ಇದೆ (ಬೆಂಗಳೂರು, ಮೈಸೂರನ್ನು ಹೊರತುಪಡಿಸಿ). ಈ ಜಿಲ್ಲೆಯ ಬಹುವ್ಯಾಪ್ತಿಯ ಭೂಮಿ ಇಳಿಜಾರಾದ ಬೆಟ್ಟಗುಡ್ಡಗಳಿಂದ ಕೂಡಿದೆ. ಹಾಗಾಗಿ ಎಲ್ಲ ಭೂಮಿಯನ್ನು ಸಾಗುವಳಿ ಮಾಡಿ ಕೃಷಿ ಯೋಗ್ಯವಾಗುವಂತೆ ಮಾಡುವುದು ಕಷ್ಟ. ಇದಕ್ಕೆ ಅರಣ್ಯ ಇಲಾಖೆಯ ನಿಬಂಧವೂ ಇದೆ. ಪರಿಸರ ಮಾಲಿನ್ಯ ತಡೆಯುವ ಮತ್ತು ಅರಣ್ಯವನ್ನು ರಕ್ಷಿಸುವ ನೆಪದಲ್ಲಿ ಸರ್ಕಾರವೂ ಇದಕ್ಕೆ ಅಡಿಯಾಗಿದೆ. ಹೀಗಾಗಿ ಬಹುಸಂಖ್ಯಾತ ಜನರು ಇರುವ ಭೂಮಿಯನ್ನೇ ಕೃಷಿಗೆ ಅಳವಡಿಸಿಕೊಂಡು ಬದುಕಬೇಕಾದ್ದರಿಂದ, ತುಂಡು ಭೂಮಿಯೇ ಅವರಿಗೆ ಲಭ್ಯವಾಗಲು ಸಾಧ್ಯವಾಯಿತು. ಇಂಥ ತುಂಡು ಭೂಮಿ ಕೃಷಿಯಿಂದ ಜೀವನಾವಶ್ಯಕಗಳು ಈಡೇರಲಾರವು ಎನ್ನುವುದು ಮತ್ತೊಂದು ಅಂಶ. ಇದೇ ಸ್ಥಿತಿ ಅಲ್ಲಿಯ ಮೂರ್ತೆದಾರರದ್ದು ಆಗಿದೆ. ಈ ಕಾರಣವೇ ಪ್ರಮುಖವೆನ್ನುವುದು

ಗಮನಾರ್ಹ. ಇಂಥ ಕಾರಣಗಳ ಫಲವಾಗಿ ೧೯೫೦ರಲ್ಲಿ ಸೇಂದಿ ನಿಷೇಧ ಕಾನೂನು ರಾಜ್ಯವ್ಯಾಪಿ ಅನ್ವಯವಾದಾಗ ದಕ್ಷಿಣಕನ್ನಡದಲ್ಲಿ ಭಾರಿ ಪ್ರತಿಭಟನೆಯನ್ನು ಸರ್ಕಾರ ಎದುರಿಸಬೇಕಾಯಿತು. ಅಲ್ಲದೆ ಬಿಲ್ಲವರೇ ಬಹುಸಂಖ್ಯಾತರಾದ ಈ ಪ್ರದೇಶದಲ್ಲಿ ಸಂಘಟನೆ ಪ್ರಬಲವಾಗಿತ್ತು. ಇದರಿಂದ ಹೋರಾಟವು ಯಾವ ಸ್ವರೂಪವನ್ನು ಪಡೆಯಬಹುದೆಂದು ಊಹಿಸಿದ ಸರ್ಕಾರವು ಸೇಂದಿ ನಿಷೇಧವನ್ನು ರದ್ದುಮಾಡಿತು. ಕ್ರಮೇಣ ಅಲ್ಲಿನ ಗುತ್ತಿಗೆ ಪದ್ಧತಿಯೂ ರದ್ದಾಯಿತು. ಇದಕ್ಕೆ ಪರ್ಯಾಯವಾಗಿ ಮೂರ್ತೆದಾರರ ಸಹಕಾರ ಸಂಘವು ರೂಪುತಳೆಯಿತು. ಮೂರ್ತೆದಾರರು ಮೂರ್ತೆಯನ್ನು ತೆಗೆದು ಸಹಕಾರ ಸಂಘಕ್ಕೆ ನಿಗದಿತ ಬೆಲೆಗೆ ಮಾರುವ ವ್ಯವಸ್ಥೆ ಮಾಡುತ್ತಿದ್ದರು. ಸಂಘದವರು ಅದನ್ನು ಮತ್ತೊಂದು ಲಾಭದಾಯಕ ಬೆಲೆಗೆ ಮಾರುತ್ತಿದ್ದರು. ಇದು ಕಾರ್ಮಿಕ ಮೂರ್ತೆದಾರರಿಗೆ ನಷ್ಟವಾಗುತ್ತಿತ್ತು, ಸಂಘಕ್ಕೆ ಲಾಭವಾಗುತ್ತಿತ್ತು.

೧೯೭೪ ರಲ್ಲಿ ೧೦೪ ದಿನಗಳ ಕಾಲ ಹೋರಾಟ ನಡೆಸಿದ ಮೂರ್ತೆದಾರರು ಈ ಕೆಳಗಿನ ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟರು (೧) ಸೇಂದಿಗೆ ಬೆಲೆ ಹೆಚ್ಚಿಸುವುದು (೨) ಅಕ್ರಮ ಮರದ ತೆರಿಗೆ ರದ್ದತಿ. ಈ ಎರಡೂ ಬೇಡಿಕೆಗಳು ಯಶಸ್ವಿಯಾದವು. ಸೇಂದಿ ಬಾಟಲಿಗೆ ೨೫ ಪೈಸೆಯಿಂದ ೫೦ ಪೈಸೆಯಾಯಿತು. ಮರದ ತೆರಿಗೆ ರದ್ದಾಯಿತು. ಇಂದು ಮಂಗಳೂರು, ಬಂಟ್ವಾಳ ತಾಲೂಕುಗಳಲ್ಲಿ ತಾವೇ ಸ್ವತಃ ತಾಳೆ ಮರಗಳಿಂದ ಸೇಂದಿ ತೆಗೆದು ಮರುತ್ತಿರುವ ಮೂರ್ತೆದಾರರು ಒಂದು ಲೀಟರ್ ಸೇಂದಿಗೆ ಆರು ರೂಪಾಯಿ ನಿಗದಿಪಡಿಸುತ್ತಿದ್ದಾರೆ. ಇದು ಅವರ ಹೋರಾಟದ ಫಲಕೂಡ. ಇಂಥಹ ಮೂರ್ತೆದಾರ ಬಿಲ್ಲವರಿಗೆ ಕೃಷಿಯೇ ಆನುಷಂಗಿಕ ವೃತ್ತಿಯಾಗಿದೆ. ಇದಲ್ಲದೆ ಮೀನು, ಬೇಟೆ, ಬೀಡಿ ಕಟ್ಟುವುದು ಮತ್ತಿತರೆ ಚಟುವಟಿಕೆಗಳಲ್ಲಿ ತೊಡಗುತ್ತಿದ್ದಾರೆ. ಇವರ ಆರ್ಥಿಕ ಚಟುವಟಿಕೆಗಳ ಸವಿವಿವರವಾದ ಮಾಹಿತಿಯನ್ನು ಚಂದ್ರ ಪೂಜಾರರು ಅಂಕಿ-ಅಂಶಗಳ ಮೂಲಕ ಹಿಡಿದಿಟ್ಟಿದ್ದಾರೆ. ಅವರು ನೀಡುವ ಒಂದೆರಡು ಪಟ್ಟಿಯನ್ನು ಗಮನಿಸಬಹುದು.

ಉದಾ: ಮೂರ್ತೆದಾರ ಉದ್ಯೋಗ ಕುರಿತು

| ಉದ್ಯೋಗ | ಪ್ರತಿಕ್ರಿಯೆ ನೀಡಿದವರು | ಶೇಕಡಾ |
|---|---|---|
| ೧. ಮೂರ್ತೆ | -೬ | ೫ |
| ೨. ಕೃಷಿ | - ೧೬ | ೧೩.೩೩ |
| ೩. ಕೂಲಿ | - ೧೮ | ೧೫.೦೦ |
| ೪. ಬೀಡಿ | - ೪೮ | ೪೦.೦೦ |

| | | |
|---|---|---|
| ೫.ಸರಕಾರಿ ನೌಕರಿ | - ೦೧ | ೦.೮೩ |
| ೬.ಇತರೆ | -೧೦ | ೮.೩೩ |
| ೭.ಏನೂ ಇಲ್ಲ | -೨೧ | ೧೭.೫೧ |

| ವಿದ್ಯಾಭ್ಯಾಸ | ಪ್ರತಿಕ್ರಿಯೆ ನೀಡಿದವರು | ಶೇಕಡಾ |
|---|---|---|
| ೧. ಅನಕ್ಷರಸ್ಥರು | ೪೧ | ೩೮.೩೩ |
| ೨. ೧-೪ನೇ ತರಗತಿ | ೪೫ | ೩೫.೮೩ |
| ೩. ೪-೭ನೇ ತರಗತಿ | ೨೮ | ೨೩.೩೩ |
| ೪. ೭-೧೦ನೇ ತರಗತಿ | ೦೩ | ೨.೫೧ |

ಮೂರ್ತೆದಾರರು ತಾವು ಹೋರಾಟ ಮಾಡಿದ ಫಲವಾಗಿ ತೆರಿಗೆ ರದ್ದಾಗಿದೆ. ಇಂದು ಅವರ ಕನಿಷ್ಠ ಜೀವನಾವಶ್ಯಕತೆಳಿಗೆ ಸಮಸ್ಯೆಯಿಲ್ಲ. ಸೇಂದಿಕೂಡ ಅವರೇ ತೆಗೆದು ಮನೆಯ ಹತ್ತಿರವೇ ಮಾರುವುದರಿಂದ ಕಲಬೆರಕೆ ನಡೆಯುವುದು ಕಡಿಮೆ. ದುಡಿಮೆಗೆ ನೇರ ಪ್ರತಿಫಲವನ್ನು ಇಂದು ಇವರು ಪಡೆಯುತ್ತಿದ್ದಾರೆ. ಇವರ ಜೀವನ ಮಟ್ಟ ಇಂದು ಸ್ವಲ್ಪಮಟ್ಟಿಗೆ ಗುಣಾತ್ಮಕ ಬೆಳವಣಿಗೆಯನ್ನು ಪಡೆದುಕೊಂಡಿದೆ.

| ಆದಾಯ | ಪ್ರತಿಕ್ರಿಯೆ ನೀಡಿದವರು | ಶೇಕಡಾ |
|---|---|---|
| ೧. ೩೦೦-೫೦೦ | ೧೧ | ೯.೧೬ |
| ೨. ೫೦೦-೨೫೦ | ೪೧ | ೩೪.೧೬ |
| ೩. ೭೫೦-೧,೦೦೦ | ೨೮ | ೨೩.೩೩ |
| ೪. ೧೦೦೦-೧೨೫೦ | ೩೪ | ೨೮.೫೫ |
| ೫. ೧೨೫೦-೧೫೦೦ | ೬ | ೫.೦೦ |

ಹೀಗೆ ಒಂದೇ ಜಾತಿಗೆ ಸೇರಿದ ಮೂರ್ತೆದಾರರಲ್ಲೆ ವಿವಿಧವರ್ಗಗಳನ್ನು ಗುರುತಿಸಬಹುದಾಗಿದೆ. ವಸಾಹುತಶಾಹಿಯ ಪ್ರಭಾವ ಮತ್ತು ಬ್ರಿಟಿಷರಿಂದ ಭಾರತದವರಿಗೆ ಅಧಿಕಾರ ಸಿಕ್ಕಿದ್ದರ ಫಲವಾಗಿ, ಆರ್ಥಿಕ, ರಾಜಕೀಯ, ಸಾಮಾಜಿಕವಾಗಿ ಇಂದು ಬಿಲ್ಲವರು ಸಹ ದೀವರಂತೆ ರಾಜ್ಯದಲ್ಲಿ ತಮ್ಮನ್ನು ಗುರ್ತಿಸಿಕೊಳ್ಳ ತೊಡಗಿದ್ದಾರೆ. ಜಿಲ್ಲೆಯಲ್ಲೆ ಪ್ರಬಲರಾದ ಬಿಲ್ಲವರು ಜಿಲ್ಲೆಯ ರಾಜಕೀಯದಲ್ಲಿ ನಿರ್ಣಾಯಕ

ಪಾತ್ರವಹಿಸುತ್ತಿದ್ದಾರೆ. ಈ ಸಮೂಹದ ರಾಜಕಾರಣಿಗಳು ಇವರಿಂದಲೇ ತಮ್ಮ ಹುಟ್ಟನ್ನು ಪಡೆದುಕೊಂಡು ಇಂದು ರಾಜ್ಯ ಮತ್ತು ರಾಷ್ಟ್ರದ ರಾಜಕಾರಣದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದಾರೆ. ಜಾತಿಕೇಂದ್ರಿತ ಭಾವನೆಯನ್ನು ರಾಜಕಾರಣಿಗಳು ಚೆನ್ನಾಗಿ ಬಳಸಿಕೊಳ್ಳಲು ಸಾಧ್ಯವಾಗಿರುವುದರಿಂದ ಇಂದು ಬಹುಸಂಖ್ಯಾತರಾದ ದೀವರು, ಬಿಲ್ಲವರು ರಾಜಕೀಯದಲ್ಲಿ ಒಂದು ರೀತಿಯಲ್ಲಿ ಭಾವನಾತ್ಮಕ ನೆಲೆಯಲ್ಲಿ ಗುರ್ತಿಸಿಕೊಳ್ಳಲು ಸಾಧ್ಯವಾಗಿದೆ. ಇದು ಈ ಸಮೂಹದ ಆರ್ಥಿಕ ಬೆಳವಣಿಗೆಗೆ (ಅವರ ಸಮಗ್ರ ಸ್ವರೂಪದ ಬದಲಾವಣೆಗೆ) ಎಷ್ಟು ಸಹಾಯಕವಾಗಿದೆ ಎನ್ನುವುದು ಬೇರೆಯ ಚರ್ಚೆ. ಒಟ್ಟು ಈ ರಾಜಕಾರಣದ ಸ್ಥಿತಿಯಲ್ಲಂತೂ ಅಭೂತಪೂರ್ವ ಬೆಳವಣಿಗೆ ಸಾಧ್ಯವಾಗಿದೆ.

ಜಾತಿಕೇಂದ್ರಿತವಾಗಿ ಈಡಿಗರನ್ನು ಗುರುತಿಸುವುದಾದರೆ ೨೪-೧೨-೧೯೯೫ರಲ್ಲಿ ಬೆಂಗಳೂರಿನಲ್ಲಿ ನಡೆದ ರಾಜ್ಯಮಟ್ಟದ ಆರ್ಯ ಈಡಿಗರ ಸಮ್ಮೇಳನ ಒಂದು ಉತ್ತಮ ನಿದರ್ಶನ. ಈ ಸಭೆಗೆ ಆಗಮಿಸಿದ ರಾಜ್ಯದ ಮುಖ್ಯ ಮಂತ್ರಿಗಳು ಮತ್ತಿತರೆ ರಾಜಕಾರಣಿಗಳು ಈ ಸಮ್ಮೇಳನವು ಇಡೀ ದೇಶದಲ್ಲಿ ಅತ್ಯಂತ ದೊಡ್ಡ ಮತ್ತು ವೈಭವ ಪೂರ್ಣಸಮ್ಮೇಳನವೆಂದು ವರ್ಣಿಸಿದ್ದಾರೆ. ಈ ಸಮ್ಮೇಳನವು ರಾಜ್ಯದಲ್ಲಿ ಈಡಿಗರ ಆರ್ಥಿಕ ಸ್ಥಿತಿಯನ್ನು ಸೂಚಿಸುವ ಪ್ರತೀಕವಾಗಿ ಅರ್ಥಮಾಡಿಕೊಂಡಿರುವವರೇ ಬಹುಮಂದಿ. ಈ ಸಮ್ಮೇಳನಕ್ಕೆ ಖರ್ಚಾದ ಕೋಟ್ಯಾಂತರ ರೂಗಳು ಇಡೀ ರಾಜ್ಯದ ಈಡಿಗರ ಹಣವೆಂದು ಅರ್ಥಮಾಡಿಕೊಳ್ಳಾಲಾಗಿದೆ. ಹೀಗೆ ಅರ್ಥಮಾಡಿಕೊಳ್ಳುವಂತೆ ಭಾರತೀಯ ಜಾತಿವ್ಯವಸ್ಥೆ ಮತ್ತು ಉದಾರವಾದಿ (ಜಾತೀ) ಪ್ರಜಾಪ್ರಭುತ್ವದ ರಾಜಕಾರಣದ ನೀತಿಗಳು ಒತ್ತಾಯಿಸುತ್ತವೆ. ಸಮ್ಮೇಳನದ ವೈಭವ ರಾಜ್ಯದ ಈಡಿಗರಿಗೆ ಸಲ್ಲುತ್ತದೆಂದು ಭಾವುಕತೆಯನ್ನು ಕೆರಳುವ ಭಾಷಣಗಳು ಜರುಗುತ್ತವೆ. ಈ ತರಹದ ಒತ್ತಾಯ ತರುವ ಉದ್ದೇಶ ಮತ್ತು ತಂತ್ರಗಳು ಈಗಾಗಲೇ ಸ್ಪಷ್ಟವಾಗಿವೆ. ಈ ಸಮ್ಮೇಳನದಲ್ಲಿ ಬಹುಮುಖ್ಯವೆನ್ನಲಾದ ಕೆಲವು ಬೇಡಿಕೆಗಳನ್ನು ಸರ್ಕಾರದ ಮುಂದೆ ಇಡಲಾಯಿತು. ಇವು ಇಡೀ ರಾಜ್ಯದ ಈಡಿಗರ ಬೇಡಿಕೆಗಳು ಎಂದು ತೀರ್ಮಾನಿಸಲಾಯಿತು (ವಿವರಗಳಿಗೆ ನೋಡಿ:೨೪-೧೨-೧೯೯೫ರ ಮಹಾಸಮ್ಮೇಳನದ ನಿರ್ಣಯಗಳು, ಆರ್ಯಈಡಿಗರ ಸಂಘ, ಬೆಂಗಳೂರು).

ಉದಾ: ಒಂದೆರಡು ಬೇಡಿಕೆಗಳನ್ನು ನೋಡೋಣ.

೧. ಮದ್ಯ ನಿಷೇಧಕ್ಕೆ ವಿರೋಧ, ಬದಲಾಗಿ ಮದ್ಯ ಅಸ್ಥಿತ್ವದಲ್ಲಿರುವಂತೆ ಒತ್ತಾಯ (ಸಾರಾಯಿ ನಿಷೇಧಕ್ಕೆಸರ್ಕಾರದ ಕ್ರಮಕ್ಕೆ ತೀವ್ರ ವಿರೋಧ).

೨. ಈಡಿಗರ ೨೪ ಉಪ-ಪಂಗಡಗಳನ್ನು - ಈಡಿಗವೆಂಬ ಒಂದೇ ಹೆಸರಲ್ಲಿ ಕರೆದು, ಮೀಸಲಾತಿಯನ್ನು ಹೆಚ್ಚಿಸುವಂತೆ ಒತ್ತಾಯ.

೩. ಈಡಿಗರ ಶೈಕ್ಷಣಿಕ ಅಭಿವೃದ್ಧಿಗೆ, ವಿದ್ಯಾರ್ಥಿನಿಲಯಗಳ ಸೌಲಭ್ಯಕ್ಕೆ ಸರ್ಕಾರದ ಸಹಾಯಕೋರಿ ಮನವಿ.

ಸ್ವಾತಂತ್ರ್ಯ ಬಂತೆಂದು ಹೇಳುತ್ತಿರುವ ಹೊತ್ತಿನಿಂದ ಇಂದಿನವರೆವಿಗೂ ಸರ್ಕಾರವು ಇಡೀ ಹಿಂದುಳಿದ ವರ್ಗ ಮತ್ತು ಜಾತಿಯವರ ಅಭಿವೃದ್ಧಿಗೆ ಯೋಜನೆಗಳನ್ನು ಹಾಕಿಕೊಂಡೇ ಬಂದಿದೆ. ೧೯೪೪ರಲ್ಲಿ ಅಸ್ತಿತ್ವಕ್ಕೆ ಬಂದ ಆರ್ಯ ಈಡಿಗರ ಸಂಘ ಕೂಡ, ಸರ್ಕಾರದ ರೀತಿಯಲ್ಲಿ ಮೇಲಿನ ರೀತಿಯ ಬೇಡಿಕೆಗಳನ್ನು ಇಡುತ್ತಲೇ ಬಂದಿದೆ. ಮತ್ತು ಯೋಜನೆಗಳನ್ನು ಹಾಕಿಕೊಳ್ಳುತ್ತಲೇ ಇದೆ. ಸರ್ಕಾರದ ಮತ್ತು ಈಡಿಗ ಸಂಘದ ಕಾರ್ಯಕ್ರಮಗಳು ಅನುಷ್ಠಾನಕ್ಕೆ ಬರುತ್ತಿವೆ ಎಂದು ಹೇಳಲಾಗುತ್ತಿದ್ದರೂ ಪರಿಣಾಮಗಳನ್ನು ನೋಡುವುದಾದರೆ ದಿನದಿಂದ ದಿನಕ್ಕೆ ನಿರುದ್ಯೋಗಿಗಳ, ದುಡಿವಜನರ, ಎಲ್ಲಾ ಜಾತಿಯ ಜನ ಸಂಖ್ಯೆಯೂ ತೀವ್ರವಾಗಿ ಹೆಚ್ಚುತ್ತಲೇ ಬಂದಿದೆ. ಕೇವಲ ಕೆಲವೇ ಜನರು ಮಾತ್ರ ಇಂಥ ಕಾರ್ಯಕ್ರಮಗಳ ಪ್ರಯೋಜನ ಪಡೆದು, ಒಂದು ವರ್ಗವಾಗಿ ರೂಪಗೊಳ್ಳುತ್ತಾರೆ. ಅಂಥವರು ಅಧಿಕಾರಿ ವರ್ಗದವರಾಗಿರಬಹುದು, ಬಂಡವಾಳಶಾಹಿಗಳಾಗಿರಬಹುದು. ವ್ಯವಸ್ಥೆ ಅವರನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ರಕ್ಷಿಸುತ್ತದೆ. ಮತ್ತು ತನ್ನ ವಿರೋಧಿ ವರ್ಗಕ್ಕೆ (ದುಡಿವವರ್ಗ ) ಪ್ರತಿವರ್ಗವಾಗಿ ಅವರನ್ನು ರೂಪಿಸುತ್ತದೆ. ಆದರೆ ಬಹುಸಂಖ್ಯಾತ ದುಡಿವ ಮತ್ತು ನಿರ್ಗತಿಕ ಜನರು ದಿನದಿನಕ್ಕೆ ಹಸಿವಿನ ತೀವ್ರ ಅನುಭವವನ್ನು ಅದರ ಬಹುಮುಖಿ ಹಿಂಸೆಗಳನ್ನು ಅನುಭವಿಸುತ್ತಲೇ ಇದ್ದಾರೆ.

೧೯೫ರ ಈಡಿಗ ಸಮ್ಮೇಳನದ ಮೇಲಿನ ಬೇಡಿಕೆಗಳ ಉದ್ದೇಶವನ್ನು ಮತ್ತೊಂದು ದೃಷ್ಟಿಯಲ್ಲಿ ಅರ್ಥ ಮಾಡಿಕೊಳ್ಳಬಹುದು. ಮೇಲಿನ ಬೇಡಿಕೆಗಳಲ್ಲಿ ಒಂದೇ ವರ್ಗದ ೨ ಬಗೆಯ ಜನರ ಹಿತಾಸಕ್ತಿಗಳಿವೆ.

೧. ರಾಜಕಾರಣಿಗಳು ೨. ಭಾರಿ ಮದ್ಯ ವ್ಯಾಪಾರಿಗಳು, ಇವರ ಹಿತಗಳು ಈ ಬೇಡಿಕೆಯೊಳಗೆ ಹುದುಗಿಕೊಂಡಿವೆ. ಈ ಎರಡು ಬಗೆಯ ಜನವರ್ಗ ಹಿತಾಸಕ್ತಿಗಳೂ ಪರಸ್ಪರ ಅವಿಬಾಜ್ಯ ಸಂಬಂಧವನ್ನು ಪಡೆದುಕೊಂಡಿವೆ.

(೧)೨೪ ಉಪ-ಪಂಗಡಗಳಾದ ಕಳ್ಳು ತೆಗೆಯುವವರನ್ನು ಈಡಿಗರು ಎಂಬ ಒಂದೇ ಹೆಸರಿನಿಂದ ಗುರ್ತಿಸುವುದು. ಆ ಮೂಲಕ ಈಡಿಗ ಸಮುದಾಯದ ಸಂಖ್ಯಾಬಲವನ್ನು ಹೆಚ್ಚಿಸಿಕೊಳ್ಳುವುದು. ಇದು ಒಂದು ಶಕ್ತಿಯ ಹೆಚ್ಚಳವೂ ಹೌದು. ಇದು ಶಕ್ತಿಯಾಗಿ ಬೆಳೆದರೆ, (ಅ) ದುಡಿವ ವರ್ಗದ ಪರವಾದ ಶಕ್ತಿಯಾಗುವುದು ಒಂದು ಸಾಧ್ಯತೆ ಇದೆ. (ಜಾತಿ ಹೆಸರಿನಲ್ಲಿ ಹೀಗೆ ಶಕ್ತಿಯಾಗಿ ಬೆಳೆದರೆ ಅಪಾಯಗಳು ಕೂಡ ಇವೆ. ಈ ಚರ್ಚೆಯೇ ಬೇರೆಯಾಗುತ್ತದೆ)(ಆ) ಈ ಶಕ್ತಿಯ ಸೂತ್ರ ಈಡಿಗ ರಾಜಕಾರಣಿಗಳು ಮತ್ತು ಮದ್ಯವ್ಯಾಪಾರಿ ಈಡಿಗರ ಕೈಸೇರಿದರೆ. ಈ ಶಕ್ತಿಯ ಫಲಿತಗಳು ಇವರಿಗೆ ಮಾತ್ರ ಲಭ್ಯ. ದುಡಿವವರಿಗೆ ದುರ್ಲಾಭ ಮತ್ತು ಅಪಾಯ ಕೂಡ.

ಎರಡೂ ಲಕ್ಷಕ್ಕೂ ಹೆಚ್ಚು ಈಡಿಗರನ್ನು ಈ ಸಮ್ಮೇಳನಕ್ಕೆ ಸೇರಿಸಿ ಸರ್ಕಾರದ ಗಮನ ಸೆಳೆಯಲಾಯಿತು. ಇದು ಸರ್ಕಾರಕ್ಕೆ ಒಂದು ರೀತಿಯ ಭಯವನ್ನುಂಟುಮಾಡಿತು. ರಾಜಕೀಯವಾಗಿ ಈ ಜನ ಪ್ರಬಲವಾಗುವ ಭಯ,ಮತ್ತು ಮದ್ಯ ನಿಷೇಧಿಸಿದರೆ ಈ ಜನರ ವಿರೋಧಕಟ್ಟಿಕೊಳ್ಳುವ ಭಯ. ಈ ಕಾರಣಕ್ಕೆ ಸರ್ಕಾರ ಮದ್ಯ ನಿಷೇಧವನ್ನು ಮುಂದೂಡುವ ಆಲೋಚನೆ ಮಾಡಿತು. ಸಾರಾಯಿ ನಿಷೇಧಿಸಿದರೆ ಲಿಕ್ಕರ್ ಷಾಪ್ ಗಳಿಗೆ ವ್ಯಾಪಕವಾಗಿ ಪರವನಾಗಿ ನೀಡಿ/ ಕೆರಿಗೆಯು ಈ ಸ್ಥಾನವನ್ನು ತುಂಬಿಕೊಳ್ಳುವ ಈ ತಂತ್ರದಿಂದ ಸರ್ಕಾರಕ್ಕೆ ತೆರಿಗೆಯೂ ಲಭ್ಯ. ಈಡಿಗ ಬಂಡವಾಳಿಗರ ಸ್ನೇಹವೂ ಲಭ್ಯ (ಈಡಿಗರನ್ನು ನಿಯಂತ್ರಿಸುತ್ತಿರುವವರು ಈ ಬಂಡವಾಳಿಗರೇ ಎನ್ನುವುದು ಸರ್ಕಾರಕ್ಕೆ ಮನವರಿಕೆಯಾಗಿದೆ). ಹೀಗೆ ಒಂದು ವರ್ಗದ ಹಿತಾಸಕ್ತಿಗಳು ಸಫಲವಾಗುವ, ಬದಲಾಗಿ ಈಡಿಗರ ಸಂಘಟನೆಯ ಉದ್ದೇಶವನ್ನು ದಿಕ್ಕು ತಪ್ಪಿಸುವ, ತಂತ್ರ ಸರ್ಕಾರಕ್ಕೂ ಸೇರಿದಂತೆ ಈಡಿಗ ಮೇಲ್ವರ್ಗಕ್ಕಿದೆ. ಈಡಿಗರು ಪ್ರಬಲಶಕ್ತಿಯಾಗುವುದರಿಂದ ಈಡಿಗ ರಾಜಕಾರಣಿಗಳ ಹಿತಾಸಕ್ತಿಗಳು ಸಫಲವಾಗುತ್ತವೆ. ಚುನಾವನೆಗೆ ಮತದ ಬ್ಯಾಂಕನ್ನು ಸಿದ್ಧಪಡಿಸುವ ಹುನ್ನಾರವೂ ಇದಾಗಿದೆ. ಈ ರಾಜಕಾರಣಿಗಳಿಗೆ ಬೆನ್ನೆಲುಬಾಗಿ ಮದ್ಯವ್ಯಾಪಾರಿಗಳಿರುತ್ತಾರೆ. ಅವರ ಹಿತಗಳನ್ನು ರಾಜಕಾರಣಿಗಳು ರಕ್ಷಿಸುತ್ತಾರೆ.

ಇನ್ನು ಶಿಕ್ಷಣದ ಬಗ್ಗೆ ಒಂದೇ ಮಾತಿನಲ್ಲಿ ಹೇಳುವುದಾದರೆ, ಅದಕ್ಕೆ ಸ್ವತಂತ್ರ್ಯವಾದ ಅಸ್ತಿತ್ವ ಇಲ್ಲ. ಶಿಕ್ಷಣದ ಮೂಲಕ ಇಂದಿನ ಪ್ರಬಲವರ್ಗದವರು ತಮ್ಮ ಹಿತಕ್ಕೆ ಹೊಂದಿಕೊಳ್ಳುವ ನಿಸ್ಸಾಹಯಕ ವರ್ಗವನ್ನು ರೂಪಿಸುತ್ತಿದ್ದಾರೆ. ಇಂದಿನ ಸಮೂಹ ಮಾದ್ಯಮಗಳೂ ಸೇರಿದಂತೆ ಈ ಕೆಲಸವನ್ನು ರಚನಾತ್ಮಕವಾಗಿ ಮಾಡುತ್ತಿವೆ. ಈಡಿಗ ಸಮ್ಮೇಳನವು ಶಿಕ್ಷಣಕ್ಕೆ ಒತ್ತುಕೊಡುವಂತೆ ಸರ್ಕಾರವನ್ನು ಒತ್ತಾಯಿಸುತ್ತಿರುವುದು ಕೂಡ ಒಂದು ತಂತ್ರ ಮಾತ್ರ.

ಹೊಸಹಾತು ಶಾಹಿ ವ್ಯವಸ್ಥೆ ರೂಪಿಸಿಕೊಟ್ಟ ಇಂದಿನ ಔಪಚಾರಿಕ ಶಿಕ್ಷಣದ ಮಾದರಿಯೇ ಇಂದು ಪ್ರಧಾನವಾದ ಚರ್ಚೆಗೆ ಒಳಗಾಗಿದೆ. ಇದರ ವಿರೋಧಿ ನೆಲೆಗಳಿಂದ ಗಮನಿಸಿದರೆ ಇಂದಿನ ಭಾರತದ ಶಿಕ್ಷಣದ ಹುಳುಕುಗಳು ಅಥವಾ ಉದ್ದೇಶಗಳು ಸ್ಪಷ್ಟವಾಗುತ್ತವೆ. ೧೯೪೪ರಿಂದ ಇದುವರೆಗೆ ಆರ್ಯ ಈಡಿಗರ ಸಂಘ ಎಂಬ ಒಂದು ವರ್ಗದ ಸಂಸ್ಥೆಯು ಬಡ ಈಡಿಗರನ್ನು ಜಾತಿಯ ಹೆಸರಿನಲ್ಲಿ ಭಾವನಾತ್ಮಕವಾಗಿ ಆಕರ್ಷಿಸುತ್ತಾ, ತಮ್ಮ ಹಿತಗಳನ್ನು ಸಂರಕ್ಷಿಸಿ ಕೊಳ್ಳುತ್ತಾ ಬಂದಿದೆ. ಇದರಿಂದ ಬಹುಸಂಖ್ಯಾತ ಈಡಿಗರ ಜೀವನ ವಿಧಾನದಲ್ಲಿ ಯಾವುದೇ ಮೂಲಭೂತ ಬದಲಾವಣೆಗಳಾಗಿಲ್ಲ. ಈ ಸಂಸ್ಥೆ ಈಡಿಗರ ಅಂದರೆ ಇವರ ಉಪ ಪಂಗಡಗಳ ಸಾಂಸ್ಕೃತಿಕ ನೆಲೆಗಳಲ್ಲಿ ಕೆಲವು ಬದಲಾವಣೆಗಲನ್ನು ತಂದಿದೆ. ಇಂಥ ಬದಲಾವಣೆಗಳ ಋಣಾತ್ಮಕ ಪರಿಣಾಮಗಳು ಈ ಉಪಪಂಗಡಳ ಸಂಸ್ಕೃತಿಯ ಜೀವಂತಿಕೆಯನ್ನು ಮಣ್ಣುಪಾಲು ಮಾಡುವ ಸಾಧ್ಯತೆಯಿದೆ. ಮುಂದಿನ ಅಧ್ಯಾಯದಲ್ಲಿ ಇದರ ಗುಣಾತ್ಮಕ ಮತ್ತು ಋಣಾತ್ಮಕ ಪರಿಣಾಮಗಳನ್ನು ಗುರುತಿಸಲು ಪ್ರಯತ್ನಿಸಲಾಗುತ್ತದೆ.

ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ವಿಭಿನ್ನ ಸ್ಥಿತಿಗತಿಗಳಲ್ಲಿ ನೆಲೆಸಿರುವ ಈಡಿಗರ ಜೀವನ ವಿಧಾನ ಮತ್ತು ಸಾಮಾಜಿಕ ಸಾಂಸ್ಕೃತಿಕ ಬದುಕು ವಿಶಿಷ್ಟವಾಗಿ ರೂಪಗೊಳ್ಳುತ್ತಿವೆ. ಭಾರತದ ಸಾಮಾಜಿಕ ಸಂರಚನೆಯ ಚರಿತ್ರೆ ಇವರ ಸ್ಥಿತಿಗತಿಗಳಿಗೆ ಮೂಲಭೂತ ಕಾರಣವಾಗಿದೆ. ವಸಾಹತುಶಾಹಿ ವ್ಯವಸ್ಥೆಯ ನಂತರ ಇವರ ಸ್ಥಿತಿಗತಿಗಳಲ್ಲಿ ಇದುವರೆಗೆ ಚರ್ಚೆಗೊಳಪಟ್ಟ ರೀತಿಯ ಬದಲಾವಣೆಗಳು ಕಾಣಿಸಿಕೊಂಡಿವೆ. ಈ ಪ್ರಕ್ರಿಯೆ ಮುಂದೆ ಎಂಥಹ ತಿರುವನ್ನು ಪಡೆಯುತ್ತದೆ, ಹೇಗೆ ಇವರ ಜೀವನಮಟ್ಟವನ್ನು ರೂಪಿಸುತ್ತದೆ ಎನ್ನುವುದನ್ನು ನೋಡಬೇಕಿದೆ. ಅದನ್ನು ಚರಿತ್ರೆ ನಿರ್ಧರಿಸುತ್ತದೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸಂಘಟನೆಯಾಗಿ ತಮ್ಮ ಅಸ್ತಿತ್ವಕ್ಕೆ ಹೋರಾಡುವ ಸಂದರ್ಭ ಮುಂದೆ ಒದಗಬಹುದಾದರೆ ಇದರ ಪರಿಣಾಮವಾಗಿ ಜಾತಿ ಪ್ರಜ್ಞೆಯ ಬೇರುಗಳು ನಿಧಾನ ಗತಿಯಲ್ಲಿ ಸಾಯುತ್ತವೆ. ಮುಂದೊಂದು ದಿನ ಜಾತಿ ಹೆಸರಿನಲ್ಲಿ ಗುರುತಿಸಿಕೊಳ್ಳುವ ಸಾಧ್ಯತೆಗಳನ್ನೇ ಕಾಣದಿರಬಹುದು. ಅಂದರೆ ಇವರು ಆಗ ಈಡಿಗರಾಗಿರದೆ ದುಡಿವ ಒಂದು ವರ್ಗವಾಗಿ ಮಾತ್ರ ಅಸ್ತಿತ್ವದಲ್ಲಿರಲು ಸಾಧ್ಯ.

## ಅಧ್ಯಾಯ-೪

## ಸಾಂಸ್ಕೃತಿಕ ನೆಲೆಗಳು : (ಆರ್ಥಿಕ ಬದಲಾವಣೆಯ ಹಿನ್ನೆಲೆಯಲ್ಲಿ)

ಎರಡನೆ ಅಧ್ಯಾಯದ ಲ್ಲಿ ಈಡಿಗರ ಸಾಂಸ್ಕೃತಿಕ ಆಚರಣೆಗಳನ್ನು ಪರಿಚಯ ಮಾಡಲಾಗಿದೆ. ರಾಜ್ಯಾದ್ಯಂತ ವಿಭಿನ್ನರೀತಿಯಲ್ಲಿ ವಿಭಿನ್ನ ಭೌಗೋಳಿ ಪರಿಸರದಲ್ಲಿ ಬದುಕುತ್ತಿರುವ ಈಡಿಗರು ಆಯಾ ಪರಿಸರಕ್ಕನುಗುಣವಾದ ಸಾಂಸ್ಕೃತಿಕ ಬದುಕಿಗೆ ಹೊಂದಿಕೊಂಡಿದ್ದಾರೆ. ಅಂದಮೇಲೆ ರಾಜ್ಯದಲ್ಲಿ ಒಂದೇ ಬಗೆಯ ಸಾಂಸ್ಕೃತಿಕ ಬದುಕು ಇವರದ್ದಲ್ಲ ವೆನ್ನುವುದು ಸ್ಪಷ್ಟ. ಹೀಗಿರುವ ವಿಭಿನ್ನ ಬಗೆಯ ಸಾಂಸ್ಕೃತಿಕ ಆಚರಣೆಯ ಸ್ಥೂಲ ಪರಿಚಯಕೂಡ ಹಿಂದಿನ ಅಧ್ಯಯನ ಲ್ಲಿ ನಡೆದಿದೆ.

ಈ ಅಧ್ಯಯನದಲ್ಲಿ ಹೀಗೆ ವಿಭಿನ್ನವಾದ ಸಾಂಸ್ಕೃತಿಕ ಬದುಕಿನಲ್ಲಿ ಉಂಟಾಗಿರುವ ಪಲ್ಲಟವನ್ನು, ಬದಲಾವಣೆಯನ್ನು ಕುರಿತು ಅಧ್ಯಯನ ಮಾಡಬೇಕಿದೆ. ಅಂದರೆ ಈ ಬಗೆಯ ಬದಲಾವಣೆಗೆ ಸಂಭದಿಸಿರುವ ವಿವಿಧ ಬಗೆಯ ಒತ್ತಡಗಳು ಮತ್ತು ಕಾರಣಗಳನ್ನು ಕುರಿತ ಚರ್ಚೆ ಈ ಅಧ್ಯಾಯನದ ಪ್ರಮುಖ ಉದ್ದೇಶ.

ಸಂಸ್ಕೃತಿ ಎಂದರೇನು? ಎನ್ನುವುದರ ಬಗೆಗೆ ವಿಭಿನ್ನ ವಾಖ್ಯಾನಗಳಿವೆ. ಇಂದಿಗೂ ಈಬಗ್ಗೆ ಹೊಸ ಹೊಸ ವ್ಯಾಖ್ಯಾನಗಳು ಉದ್ಭವವಾಗುತ್ತಲೇ ಇವೆ. ಇದನ್ನು ಸ್ಪಷ್ಟ ಪಡಿಸಿಕೊಳ್ಳುವ ದಿಸೆಯಲ್ಲಿ ಇಂದಿಗೂ ವ್ಯಾಪಕವಾದ ಚರ್ಚೆಗಳುನಡೆಯುತ್ತಲೇ ಇವೆ. ಈ ಚರ್ಚೆಯ ನೆಲೆಗಳು ಏನೇ ಇರಲಿ. " ಯಾವುದೇ ಬಗೆಯ ಆಲೋಚನಾ ವಿಧಾನಗಳನ್ನು ಆಯಾ ಸಂದರ್ಭದ ಉತ್ಪಾದನಾ ವಿಧಾನಗಳು ಮತ್ತು ಉತ್ಪಾದನ ಶಕ್ತಿ, ಸಾಧನಗಳ ಹಂಚಿಕೆಯ ಸ್ವರೂಪ ಸಂಬಂಧಗಳು ನಿರ್ಧರಿಸುತ್ತವೆ ಮತ್ತು ಪ್ರಚೋದಿಸುತ್ತದೆ. 'ಸಂಸ್ಕೃತಿ'ಯಬಗೆಗಿನ ವ್ಯಾಖ್ಯಾನ ಮತ್ತು ಚರ್ಚೆಯ ನೆಲೆಗಳು ಕೂಡ ಇದನ್ನಾಧರಿಸಿಯೇ ನಿರ್ಧಾರವಾಗುತ್ತಿರುತ್ತವೆ". ಸಂಸ್ಕೃತಿಯನ್ನು ಕುರಿತ ಚರ್ಚೆಗಳುವ್ಯಾಖ್ಯಾನಗಳು ಏನೇ ಇರಲಿ, ಸಂಸ್ಕೃತಿಯನ್ನು ಕೇವಲ ಸಂಸ್ಕೃತಿಕೇಂದ್ರವಾಗಿ ನೋಡಬೇಕೇ ಅಥವಾ ಬದಲಾಗುತ್ತಿರುವ ಆರ್ಥಿಕ ಚಟುವಟಿಕೆಗಳ ಪರಿಣಾಮದ ಹಿನ್ನೆಲೆಯಲ್ಲಿ ನೋಡಬೇಕೆ? ಎನ್ನುವುದು ಆಸಕ್ತಿ ಪ್ರಶ್ನೆ. ಸಂಸ್ಕೃತಿಯನ್ನು ಕುರಿತ ಒಂದು ಸಾಮಾನ್ಯ ವ್ಯಾಖ್ಯಾನ ಹೀಗಿದೆ, "ಯಾವುದೇ ಸಮುದಾಯದ, ಸಮಾಜದ, ಬದುಕನ್ನು ಕುರಿತ ಒಟ್ಟು ಮೊತ್ತ" ಈ ವ್ಯಾಖ್ಯಾನವನ್ನು ಆಧರಿಸಿಯೇ ಹೇಳುವುದಾದರೆ, ಒಟ್ಟು ಸಮೂಹದ ಬದುಕೇ ಈ ವ್ಯಾಪ್ತಿಯಲ್ಲಿ ಒಳಗೊಳ್ಳುತ್ತದೆ. ಅಂದರೆ ಇಲ್ಲಿ ಆ ಸಮುದಾಯದ ಆರ್ಥಿಕ

ಚಟುವಟಿಕೆಗಳು ಹೊರತಾಗುವುದಿಲ್ಲ. ಆದರೆ ಇಲ್ಲಿ ಗಮನಿಸ ಬೇಕಾದ್ದೇನೆಂದರೆ ಈ ಆರ್ಥಿಕ ಚಟುವಟಿಕೆಗಳೇ ಅಲ್ಲಿನ ಸಾಂಸ್ಕೃತಿಕ ಬದುಕಿನ ಬುನಾದಿಯೂ ಆಗಿರುತ್ತದೆ ಎನ್ನುವುದು. ಈ ಆರ್ಥಿಕ ಚಟುಚಟಿಕೆಗಳ ಸ್ವರೂಪದಲ್ಲಿ ಬದಲಾವಣೆಯಾದಂತೆ, ಅಲ್ಲಿನ ಸಾಂಸ್ಕೃತಿಕ ಬದುಕು ಕೂಡ ನಿರಂತರವಾಗಿ ತನ್ನ ಚಹರೆಯನ್ನು ಬದಲಾಯಿಸಿಕೊಳ್ಳುತ್ತಿರುತ್ತದೆ. ಇದಕ್ಕೆ ಜಗತ್ತಿನ ಯಾವುದೇ ಸಾಂಸ್ಕೃತಿಕ ಬದುಕನ್ನು ನಿದರ್ಶನ ಕೊಡಬಹುದು.

ಈಮಾತನ್ನು ಒಪ್ಪಿಕೊಂಡು ಚರ್ಚೆ ಮಾಡುವುದಾದರೆ ರಾಜ್ಯದ ವಿಭಿನ್ನ ಈಡಿಗ ಸಮುದಾಯವು ನಿರಂತರವಾಗಿ ತನ್ನ ಆರ್ಥಿಕ ಬದುಕಿನಲ್ಲಿ ಬದಲಾವಣೆ ಪಡೆದು ಕೊಳ್ಳುತ್ತಾ ಬಂದಿದೆ. ಈ ಮಾತನ್ನು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಿ ಸ್ಪಷ್ಟ ಪಡಿಸಿಕೊಳ್ಳಲಾಗಿದೆ. ಈ ತರಹದ ಬದಲಾವಣೆಯನ್ನು ಗುರ್ತಿಸುವ ಸಂದರ್ಭದಲ್ಲಿ ಕೂಡ ಹಿಂದಿನ ಅಧ್ಯಾಯಗಳಲ್ಲಿ ಮಾಡಿಕೊಂಡಂತೆ ಕೆಲವು ವಿಂಗಡಣೆ ಮಾಡಿಕೊಳ್ಳಬೇಕಾಗುತ್ತದೆ. ಹಿಂದಿನ ಅಧ್ಯಾಯದಲ್ಲಿ ಮಲೆನಾಡು ಭಾಗದ ಈಡಿಗರು ಮತ್ತು ಬಯಲು ಸೀಮೆಯ ಈಡಿಗರು ಎಂಬ ವಿಭಾಗ ಮಾಡಿಕೊಳ್ಳಲಾಗಿತ್ತು. ಇದೇ ಮಾದರಿಯನ್ನು ಈ ಸಂದರ್ಭದಲ್ಲೂ ಅನುಸರಿಸಲಾಗುವುದು.

## ೪.೧ ಬಯಲು ಸೀಮೆ ಈಡಿಗರು

ಬಯಲು ಸೀಮೆಯ ಈಡಿಗರ ಆರ್ಥಿಕ ಬದುಕು ಅನೇಕ ಕಾರಣಗಳಿಗಾಗಿ ಅನೇಕ ಒತ್ತಡಗಳಿಗೆ ಸಿಕ್ಕಿ ನಿರಂತರವಾಗಿ ತನ್ನದೇ ಆದ ದಾರಣರೀತಿಯಲ್ಲಿ ಬದಲಾಗುತ್ತಾ ಬಂದಿದೆ. ಇದಕ್ಕೆ ಕಾರಣಗಳೇನು ಎನ್ನುವುದನ್ನು ಹಾಗು ಒತ್ತಡದ ಸ್ವರೂಪಗಳನ್ನು ಈಗಾಗಲೇ ಸ್ಪಷ್ಟ ಪಡಿಸಿಕೊಳ್ಳಲಾಗಿದೆ. ಇವರ ಆರ್ಥಿಕ ಬದುಕಿನಲ್ಲಾದ ವಿಪರೀತ ಏರಿಳಿತದೊಡನೆ ಅದೇ ಗತಿಯಲ್ಲಿ ತನ್ನ ಸಾಂಸ್ಕೃತಿಕ ಬದುಕು ಕೂಡ ಬದಲಾಗುತ್ತಾ ಬಂದಿದೆ. ಮತ್ತು ಛಿದ್ರವಾದ ಸ್ಥಿತಿಯನ್ನು ಪಡೆದುಕೊಂಡಿದೆ.

ಹಿಂದೆ ಈಚಲು,ತಾಳೆ ವನಗಳಲ್ಲಿ ಸಾಮೂಹಿಕವಾಗಿ ಕಳ್ಳು ಇಳಿಸಿ ಮನೆಯಲ್ಲೇ ಮಾರುವ ವ್ಯವಸ್ಥೆಯಿತ್ತು. ಆದಿಗೌಡಪುರಾಣದಲ್ಲಿ ಬರುವ ಕಾಟಮರಾಜ, ದಾನಾರಗೌಡ, ಮೊದಲಾದವರ ಜೀವನ ವಿಧಾನಗಳ ಕುರಿತ ವಿವರಗಳುಮೇಲಿನ ಮಾತನ್ನು ಸ್ಪಷ್ಟ ಪಡಿಸುತ್ತವೆ. ಅದಕ್ಕಿಂತಲೂ ಹಿಂದೆ ದೇವತೆಗಳನ್ನು ಈ ಸಿದ್ಧಿರಸದಿಂದ ತೃಪ್ತಿ ಪಡಿಸಿ, ಅವರಿಂದ ಐಶ್ವರ್ಯವನ್ನು ಪಡೆಯಲಾಗುತ್ತಿತು. ಎನ್ನುವ ವಿವರಗಳು ಕೌಂಡಿಣ್ಯ ಮುನಿಯ ಚರಿತ್ರೆಗೆ ಸಂಬಂಧಿಸಿದಂತೆ ಸಿಗುತ್ತವೆ. ಅಂದರೆ ದೇವತೆಗಳಿಂದ ಕಳ್ಳು ಮಾನ್ಯತೆ ಪಡೆದಿತ್ತು.

ಕಳ್ಳು ತೆಗೆಯುವ ಜನರಿಗೆ ಉನ್ನತ ಸ್ಥಾನಮಾನಗಳೂ ಇದ್ದವು. ಆರ್ಥಿಕವಾಗಿಯೂ ಅವರು ಸಮೃದ್ಧಿಯಿಂದ ಬದುಕುತ್ತಿದ್ದರು ಎನ್ನುವುದು ಸ್ಪಷ್ಟವಾಗುತ್ತದೆ. ವೇದಗಳಲ್ಲಿಯೇ ಸಿಗುವ ಮಾಹಿತಿಯಂತೆ ಈ ವೃತ್ತಿ ಈಡಿಗರಿಗೆ ಮಾತ್ರ ಸೀಮಿತವಾಗಿತ್ತು. ಪರಮೇಶ್ವರನು ಕೌಂಡಿಣ್ಯ ಮುನಿಗೆ "ಗೌಡ ಪಂಚಾಕ್ಷರಿ ಮಂತ್ರವನ್ನು ಉಪದೇಶಿಸಿ ಇದರ ಸಹಾಯದಿಂದ ಸಿದ್ಧಿರಸ ತೆಗೆಯ ಬೇಕು ಎನ್ನುವ ಗುಟ್ಟನ್ನು ಹೇಳುತ್ತಾನೆ. ಅಂದರೆ ಇದು ಸಾರ್ವತ್ರಿಕವಾಗಿ ಎಲ್ಲರಿಗೂ ತಿಳಿದ ಕಸುಬಲ್ಲ. ಒಂದು ವೇಳೆ ಹಾಗಿದ್ದರೂ ಅದಕ್ಕೆ ದೇವತೆಗಳ ಪರವಾನಿಗೆ ಬೇಕು. ಇದೇ ಮಾತನ್ನು ಸಮರ್ಥಿಸುವ ಜನಪದ ಕಥೆಯೊಂದಿದೆ. ಆ ಪ್ರಕಾರ 'ಬಲಿಜನಾದ ಬಳೆಮಾರುವವನು ಒಮ್ಮೆ ಕಾಡಿನಲ್ಲಿ ಪಾರ್ವತಿ ದಾಹ ಶಮನಕ್ಕಾಗಿ, ಪಾರ್ವತಿಯಿಂದಲೇ ಕಳ್ಳು ತೆಗೆಯುವವಿಧಾನವನ್ನು ತಿಳಿದು ಕೊಳ್ಳುತ್ತಾನೆ. ಅದೇ ಸಂದರ್ಭಗಳಲ್ಲಿ ಕಳ್ಳು ತೆಗೆಯುವವರಿಗೆ ಪಾನಕ್ಕೆ ನಿಷೇಧವನ್ನೂ ಹಾಕಲಾಗಿದೆ. ಜನಪದಕಥೆ ಮತ್ತು ಪುರಾಣಕಥೆಗಳೆರಡರಲ್ಲೂ ಈ ವಿವರಗಳು ಸಿಗುತ್ತವೆ. ಈ ಎರಡೂ ಸಂದರ್ಭಗಳಲ್ಲಿ ಪರಮೇಶ್ವರ ಪಾರ್ವತಿಯರೇ ಈಡಿಗರಿಗೆ ಈ ವಿದ್ಯೆಯನ್ನು ಕಲಿಸಿದರು ಮತ್ತು ಈ ಹಕ್ಕನ್ನು ಪ್ರತಿಪಾದಿಸಿದರು ಎನ್ನುವ ವಿವರಗಳು ತಿಳಿಯುತ್ತವೆ. ಈ ಪ್ರಕಾರ ಹೇಳುವುದಾದರೆ, ಅಂದು ಈಡಿಗರಿಗೆ ಪಾರ್ವತಿ ಪರಮೇಶ್ವರರೇ ಪೂಜ್ಯ ದೈವಗಳಾಗಿದ್ದರು. ಈ ದೈವಗಳೇ ಇಂದಿಗೂ ಪೂಜೆಯ ಆಚರಣೆಯ್ಲಲಿ ಪ್ರಧಾನ ಸ್ಥಾನವನ್ನು ಪಡೆದುಕೊಂಡಿವೆ. ಪಾರ್ವತಿ ಪರಶಿವರು ಭಾರತದ ಸಾಂಸ್ಕೃತಿಕ ಬದುಕಿನಲ್ಲೂ ಪ್ರಧಾನ ಪೂಜ್ಯ ದೈವಗಳಾಗಿ ಉಳಿದಿರುವುದರಿಂದಲೂ ಇವರು ಇಂದಿಗೂ ಈಡಿಗರಿಗೆ ಪ್ರಧಾನರಾಗಿಯೇ ಕಾಣುತ್ತಿದ್ದಾರೆ. ಆರಾಧಿಸಲ್ಪಡುತ್ತಿದ್ದಾರೆ.

ಅತ್ರಿ ಮಹರ್ಷಿಯಿಂದ ಜನ್ಮ ಪಡೆದವನು ಕೌಂಡಿಣ್ಯ. ಇವನು ಮೂಲ ಪುರುಷನಾದವನು. ಇವನು ಸೃಷ್ಟಿಸಿದ ನಾಲ್ಕು ಗೋತ್ರಗಳಲ್ಲಿ ನಾಲ್ವರು ರಾಜರಾಗಿ ಪ್ರಸಿದ್ಧಿ ಪಡೆದರು. ಈನಾಲ್ಕು ಗೋತ್ರಗಳ ವಂಶೋದ್ಧಾರಕರನ್ನು ಹಿಂದೆ ಹೆಸರಿಸಲಾಗಿದೆ. ಕಾರುಣ್ಯ ಗೋತ್ರದ ಗೋಪಾಲ ಗೌಡನ ಮಗ, ಕಾಟಮೇಗೌಡನು ಗೌಡ ದೇಶದ ರಾಜನಾಗಿದ್ದನು ಎನ್ನುವುದು ಗೌಡ ಪುರಾಣದಿಂದ ತಿಳಿದು ಬರುತ್ತದೆ. (ವಿವರಕ್ಕೆ ನೋಡಿ. 'ಈಡಿಗ ಜನಾಂಗದ ಚರಿತ್ರೆ, ಇ. ಹನುಮಂತಯ್ಯ ೧೯೭೯. ಪುಟ ೩-೧೩ ) ಗೌಡದೇಶವು ಆರ್ಯಾವರ್ತಗಳಲ್ಲಿ ಒಂದು. ಕಾಟಮೇಶ್ವರನು ಪ್ರಸಿದ್ಧನಾದ ರಾಜನಾಗಿದ್ದನು. ಅನೇಕ ರಾಜರನ್ನು ಸೋಲಿಸಿ, ಶೂರನೆಂಬ ಹೆಸರನ್ನು ಪಡೆದಿದ್ದನು. ಹೀಗೆ ಪ್ರಸಿದ್ಧನಾದ ರಾಜ, ಕ್ರಮೇಣ ಈ ಜನಾಂಗದವರಿಗೆ ದೈವವಾದನು. ಅಂದರೆ ಸಾಂಸ್ಕೃತಿಕ ವ್ಯಕ್ತಿಯಾದನು. ಯಾವನೇ ವ್ಯಕ್ತಿಯೊಬ್ಬನು ಒಂದು ಸಮುದಾಯಕ್ಕೆ ಸಾಂಸ್ಕೃತಿಕ ವ್ಯಕ್ತಿಯಾಗಲು ಆಯಾಕಾಲದ

ಸಾಮಾಜಿಕ ಒತ್ತಡಗಳಿರುತ್ತವೆ. ಈಡಿಗರು ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕಾದ ಅನಿವಾರ್ಯತೆ ಮುಂದಿನ ಚರಿತ್ರೆಯಲ್ಲಿ ಒದಗಿದೆ. ಈಅನಿವಾರ್ಯದ ಫಲವಾಗಿ ಕಾಟಮರಾಜನು ಮುಂದೆ ಕಾಟಮೇಶ್ವರನಾದನು.ಕಾಟಮೇಶ್ವರನು ರಾಜನಾಗಿ ಪ್ರಸಿದ್ಧಿಪಡೆದಿದ್ದು, ಮುಂದಿನ ಹಂತದಲ್ಲಿ ಈಡಿಗರ ಅಸ್ತಿತ್ವಕ್ಕೆ ಧಕ್ಕೆ ಬಂದಾಗ ಈತನನ್ನು ಸಾಂಸ್ಕೃತಿಕವಾಗಿ ಎತ್ತಿಹಿಡಿದಿರುವುದು ಅನಿವಾರ್ಯವಾಗಿದೆ.ಇದು ಅವರ ಆರ್ಥಿಕ,ಸಾಮಾಜಿಕ ಅಸ್ತಿತ್ವವನ್ನು ಆಚರಣೆಗಳಲ್ಲಿ ಗಟ್ಟಿಗೊಳಿಸಿಕೊಳ್ಳುವ ಉದ್ದೇಶವಾಗಿ ಬಂದದ್ದು. ಹೀಗೆ ಇವನನ್ನು ಪ್ರಭಲವಾಗಿ ಎತ್ತಿ ಹಿಡಿದಿರುವ ಹಿನ್ನೆಲೆಯಲ್ಲಿ ಇವರ ಅಸ್ತಿತ್ವಕ್ಕೆ ಪ್ರಭಲ ವರ್ಗದ ಧರ್ಮ ಮತ್ತು ಆಚರಣೆಗಳಿಂದ ಧಕ್ಕೆ ಒದಗಿರಬಹುದು. ಧಕ್ಕೆಯ ಸ್ವರೂಪವನ್ನು ಊಹಿಸಬಹುದು. ಮಧ್ಯಕಾಲೀನ ಭಾರತದ ಸಂದರ್ಭದಲ್ಲಿ ಭಕ್ತಿ ಚಳುವಳಿಯ ಧಾರ್ಮಿಕ ಪ್ರಭಾವ ಮತ್ತು ಒತ್ತಡಗಳು ಶೈವ ಭಕ್ತರಾದ ಈಡಿಗರ ಸಾಂಸ್ಕೃತಿಕ ಅಸ್ತಿತ್ವಕ್ಕೆ ಧಕ್ಕೆ ತಂದಿರಬಹುದು. ವೈಷ್ಣವ ಧರ್ಮವನ್ನು ಗಟ್ಟಿಗೊಳಿಸುವ ಪ್ರಯತ್ನವಾಗಿ ಭಾರತಾದ್ಯಂತ ಹುಟ್ಟಿಕೊಂಡ ಈ ಚಳುವಳಿಯು ಇತರೆ ಧರ್ಮದ ಅನುಯಾಯಿಗಳ ಸಾಂಸ್ಕೃತಿಕ, ಆ ಮೂಲಕ ಸಾಮಾಜಿಕ ಆರ್ಥಿಕ ಅಸ್ತಿತ್ವಕ್ಕೆ ಧಕ್ಕೆ ತರಬಹುದಾದ ಸಾಧ್ಯತೆ ಉಂಟಾಗಿದೆ. ಯಾವುದೇ ಒಂದು ಚಳುವಳಿಯು ಆಯಾಕಾಲದ ಉತ್ಪಾದನೆ ಒಡೆತನ ಮತ್ತು ಹಂಚಿಕೆಯ ಸ್ವರೂಪದ ಕಾಳಜಿಯನ್ನು ಪ್ರಧಾನವಾಗಿ ಒಳಗೊಂಡಿರುತ್ತದೆ. ಜೈನ ಶೈವ ಮತ್ತು ಮುಸ್ಲಿಂ ಧರ್ಮಗಳು ಮಧ್ಯ ಕಾಲೀನ ಯುಗದಲ್ಲಿ ಪ್ರಬಲವಾಗಿದದ್ದು ವೈಷ್ಣವ ಧರ್ಮದ ಅಸ್ತಿತ್ವಕ್ಕೆ ಧಕ್ಕೆ ತಂದಿರುವುದು ಚಾರಿತ್ರಿಕ ವಿಷಯ.

ಹೀಗೆ ಧಕ್ಕೆ ತಂದುಕೊಂಡ ವೈದಿಕ ಧರ್ಮದ ವಾಕ್ತಾರರು ತಮ್ಮ ಅಸ್ತಿತ್ವವನ್ನು ಪ್ರತಿಷ್ಠಾಪಿಸುವ, ಗಟ್ಟಿಗೊಳಿಸುವ ಕೆಲಸವನ್ನು ಮಾಡಬೇಕಿತ್ತು. ಸುಧಾರಣೆಯ ಮೂಲಕ ವೈಷ್ಣವ ಧರ್ಮ ಈ ಸಂದರ್ಭದಲ್ಲಿ ಚಳುವಳಿಯ ರೂಪವನ್ನು ಪಡೆದುಕೊಂಡಿತು. ಈ ಚಳುವಳಿಯು ಪ್ರಭಾವಶಾಲಿಯಾದಂತೆ ಇತರೆ ಧರ್ಮಗಳ ಅನುಯಾಯಿಗಳಿಗೆ ಧಕ್ಕೆ ಯಾದದ್ದು ಸಹಜ. ಇಂಥ ಒತ್ತಡದ ಪ್ರಭಾವ ಈಶ್ವರ ಭಕ್ತರಾದ ಈಡಿಗರಿಗೆ ಸಹಜವಾಗಿಯೇ ಅಂದಿನ ಸಂದರ್ಭದಲ್ಲಿ ಧಕ್ಕೆ ಉಂಟಾಗಲು ಸಾಧ್ಯ. ಇದರಿಂದ ವಿಚಲಿತರಾದ ಈಡಿಗರು ತಮ್ಮ ಅಸ್ತಿತ್ವವನ್ನು ಸಂರಕ್ಷಿಸಿಕೊಳ್ಳಬೇಕಾದದ್ದು ಅನಿವಾರ್ಯವಾಯಿತು. ಇಲ್ಲದಿದ್ದಲ್ಲಿ ಇವರ ಒಟ್ಟಾರೆ ಅಸ್ತಿತ್ವಕ್ಕೆ ಧಕ್ಕೆ. ಮೊದಲೆ ಹೇಳಿರುವಂತೆ, ಯಾವುದೇ ಧರ್ಮ, ಅಥವಾ ಸಂಸ್ಕೃತಿ ಸರಳ ಅರ್ಥಗಳನ್ನು ಪಡೆದುಕೊಂಡಿರುವುದಿಲ್ಲ. ಅದಕ್ಕೆ ಸಂಕೇತಾರ್ಥವಿರುತ್ತದೆ. ಅಂದರೆ ಉತ್ಪಾದನಾ ಒಡೆತನಗಳ ಸಂಬಂಧವನ್ನು ಪಡೆದುಕೊಂಡಿರುತ್ತವೆ. ಈ ಸಂದರ್ಭದಲ್ಲಿ ಧಾರ್ಮಿಕ ಸಂಸ್ಥೆಗಳು ಏಕಕಾಲದಲ್ಲಿ, ಭೂ ಒಡೆತನದ ಹಕ್ಕು,

ವರ್ತಕರಿಗೆ ಸಾಲಕೊಡುವ ಬ್ಯಾಂಕು, ಮತ್ತು ಸಾಮಾಜಿಕ ನ್ಯಾಯಾಲಯಗಳಾಗಿ ಕೆಲಸಮಾಡುತ್ತಾ ಇದ್ದವು. ಹಿಂದೆ ಭೂ ಒಡೆತನ ಸಾಮಾಜಿಕವಾಗಿ ನಿರ್ಧರಿಸಲ್ಪಟ್ಟ ಸ್ಥಾನಮಾನಗಳನ್ನವಲಂಬಿಸಿರುತ್ತಿದ್ದವು. ಈ ಸ್ಥಾನಮಾನಗಳು ಧಾರ್ಮಿಕ ಹಿನ್ನೆಲೆಯನ್ನು ಆಧರಿಸಿರುತ್ತಿದ್ದವು.

ಈ ಅಂಶಗಳಿಂದ ಸ್ಪಷ್ಟ ಪಡಿಸಿಕೊಳ್ಳಬೇಕಾದ್ದದ್ದು ಇಷ್ಟೇ. ಅಂದಿನ ಧಾರ್ಮಿಕ ಚಳುವಳಿ. ಅಥವಾ ಧರ್ಮದ ಅಸ್ತಿತ್ವ. ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಅಸ್ತಿತ್ವವನ್ನೂ ನಿರ್ಧರಿಸುವ ಶಕ್ತಿಯನ್ನು ಪಡೆದುಕೊಂಡಿತ್ತು. ಮಧ್ಯಕಾಲದ ವೈಷ್ಣವ ಧರ್ಮದ ಚಳುವಳಿ ಈ ಅರ್ಥವನ್ನು ಪಡೆದುಕೊಂಡಿದ್ದಾಗಿತ್ತು. ಇದು ಇತರೆ ಧರ್ಮದವರಿಗೆ ಸಹಜವಾಗಿ ಧಕ್ಕೆ ಒದಗಿಸಿತ್ತು. ಈಶ್ವರ ಭಕ್ತರಾದ ಈಡಿಗರಿಗೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆ ಉಂಟಾಯಿತು. ಅವರು ತಮ್ಮ ಸಾಂಸ್ಕೃತಿಕ ದೈವ ಮತ್ತು ಆಚರಣೆಗಳನ್ನು ಹೆಚ್ಚು ಗಟ್ಟಿಗೊಳಿಸಿಕೊಳ್ಳುವುದರ ಮೂಲಕ ತಮ್ಮ ಅಸ್ತಿತ್ವರಕ್ಷಣೆಗೆ ಪ್ರಯತ್ನಿಸಿದ್ದಾರೆ. ಈ ಸಂದರ್ಭದಲ್ಲಿ ರಚನೆಯಾದ ಕಾಟಮೇಶ್ವರನ ಕಥೆ ಕೂಡ ಈ ಚಾರಿತ್ರಿಕ ಹಿನ್ನೆಲೆಯನ್ನು ಪಡೆದುಕೊಂಡಿದೆ. ಅವನ ವೀರತ್ವ, ಭಕ್ತಿ, ಶ್ರದ್ಧೆಗಳು ತಮ್ಮ ಆಚರಣೆಯನ್ನು ಗಟ್ಟಿಗೊಳಿಸಿಕೊಳ್ಳುವ ಉದ್ದೇಶವನ್ನು ಪಡೆದು ಕೊಂಡಿವೆ.

ಇಂದಿಗೂ ಆಂಧ್ರದ ಬಹುಸಂಖ್ಯಾತ ಈಡಿಗರಿಗೆ ಕಾಟಮೇಶ್ವರನೇ ಕುಲದೈವವಾಗಿದ್ದಾನೆ. ಆಂಧ್ರದಿಂದ ವಲಸೆಬಂದ ಬಯಲು ಸೀಮೆಯ ಈಡಿಗರಿಗೆ ಇಂದಿಗೂ ಕಾಟಮರಾಜನೇ ಕುಲದೇವರಾಗಿದ್ದಾನೆ. ಕಾಟಮೇಶ್ವರನ ಶೂರತ್ವವನ್ನು ರೌದ್ರತೆಯನ್ನು ಪ್ರದರ್ಶಿಸುವ ಚಿತ್ರಪಟಗಳನ್ನು ಈ ಪ್ರದೇಶದ ಈಡಿಗರು ಇಂದಿಗೂ ಪೂಜಿಸುತ್ತಿದ್ದಾರೆ. ಚಿತ್ರದುರ್ಗ ಬಳ್ಳಾರಿ, ತುಮಕೂರು ಮೈಸೂರು, ರಾಯಚೂರು ಜಿಲ್ಲೆಗಳಲ್ಲಿ ಬಹುಸಂಖ್ಯಾತ ಈಡಿಗರು ಕಾಟಮೇಶ್ವರನನ್ನು ಕುಲದೈವವನ್ನಾಗಿ ಪೂಜಿಸುತ್ತಿದ್ದಾರೆ.

ಆದರೆ ಚಿಕ್ಕಮಗಳೂರಿನ ಮಲೆನಾಡು ಭಾಗದ ಈಡಿಗರಿಗೆ ಕಾಟಮೇಶ್ವರ ತಮ್ಮ ದೇವರೆಂಬುದೇ ಮರೆತುಹೋಗಿದೆ. ಏಕೆಂದರೆ ಇಲ್ಲಿ ಇವರು ತೀರಾ ಅಲ್ಪ ಸಂಖ್ಯಾತರು. ಈ ಪ್ರದೇಶದ ಬಹುತೇಕ ಈಡಿಗರು ವೈಷ್ಣವಧರ್ಮದವರಾಗಿದ್ದಾರೆ. ಈ ಭಾಗದ ಮತ್ತು ಬಯಲು ಸೀಮೆಯ ಕೆಲವು ಈಡಿಗರು ಕಾಟಮೇಶ್ವರನನ್ನು ಬಿಟ್ಟು ಆಂಧ್ರ ಮೂಲದ ದೈವಗಳಾದ ಓಬಳ ನರಸಿಂಹ, ಉರಕುಂದಿ ಈರಣ್ಣ ಮೊದಲಾದ ವೈಷ್ಣವ ದೇವರುಗಳನ್ನು ಒತ್ತಡಕ್ಕೆ ಮಣಿದುಕುಲ ದೈವಗಳನ್ನಾಗಿ ಮಾಡಿಕೊಂಡಿದ್ದಾರೆ. ಬಹುಶಃ ಮಧ್ಯಕಾಲೀನ ಭಕ್ತಿಚಳುವಳಿಯ ಪ್ರಭಾವದಿಂದ ಇವರೆಲ್ಲ ವಲಸೆಬರುವ ಮೊದಲೇ (ಒತ್ತಡಕ್ಕೆ ಮಣಿದು) ಆಂಧ್ರದಲ್ಲೆ

ವೈಷ್ಣವ ಧರ್ಮಾವಲಂಬಿಗಳಿರಬೇಕು. ತದನಂತರ ವಲಸೆಬಂದ ಮೇಲೆ ಇವುಗಳೇ ಕುಲದೈವಗಳಾಗಿವೆ. ತಮ್ಮ ಕುಲದೈವ ಕಾಟಮೇಶ್ವರನ ಬಗ್ಗೆ ಇವರಿಗೆ ಏನೂ ತಿಳಿದೇ ಇಲ್ಲ. ಈ ಓಬಳ ನರಸಿಂಹಸ್ವಾಮಿ ಮತ್ತು ಉರುಕುಂದಿ ಈರಣ್ಣನ ದೇವಾಲಯಗಳು ಆಂಧ್ರದಲ್ಲಿಯೇ ತಮ್ಮ ಮೂಲ ಸ್ಥಾನವನ್ನು ಪಡೆದುಕೊಂಡಿವೆ. ಶ್ರೀಶೈಲಂ. ಬಳಿ ಓಬಳನರಸಿಂಹ ಸ್ವಾಮಿಯ ದೇವಾಲಯವಿದೆ. ಆಂಧ್ರದ ಆಧೋನಿ ಜಿಲ್ಲೆಯಿಂದ ೩೦ಕಿ.ಮೀ. ದೂರದಲ್ಲಿ ಉರಕುಂದಿ ಈರಣ್ಣಸ್ವಾಮಿಯ ದೇವಸ್ಥಾನವಿದೆ. ರಾಜಚೂರು ಜಿಲ್ಲೆಯ ಬಹುತೇಕ ಈಡಿಗರು, ಬಳ್ಳಾರಿಯ ಈಡಿಗರು, ಗುಂಡೂರು ಈಡಿಗರು ಇಂದು ಉರಕುಂದಿ ಈರಣ್ಣನ ಭಕ್ತರಾಗಿದ್ದಾರೆ. ಇವರಿಗೆ ತಮ್ಮ ಕುಲದೈವ "ಕಾಟಮೇಶ್ವರನೆಂದು ತಿಳಿದರೂ, ಉರುಕುಂದಿ ಈರಣ್ಣನೇ ನಮ್ಮ ಮನೆದೇವರು" ಎನ್ನುತ್ತಾರೆ.

ಸ್ವಾತಂತ್ರ್ಯ ಚಳುವಳಿಯ ನಂತರದಲ್ಲಿ ಪಾನನಿರೋಧವು ಜಾರಿಗೆ ಬಂದಂತೆ ಮತ್ತು ಅದಕ್ಕೂ ಹಿಂದೆ ಬ್ರಿಟೀಶ್ ಸರ್ಕಾರ ಕಳ್ಳು ತೆಗೆಯುವ ಮರಗಳಿಗೆ ತೆರಿಗೆ ಹಾಕಲು ಪ್ರಾರಂಭಿಸಿದಂದಿನಿಂದ, ಈಡಿಗರ ಆರ್ಥಿಕ ಬದುಕು ಅಭದ್ರವಾಯಿತು. ಹಿಂದಿನ ಅಧ್ಯಾಯದ್ಲಲಿ ಅದು ಸ್ಪಷ್ಟವಾಗಿದೆ. ಹೀಗೆ ಅಭದ್ರವಾದ ಆರ್ಥಿಕ ಹಿನ್ನೆಲೆಯಲ್ಲಿ ಈಡಿಗರ ಕೌಟುಂಬಿಕ ಸಂಬಂಧಗಳೂ ಛಿದ್ರವಾದವು. ಒಂದೆಡೆಸೇರಿ ಕಳ್ಳು ಇಳಿಸಿಕೊಂಡು ಮಾರಿ ಬದುಕುತ್ತಿದ್ದವರು ಸಮೂಹ ಜೀವನದಿಂದ ಚದುರಿದರು. ತಮ್ಮ ವೃತ್ತಿಯನ್ನರಸುತ್ತ ಬೇರೆಬೇರೆ ವಲಯಗಳಿಗೆ ವಲಸೆಹೋದರು. ನಿರ್ಗತಿಕರಾದರು. ಈ ಸ್ಥಿತಿಯು ಅವರನ್ನು ಆರ್ಥಿಕವಾಗಿ ದುರ್ಬಲ ಸ್ಥಿತಿಗೆ ತಂದಿತು. ಪಾನನಿರೋಧ ಮತ್ತು ಕೈಗಾರಿಕೆಗಳ ಬೆಳೆವಣಿಗೆ, ಇವರನ್ನು ವಿಭಿನ್ನ ವಲಯಗಳಿಗೆ ಚದುರುವಂತೆ ಮಾಡಿರುವುದರಲ್ಲಿ ಎರೆಡು ಮಾತಿಲ್ಲ. ಹೀಗೆ ಚದುರಿದ ಜನರಲ್ಲಿ ಕೆಲವರು ಹಳ್ಳಿಗಳಲ್ಲಿ ಮತ್ತೆ ಕೆಲವರು ನಗರಗಳಲ್ಲಿ ಹಂಚಿಹೋದರು. ಅಲ್ಲಲ್ಲಿ ನೆಲೆಸಿ ತಮ್ಮ ಬದುಕಿಗೆ ಅಂಟಿಕೊಳ್ಳಲಾರಂಭಿಸಿದರು. ಹೀಗೆ ನೆಲೆಸಿದ್ದ ಕಡೆಯಲೆಲ್ಲಾ ಇವರು ಅಲ್ಪಸಂಖ್ಯಾತರಾದರೆಂಬುದು ಗಮನಾರ್ಹ. ಹೀಗೆ ಅಲ್ಪಸಂಖ್ಯಾತರಾದವರು ಎಲ್ಲಾ ವಿಧದಲ್ಲಿ ಸ್ಥಳೀಯ ಪ್ರಬಲ ಜಾತಿಯ, ಆರ್ಥಿಕ, ಸಾಂಸ್ಕೃತಿಕ, ಬದುಕನ್ನು ಅನುಸರಿಸಬೇಕಾದ ಅನಿವಾರ್ಯತೆ ಸಹಜವಾಯಿತು. ಮೊದಲೇ ಛಿದ್ರವಾಗಿ ದಿಕ್ಕು ತಪ್ಪಿದ ಇವರು ಆರ್ಥಿಕವಾಗಿ, ಮಾನಸಿಕವಾಗಿ ದುರ್ಬಲರಾದುದು ಸಹಜ. ಇಂಥಸ್ಥಿತಿಯು ಇವರನ್ನು ಸ್ಥಳೀಯ ಪ್ರಬಲವರ್ಗದವರ ಪ್ರಧಾನ ಸಂಸ್ಕೃತಿಯನ್ನು ಅನುಕರಿಸುವಂತೆ ಒತ್ತಾಯಿಸಿತು. ಇದರ ಫಲವಾಗಿ ಇಂದು ಬಯಲು ಸೀಮೆಯಾದ್ಯಂತ ಬಹುತೇಕ ಈಡಿಗರು, ಸ್ಥಳೀಯ ಪ್ರಧಾನ ಸಂಸ್ಕೃತಿಯ ಅನುಕರಣೆಯನ್ನು ತಮ್ಮ ಬದುಕಿನಲ್ಲಿ ತಮ್ಮದೆಂಬಷ್ಟರ ಮಟ್ಟಿಗೆ ಸ್ವೀಕರಿಸಿದ್ದಾರೆ. ಇಷ್ಟಾದರು ಸ್ಥಳೀಯ ಪ್ರಬಲರ ಜಾತಿಗಳ ಭೌತಿಕ ಮಾನಸಿಕ ಹಿಂಸೆಗಳಿಗೆ ಇವರು ಒಳಗಾಗಬೇಕಾಗಿದೆ. ಏಕೆಂದರೆ ಜಾತಿಯ

ಪ್ರಭಾವ ಇಂದೂ ಇಂಡಿಯಾದಲ್ಲಿ ಕೆಲಸಮಾಡುತ್ತಿದೆ. ಅದನ್ನು ಪ್ರಚೋದಿಸುತ್ತಿರುವ ಒಂದುವರ್ಗ ತೆರೆಮರೆಯಲ್ಲಿದ್ದು ಮೇಲ್ನೋಟಕ್ಕೆ ಕಣ್ಣನ್ನೂ ಒರೆಸುತ್ತಿದೆ. ಈಡಿಗ ಜಾತಿಯ ರಾಜಕೀಯ ನಾಯಕರು ಕೂಡ ಓಟುಗಳಿಕೆಗಾಗಿ ಪ್ರಬಲ ಜಾತಿಯವರನ್ನು ಅಂದರೆ ಬಹುಸಂಖ್ಯಾತ ಜಾತಿಯವರನ್ನು ಓಲೈಸುತ್ತಾರೆ. ಇಂದು ಈ ಪ್ರದೇಶದ ಈಡಿಗರಿಗೆ, ಅಂದರೆ ಮದ್ಯಮ,ಕೆಳಮದ್ಯಮ ಮತ್ತು ದುಡಿವ ವರ್ಗದ ಜನರಿಗೆ ಆರ್ಥಿಕ, ಸಾಮಾಜಿಕ ಸಾಂಸ್ಕೃತಿಕವಾಗಿ ತಮ್ಮದೇ ಅನನ್ಯತೆಯನ್ನು ಹೊಂದಿರುವ ಯಾವ ಲಕ್ಷಣಗಳೂ ಇಲ್ಲ. ಪ್ರಬಲ ಕೋಮಿನ ಕೆಳಗೆ ಆರ್ಥಿಕ ಸಾಮಾಜಿಕ ಸಾಂಸ್ಕೃತಿಕ ದಬ್ಬಾಳಿಕೆಗೆ ನಿರಂತರವಾಗಿ ಸಿಕ್ಕಿ ನಲುಗುತ್ತಿದ್ದಾರೆ. ಇನ್ನು ಇದೇ ಜಾತೀಯ ಭಾರಿ ಜಮೀನ್ದಾರಿಗಳು ಬಂಡವಾಳ ಶಾಹಿಂಗಳು ಈಬಗೆಯ ಹಿಂಸೆಯಿಂದ ದೂರವಾಗಿದ್ದಾರೆ. ಇವರು ಬಹುತೇಕ ನಗರ ವಾಸಿಗಳಾಗಿರುವುದರಿಂದ ನಗರದ ಬಂಡವಾಳಶಾಹಿ ಉತ್ಪಾಧನ ಮಾದರಿಯು ಜತ್ಯಾಧಾರಿತ ಸಮಾಜಿಕ ಸಾಂಸ್ಕೃತಿಕ ಮೌಲ್ಯಗಳ ತಳಹದಿಯನ್ನು ಸಡಲಿಸಿದೆ.

ವಸಾಹತುಶಾಹಿ ಆಡಳಿತ ವ್ಯವಸ್ಥೆಯು ಭಾರತದ ಜಾತಿ ವ್ಯವಸ್ಥೆಯ ಬುನಾದಿಯನ್ನು ಮೊದಲಬಾರಿಗೆ ಸಡಿಲಿಸಿತು. ಉದಾ: ೧) ೧೭೭೩ರಲ್ಲಿ ವಾರನ್ ಹೇಸ್ಟಿಂಗ್ ಸೈನಿಕ ಹುದ್ದೆಗೆ ಜಾತಿರಹಿತ ಅವಕಾಶನೀಡಿದ್ದು. ೨) ೧೭೭೫ರಲ್ಲಿ ಬ್ರಿಟೀಷ್ ಮಾದರಿಯ ಪೋಲೀಸ್ ವ್ಯವಸ್ಥೆಯನ್ನು ಕಾನ್ ೯ವಾಲೀಸ್ ಜಾರಿಗೆ ತಂದಿದ್ದು. ೩). ೧೮೩೩ರಲ್ಲಿ ದೇಶಾದ್ಯಂತ ಜಾರಿಗೊಳಿಸಿದ ರೂಲ್ . ಆಫ್ .ಲಾ (ಇದು ಜಾತಿರಹಿತ ವಿಚಾರಣೆಗೆ ಅವಕಾಶ ನೀಡಿತು). ೪). ಜಮೀನ್ದಾರಿ ಪದ್ಧತಿ ರದ್ದುಮಾಡಿ ರೈತಾಪಿ ಪದ್ಧಿತಿ ಜಾರಿಗೆ ತಂದಿದ್ದು. ೫). ಕೈಗಾರಿಕಗಳ ಸ್ಥಾಪನೆ. ೬). ಇಂಗ್ಲೀಷ್ ಶಿಕ್ಷಣವನ್ನು ಜಾರಿಗೆ ತಂದದ್ದು, ಮಹಿಳೆಯರಿಗೆ ಶಿಕ್ಷಣಕ್ಕೆ ಪ್ರಚೋದಿಸಿದ್ದು. ಇತ್ಯಾದಿ ಈ ಎಲ್ಲಾ ನೀತಿಗಳು ಜಾತಿರಹಿತವಾದ ನೀತಿಯನ್ನು ಅನುಸರಿಸಿದವುಗಳಾದ್ದರಿಂದ ಚಾರಿತ್ರಿಕವಾಗಿ ಭಾರತದಲ್ಲಿ ರೂಪಗೊಂಡಿದ್ದ ಜಾತ್ಯಾಧಾರಿತ ವೃತ್ತಿಗಳಿಂದ ಕೆಳ ಜಾತಿಯವರು ಹೊರಗೆಬರಲು ಸಾಧ್ಯವಾಯಿತು. ಬೇರೆಬೇರೆ ವಲಯಗಳಲ್ಲಿ ಇವರು ಪ್ರವೇಶ ಪಡೆಯಲು ಸಾಧ್ಯವಾಯಿತು. ಈ ಪ್ರಧಾನ ಅಂಶಗಳು ಬಂಡವಾಳ ಶಾಹಿ ಉತ್ಪಾಧನಾ ಮಾದರಿಗೆ ಅಸ್ತಿತಿ ಭಾರ ಹಾಕಲು ಕಾರಣವಾಯಿತೆನ್ನುವುದನ್ನು ಮರೆಯಲಾಗದು. ಬಂಡವಾಳ ಶಾಹಿ ವ್ಯವಸ್ಥೆಯ ಪರಿಣಾಮಗಳು ಆರ್ಥಿಕವಾಗಿ, ಊಳಿಗಮಾನ್ಯಶಾಹಿವ್ಯವಸ್ಥೆಯಗಿಂತ ಭಿನ್ನವಾಗಿರಬಹುದು ಮತ್ತು ಕ್ರೂರವಾಗಿರಬಹುದು. ಆದರೆ ಜಾತ್ಯಾಧಾರಿತ ಭದ್ರ ವ್ಯವಸ್ಥೆಯನ್ನು ಆ ಮೂಲಕ ಅವುಗಳ ಮೌಲ್ಯವನ್ನು ಸಡಿಲಗೊಳಿಸಿತು ಎನ್ನುವುದರಲ್ಲಿ ಎರಡು ಮಾತಿಲ್ಲ.

ಹಳ್ಳಿಗಳಲ್ಲಿ ಇಂದು ಊಳಿಗಮಾನ್ಯ ಶಾಹಿವ್ಯವಸ್ಥೆ ಅಸ್ತಿತ್ವದಲ್ಲಿದೆ. ನಗರಗಳಲ್ಲಿ ಸ್ವಲ್ಪಮಟ್ಟಿಗೆ ಇರಬಹುದು. ಕ್ರಮೇಣ ಪೂರ್ಣ ಸಡಿಲವಾಗಬಹುದು. ಹಳ್ಳಿಗಳಲ್ಲಿ ಅಲ್ಪಸಂಖ್ಯಾತರಾಗಿರುವ ಈಡಿಗರು, ಸಾಂಸ್ಕೃತಿಕವಾಗಿ ಆಕ್ರಮಣಕ್ಕೆ ಒಳಗಾಗಿದ್ದಾರೆ. ಮೊದಲೇ ಹೇಳಿರುವಂತೆ, ಸ್ಥಳೀಯ ಬಹುಸಂಖ್ಯಾತ ಮತ್ತು ಪ್ರಬಲರ ಸಂಸ್ಕೃತಿಯನ್ನು ಅನುಕರಿಸುತ್ತಿದ್ದಾರೆ. ಮೊದಮೊದಲು ಇವರಿಗೆ ಅದು ಹಿಂಸೆಯಾಗಿ ಕಂಡಿರಬಹುದು. ಈ ಹಿಂಸೆಯೇ ಪ್ರತಿಭಟನೆಯ ಸ್ವರೂಪವಾಗಿ ವ್ಯಕ್ತಗೊಳ್ಳಬಹುದಿತ್ತು. ಆದರೆ ಇವರು ಅಲ್ಪಸಂಖ್ಯಾತರಾದ್ದರಿಂದ ಸ್ಥಳೀಯ ಅನುಕರಣೆ ಅನಿವಾರ್ಯವಾಗಿ ನಡೆದಿದೆ. ಪ್ರತಿಭಟನೆ ಒಳಗೆ ಕುದಿಯುತ್ತಲೂ ಇರಬಹುದು.

ಹಿಂದಿನ ಅಧ್ಯಾಯಗಳಲ್ಲಿ ಹೇಳಿರುವ ಸಾಂಸ್ಕೃತಿಕ ವಿವರಗಳಾದ, ಕುಟುಂಬ ಪದ್ಧತಿ, ಆಹಾರಪದ್ಧತಿ, ಜೀವನಾವರ್ತನದ ಆಚರಣೆಗಳಾದ ಹುಟ್ಟು ಸಾವು ಮದುವೆ, ಮುಟ್ಟು, ಸೀಮಂತ, ಇತ್ಯಾದಿಗಳು ಹಳ್ಳಿಗಳಲ್ಲಿ ಸ್ಥಳೀಯರ ಪ್ರಭಾವದಂತೆ ಅನುಕರಣೆಗೆ ಒಳಗಾಗಿವೆ. ಪ್ರಧಾನವಾಗಿ ಅನುಕರಣೆಗೆ ಒಳಗಾದರೂ ಇವರ ಒಳ ಆಚರಣೆಗಳಲ್ಲಿ ಇವರದ್ದೆ ಆದ ಕೆಲವು ಮಿಶ್ರವಾಗಿರುತ್ತವೆ. ಉದಾ: ಕಾಟಮದೇವರ ಪೂಜೆ, ಎಲ್ಲಮ್ಮನ ಪೂಜೆ,( ಎಲ್ಲಮ್ಮ ಸಾಂಸ್ಕೃತಿಕವಾಗಿ ಆರಾಧನಾ ದೇವತೆಯಾದ ಸಂದರ್ಭವನ್ನು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ) ಇತ್ಯಾದಿ ಮದುವೆಗಳಲ್ಲೂ ಈ ಪೂಜೆಗಳು ಚಪ್ಪರದ ಶಾಸ್ತ್ರಗಳು, ಬಾಜದ ಹಕ್ಕುಗಳು ಹಾಗೂ, ಓಕುಳಿ ಮೊದಲಾದವುಗಳು ಉಳಿದುಕೊಂಡಿವೆ. ಆದರೆ ಇವುಗಳು ಹಳ್ಳಿಯಲ್ಲಿ ಮಾತ್ರ. ಹಳ್ಳಿಯಲ್ಲಿರುವ ಇಂದಿನ ಶಿಕ್ಷಣ ಪಡೆದ ಜನವರ್ಗ ಇವುಗಳಿಂದ ಮುಕ್ತವಾಗಿ, ನೊಂದಣಿ ಮದುವೆಗಳ ವ್ಯವಸ್ಥೆಗೆ ಅಸ್ತಿಭಾರ ಹಾಕುತ್ತಿದ್ದಾರೆ. ಇನ್ನು ಮೆರವಣಿಗೆ, ಮೂಹೂರ್ತ ಇತ್ಯಾದಿಗಳು ಸ್ಥಳೀಯರಂತೆಯೇ ನಡೆಯುತ್ತಿವೆ. ವೈದಿಕ ಮಾದರಿಯ ಮದುವೆಗಳೇ ಇಂದು ಇವರಲ್ಲೂ ಹೆಚ್ಚಾಗಿ ಕಾಣುತ್ತಿವೆ. ಸ್ಥಳೀಯ ಪ್ರಧಾನ ದೇವರುಗಳ ಹೆಸರನ್ನೇ ತಮ್ಮ ಮಕ್ಕಳಿಗೂ ಇಡುತ್ತಾರೆ. ಮತ್ತು ಪೂಜಿಸುತ್ತಿದ್ದಾರೆ. ಉದಾ: ಗಂಗಾವತಿ ತಾಲ್ಲೂಕಿನ ಗುಂಡೂರಿನ ಎಲ್ಲ ಈಡಿಗರು ಅಲ್ಲಿಯ ದೈವವಾದ ಉರುಕುಂದಿ ಈರಣ್ಣನನ್ನೇ ಆರಾಧಿಸುತ್ತಿದ್ದಾರೆ. ಹೆಸರಿಡುವುದರಲ್ಲೂ ಈ ದೈವದ ಪ್ರಭಾವವಿದೆ. ಮೊದಲೇ ತಿಳಿಸಿದಂತೆ ಹಳ್ಳಿಗಳಲ್ಲಿ ಮಾತ್ರ ಇದು ಇದೆ.

ಕೌಟುಂಬಿಕ ಪದ್ಧತಿಯ ಸ್ವರೂಪದಲ್ಲಿ ಹೆಚ್ಚಿನ ಬದಲಾವಣೆಗಳಿದ್ದಂತಿಲ್ಲ.(ಹಳ್ಳಿಗಳಲ್ಲಿ ಮಾತ್ರ) ಆರ್ಥಿಕ ವಲಯದ ನಿಯಂತ್ರಣ ಗಂಡಿನ ಕೈಯಲ್ಲೇ ಇರುವುದರಿಂದ ಮೂಲತಃ ಪಿತೃಪ್ರಧಾನ ಕುಟುಂಬ ಪದ್ಧತಿಯೇ ಆಗಿದ್ದ ಇವರಲ್ಲಿ ಇಂದೂ ಅದೇ ಮುಂದುವರೆದಿವೆ. ಯಜಮಾನನ ತಾತ್ಕಾಲಿಕ ಗೈರುಹಾಜರಿಯಲ್ಲಿ. ಅಥವಾ ಶಾಶ್ವತ ಗೈರುಹಾಜರಿಯಲ್ಲಿ ಯಜಮಾನತಿಯು ವ್ಯವಸ್ಥೆಯನ್ನು ನಿಯಂತ್ರಿಸುತ್ತಾಳೆ. ಮನೆಯ ಗಂಡು

ಮಕ್ಕಳು ಯಜಮಾನನ ನಂತರದ ಸ್ಥಾನವನ್ನು ಮುಂದುವರೆಸುತ್ತಾರೆ.ನಗರಗಳಲ್ಲಿ ಇಡೀ ಸಾಂಸ್ಕೃತಿಕ ಆಚರಣೆಯ ಸಂಖ್ಯೆಗಳು ಮತ್ತು ಹಿಂದೆ ಅದಕ್ಕೆ ನಿಗದಿ ಪಡಿಸಲಾಗುತ್ತಿದ್ದ ಅವಧಿಗಳು ಇಂದು ಸಹಜವಾಗಿ ಕಡಿಮೆಯಾಗಿವೆ.ನಗರದ ಬದುಕು ಅಲ್ಲಿಯ ಉತ್ಪಾದನ ಮಾದರಿಯಂತೆ ಯಾಂತ್ರಿಕವಾಗಿದೆ. ಶೋಷಣೆವ್ಯಾಪಕವಾಗಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಅಸ್ತಿತ್ವದಲ್ಲಿದೆ. ದುಡಿವವರ್ಗ ಮತ್ತು ಬಡಮಧ್ಯಮ ವರ್ಗವು ತಮ್ಮ ಜೀವನದ ಅವಶ್ಯಕತೆಗಳಿಗಾಗಿ ನಿರಂತರವಾಗಿ ದುಡಿಯಬೇಕಾಗಿದೆ. ಇಲ್ಲಿ ಕಟ್ಟುನಿಟ್ಟಾದ ಸಮಯ ಪಾಲನೆಯು ಪ್ರಧಾನ ಲಕ್ಷಣವಾದ್ದರಿಂದ ಸಮಯಕ್ಕೆ ಅಂಟಿಕೊಂಡಿರಬೇಕಾಗಿದೆ. ಇಷ್ಟಾದರೂ ಜೀವನನಾವಶ್ಯಕತೆಗಳು ಎಲ್ಲವಿಧದಲ್ಲೂ ಸಂತೃಪ್ತವಾಗುವುದು ಕಷ್ಟ. ಇಂಥ ವ್ಯವಸ್ಥೆಯೊಳಗಡೆ, ಪೂಜೆ, ಆಚರಣೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತವೆ. ವಿಜ್ಞಾನ ಮತ್ತು ಆಧುನಿಕ ತಂತ್ರಜ್ಞಾನವು ಈ ಸಾಂಸ್ಕೃತಿಕ ಆಚರಣೆಗಳ ಮೇಲೆ ನಂಬಿಕೆ ಕಳೆದುಕೊಳ್ಳುವಂತೆ ಮಾಡಿರುವುದೂ ಮುಖ್ಯವಾದ ಅಂಶಗಳಲ್ಲಿ ಒಂದು. ಇಂದು ನಗರಗಳಲ್ಲಿ ಮದುವೆ ವ್ಯವಸ್ಥೆಯು ತುಂಬಾ ಸರಳವಾದ ಆಚರಣೆಯಾಗಿ ಮಾರ್ಪಟ್ಟಿದೆ. ವ್ಯಾಪಾರೀ ಮನೋಧರ್ಮವು ನಗರದ ಜನಗಳಲ್ಲಿ ಸಂಪೂರ್ಣ ಪ್ರಭಾವ ಬೀರಿದೆ. ಆಚರಣೆ, ಮತ್ತು ಮದುವೆಗಾಗಿ ಮಾಡುವ ಖರ್ಚುಗಳು ಅರ್ಥಹೀನವೆನ್ನುವ ಭಾವನೆ ಇವರಲ್ಲಿ ಮೂಡಿದೆ.ಇಂದಿನ ಸಮೂಹ ಮಾಧ್ಯಮಗಳ ಪಾತ್ರವೂ ಈ ನಿಟ್ಟಿನಲ್ಲಿ ಪ್ರಮುಖವಾದದ್ದಾಗಿದೆ.

ಸಾರ್ವತ್ರಿಕ ಕಲ್ಯಾಣ ಮಂಟಪಗಳಲ್ಲಿ ಮದುವೆ ಜರುಗುವುದರಿಂದ ಅದು ಒಂದು ದಿನದ ಕೆಲವೇ ಗಂಟೆಗಳ ಆಚರಣೆಯಾಗಿದೆ. ಊಳಿಗಮಾನ್ಯ ವ್ಯವಸ್ಥೆಯೊಳಗಡೆ ಇವರ ಮದುವೆ ೧೨ ದಿನಗಳ ಕಾಲ ನಡೆಯುತ್ತಿತ್ತು. ಇಂದು ೨ ಗಂಟೆಯ ಅವಧಿಯನ್ನು ಉಳಿಸಿಕೊಂಡಿದೆ. ಇದನ್ನೂ ಮೀರಿ ಮುಂದೆ, ಪಡೆದುಕೊಂಡಿರುವ ಅವಸ್ಥೆಯೆಂದರೆ, "ರಿಜಿಸ್ಟರ್ ಮ್ಯಾರೇಜ್ " ಪದ್ಧತಿ. ಇದು ಇಡೀ ಆಚರಣೆಗೆಗಳನ್ನು ಧಿಕ್ಕರಿಸಿದ ಒಂದು ವ್ಯವಸ್ಥೆಯಾಗಿದ್ದು ಮುಂದಿನ ವ್ಯವಸ್ಥೆಗೆ ಆಚರಣೆಗಳಿಂದ ವಿಮುಖವಾದ, ಮುಕ್ತವಾದ ವಾತಾವರಣ ನಿರ್ಮಾಣವಾಗಬಹುದಾದ ಸಾಧ್ಯಾತೆಗಳಿವೆ. ಬಂಡವಾಳ ಶಾಹಿವ್ಯವಸ್ಥೆಯು ವ್ಯಕ್ತಿಯನ್ನು ಸಮೂಹದಿಂದ ಬೇರ್ಪಡಿಸಿ ವೈಯಕ್ತಿಕತೆಯ ಕಡೆಗೆ ಮುಖಮಾಡುವ ಸ್ಥಿತಿಯನ್ನು ಸೃಷ್ಟಿಸಿದೆ. ಅದರ ಫಲವಾಗಿ ಇಂದು, "ಸಮೂಹ ಜೀವನದ ಮೌಲ್ಯಗಳನ್ನು ಎತ್ತಿ ಹಿಡಿಯುವ ಕೆಲವು ಆಚರಣೆಗಳು ವ್ಯಕ್ತಿ ಜೀವನದಿಂದ ಕಳಚಿಕೊಳ್ಳುತ್ತಿವೆ". ವ್ಯಕ್ತಿ, ವ್ಯಕ್ತಿ ನೆಲೆಯಲ್ಲೇ ತನ್ನ ಅಸ್ತಿತ್ವವನ್ನು ಸೃಷ್ಟಿಸಿಕೊಳ್ಳು 'ವಂತೆ ಈ ವ್ಯವಸ್ಥೆ ಒತ್ತಾಯಿಸುತ್ತದೆ. ಇಂಥ ಅನಿವಾರ್ಯತೆ ವ್ಯಕ್ತಿಗೆ ಒದಗಿದಾಗ ಆತ ಸಮೂಹ ಜೀವನ ಮೌಲ್ಯಗಳನ್ನು ಎತ್ತಿ

ಹಿಡಿಯ ಬೇಕೆನ್ನುವುದು ಸಹಜವಾದ ಕಾಳಜಿಯಂತಾಗದೆ ಅಸಹಜತೆಯನ್ನು ಸೂಚಿಸುತ್ತದೆ. ಇಂದು ಬಹುತೇಕ ಈಡಿಗ ಶ್ರೀಮಂತರು ತಮ್ಮ ಹೆಸರಿನಲ್ಲಿ , ದೇವಾಲಯಗಳನ್ನು ಕಟ್ಟಿಸುತ್ತಾರೆ. ತಾವೂ ಕೆಲವು ಆಚರಣೆಗಳಿಗೆ ಪ್ರಾಧಾನ್ಯತೆಕೊಟ್ಟಂತೆ ವರ್ತಿಸುತ್ತಾರೆ. ಇಂಥ ವ್ಯೂಹ ತಂತ್ರಗಳು ಬಹುಮುಖವಾದ ಉದ್ದೇಶವನ್ನು ಹೊಂದಿದ್ದು ಅವರ ಹಿತ ಸಂರಕ್ಷಿಸುವ ಕೆಲಸವನ್ನು ಮಾಡುತ್ತಿರುತ್ತವೆ ಅಂದರೆ ಈ ವರ್ಗದಲ್ಲಿ ಹಳೆಯಆಚರಣೆಗಳು ಬೇರೆ ಅರ್ಥಪಡೆದುಕೊಂಡಿವೆ.

## ೪.೨ ಮಲೆನಾಡು ಈಡಿಗರ ಸಾಂಸ್ಕೃತಿಕ ನೆಲೆಗಳು

ಮಲೆನಾಡು ಭಾಗದ ಈಡಿಗರು ಅಂದರೆ ದೀವರು ತೆಂಗಿನ ದೀವರು, ನಾಮಧಾರಿಗಳು ಬಿಲ್ಲವರು ಇತ್ಯಾದಿ, ಇವರು ತಮ್ಮ ಆರ್ಥಿಕ, ಸಾಮಾಜಿಕ ಜೀವನವನ್ನು ರೂಪಿಸಿಕೊಂಡ ಕಥೆ ರೋಚಕವಾದುದು. ಬಯಲು ಸೀಮೆಗಿಂತ ವಿಶಿಷ್ಟವಾದ ಭೌಗೋಳಿಕ ವಾತಾವರಣವಿರುವುದು ಇದಕ್ಕೆ ಮೂಲಭೂತ ಕಾರಣವೆಂದು ಭಾವಿಸಬಹುದು. ಕರ್ನಾಟಕದ ಬಯಲು ಸೀಮೆಗೆ ಹೋಲಿಸಿದರೆ ಮಲೆನಾಡು ಭಾಗ ಭಿನ್ನವಾದ ಭೌಗೋಳಿಕ ಪರಿಸರವಾಗುತ್ತದೆ. ದಟ್ಟವಾದ ಕಾಡು, ಸುಂದರವಾದ ಜಲಧಾರೆಗಳು ಎತ್ತರವಾದ ಪರ್ವತಶ್ರೇಣಿ. ಅಲ್ಲಲ್ಲಿ ಎತ್ತರವಾದ ಬೆಟ್ಟಗಳು, ಜೌಗುತಾಣಗಳು ಹೀಗೆ ಮೊದಲಾಗಿ ಹೇಳುತ್ತಾ ಹೋದರೆ ಪ್ರಾಕೃತಿಕವಾಗಿ ಸುಂದರವಾದ ಪ್ರದೇಶವೂ ಹೌದು. ಕೊಡಗು, ಚಿಕ್ಕಮಗಳೂರಿನ ಅರ್ಧಭಾಗ, ದಕ್ಷಿಣಕನ್ನಡ, ಉತ್ತರಕನ್ನಡ ಬೆಳಗಾಂ, ಶಿವಮೊಗ್ಗ ಜಿಲ್ಲೆಯ ಮೂರನೇ ಒಂದು ಭಾಗ, ದಟ್ಟವಾದ ಅರಣ್ಯಾವೃತ್ತ ಪ್ರದೇಶಗಳಾಗಿವೆ.

ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಲೆಯ ದೀವರು, ತೆಂಗಿನ ದೀವರು ಮತ್ತು ನಾಮಧಾರಿಗಳು ಎಂದು ಗುರುತಿಸಿಕೊಳ್ಳುತ್ತಿರುವ ಈಡಿಗರಲ್ಲಿ ಯಾವುದೇ ರೀತಿಯ ಎದ್ದು ಕಾಣುವ ಬದಲಾವಣೆಗಳಿಲ್ಲ. (ಆಧುನಿಕ ಕಾಲಕ್ಕಕೆ ಸಂಬಂದಿಸಿದಂತೆ)ಇವರು ಆರ್ಥಿಕವಾಗಿ ಬಹುತೇಕ ಕೃಷಿಯನ್ನು ಇಂದು ಅವಲಂಭಿಸಿದ್ದಾರೆ. ೬೦ ರ ದಶಕದ ಭೂಸುಧಾರಣಾ ಮಸೂದೆಯ ಪ್ರಯೋಜನವನ್ನು ಹೋರಾಟದ ಮೂಲಕ ಪಡೆದುಕೊಂಡಿದ್ದಾರೆ. ಆದರೆ ಈ ಹಿಂದೆ ಗೇಣಿದಾರರಾಗಿದ್ದಾಗಿನ ಬದುಕೇ ಬೇರೆ. ಆಬದುಕಿಗೆ ಅನುಗುಣವಾದ ಸಾಮಾಜಿಕ, ಸಾಂಸ್ಕೃತಿಕವಾದ ಬದುಕು ರೂಪಗೊಂಡಿತ್ತು.

ಹಿಂದೆ ನಾಮಧಾರಿಗಳು ಗೇರುಸೊಪ್ಪ ಚಂದಾವರ ಮಿರ್ಜಾನ ಅಂಕೋಲ ಹೀಗೆ ನಾಲ್ಕು ಸೀಮೆಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದರು. ಪ್ರತಿಸೀಮೆಗೂ ನಾಯಕನಿರುತ್ತಿದ್ದ. ಪ್ರತಿ ಊರಿಗೂ ಬುದ್ಧಿವಂತನಿರುತ್ತಿದ್ದ. ಇಂದು ಈ ವ್ಯವಸ್ಥೆ ಇಲ್ಲ. ಕಾರಣ ಇಂದು ಭೂಮಾಲಿಕತ್ವ ಮತ್ತು ಸಾಮಾಜಿಕ ನ್ಯಾಯದ ವ್ಯವಸ್ಥೆ ಬದಲಾಗಿದೆ. ಭೂಮಾಲೀಕರಾಗಿರುತ್ತಿದ್ದ ನಾಯಕ, ಬುದ್ಧ್ಯಂತರು ನ್ಯಾಯತೀರ್ಮಾನ ಮಾಡುತ್ತಿದ್ದರು. ಇಂದು ಭೂಮಿಗೆ ಎಲ್ಲರೂ ಒಡೆಯರಾಗಿದ್ದಾರೆ. ಇಲ್ಲಿ ಬುದ್ಧ್ಯಂತ, ನಾಯಕರ ಅಸ್ತಿತ್ವಕ್ಕೆ ಅವಕಾಶವಿಲ್ಲವಾಗಿದೆ. ನ್ಯಾಯದಕಲ್ಪನೆ, ಬೇರೆಯಾಗಿದೆ. ನ್ಯಾಯಾಲಯಗಳು ಆಕೆಲಸ ನಿರ್ವಹಿಸುತ್ತಿವೆ. (ಇದು ಭೂಹೋರಾಟದ ಪರಿಣಾಮ).

ಜಿಲ್ಲೆಯಾದ್ಯಂತ ಈ ಜನ ಬಹುಸಂಖ್ಯಾತರಾಗಿದ್ದಾರೆ. ಆದ್ದರಿಂದ ಒಂದು ಬಗೆಯ ಸಂಘಟನೆಯಿದೆ. ಈ ಸಮೂಹವ್ಯವಸ್ಥೆಯು ತಮ್ಮದೇ ಆದ ಸಾಮಾಜಿಕ ಸಾಂಸ್ಕೃತಿಕ ಆಚರಣೆಗಳನ್ನು ಸಂರಕ್ಷಿಸಿಕೊಳ್ಳಲು ಸಹಾಯಕವಾಗುತ್ತದೆ. ಇತರೇ ಧಾರ್ಮಿಕ ಆ ಮೂಲಕ ಸಾಂಸ್ಕೃತಿಕ ಪ್ರಭಾವದಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಸಾಧ್ಯವಾಗುತ್ತದೆ. ಅಲ್ಪ ಸಂಖ್ಯಾತರಾದರೆ ಅನುಕರಣೆಯ ಹಾದಿಯನ್ನು ಹಿಡಿಯಬೇಕಾಗುತ್ತದೆ. ಬಯಲು ಸೀಮೆಯ ಈಡಿಗರು ಅಲ್ಪಸಂಖ್ಯಾತರಾಗಿ ಹರಿದು ಹಂಚಿ ಹೋಗಿದ್ದರಿಂದ, ಮತ್ತು ಆರ್ಥಿಕವಾಗಿ ನಿರಂತರವಾಗಿ ಅಭದ್ರತೆಯನ್ನು ಅನುಭವಿಸಬೇಕಾದ್ದರಿಂದ ಅವರು ಅನುಕರಣೆಯ ಹಾದಿಯನ್ನು ಹಿಡಿದರು. ಆದರೆ ಈ ಭಾಗದ ಈಡಿಗರಿಗೆ ಆಸ್ಥಿತಿ ಬರಲಿಲ್ಲ.

೧). ದಟ್ಟವಾದ ಮಲೆನಾಡು ಆಧುನೀಕರಣದ ಪ್ರಕ್ರಿಯೆಯನ್ನು ಒಂದು ಬಗೆಯ ನಿಯಂತ್ರಣದಲ್ಲಿಟ್ಟಿದೆ. ಈಭಾಗದ ಹಳ್ಳಿಯ ಜನರಿಗೆ ಇದರ ಸೋಂಕು ಬಯಲು ಸೀಮೆಯವರಿಗೆ ತಟ್ಟುವಂತೆ ತೀವ್ರವಾಗಿ ತಟ್ಟಲಾರದು.

೨). ಬೆಟ್ಟಗುಡ್ಡ- ನದಿ, ಜಲಧಾರೆಗಳು ಆಧುನೀಕರಣದ ವೇಗವನ್ನು ಸ್ವಲ್ಪ ಮಟ್ಟಿಗೆ ತಡೆಗಟ್ಟಲು ಸಾಧ್ಯವಾಗಿದೆ. ರಸ್ತೆ, ಸಾರಿಗೆ ವ್ಯವಸ್ಥೆ ಇತ್ಯಾದಿ ಬಯಲು ಸೀಮೆಯಷ್ಟು ವ್ಯಾಪಕವಾಗಿ ನೆಡೆದಿಲ್ಲ.

೩).ಈ ಭಾಗದಲ್ಲಿ ಈಡಿಗರೇ ಬಹುಸಂಖ್ಯಾತರು.

೪). ಬಹುತೇಕ ಈಡಿಗರಿಗೆ ಭೂಮಿಯಿದೆ.(ಶೇ.೯೦)

೫). ಕೈಗಾರಿಕೀಕರಣವು ಈಭಾಗಗಳಲ್ಲಿ ವ್ಯಾಪಕವಾಗಿಲ್ಲ.

ಈ ಮೇಲಿನ ಪ್ರಧಾನ ಅಂಶಗಳು ಈ ಭಾಗದ ಜನರ ಸಾಂಸ್ಕೃತಿಕ ಜೀವನವನ್ನು ಇಂದಿಗೂ ಜೀವಂತವಾಗಿ, ಸಮೃದ್ಧವಾಗಿಡಲು ಪೂರಕವಾಗಿವೆ. ಭೂಮಿಯಿರುವುದರಿಂದ ವಲಸೆ ಹೋಗುವ ಸ್ಥಿತಿಬರಲಿಲ್ಲ. ಆಧುನಿಕ ಜ್ಞಾನವು ಪ್ರಾಯೋಗಿಕವಾಗಿ ಈ ಜನರನ್ನು ಬಯಲು ಸೀಮೆಯಂತೆ ತಲುಪಲು ಸಾಧ್ಯಾವಿರಲಿಲ್ಲ. ಕಾರಣ ಇಲ್ಲಿಯೇ ಭೌಗೋಳಿಕ ರಚನೆ. ಈಗಲೂ ಈಭಾಗದ ಹಳ್ಳಿಗಳಲ್ಲಿ ಸರಿಯಾದ ಸಾರಿಗೆ ವ್ಯವಸ್ಥೆಯಿಲ್ಲ. ೩-೪ ಮನೆಗಳಿಗೆ ಒಂದು ಊರುಗಳು ನಿರ್ಮಾಣವಾಗಿವೆ. ಆಧುನಿಕ ಸೌಲಭ್ಯಗಳಾವುವು ಇಂಥ ಹಳ್ಳಿಗಾಡಿಗೆ ತಲುಪಲು ಸಾಧ್ಯವಾಗುತ್ತಿಲ್ಲ. ಹಾಗಾಗಿ ಸಾಮೂಹಿಕವಾದ ಕೃಷಿ ಉತ್ಪನ್ನದ ವ್ಯವಸ್ಥೆಯಲ್ಲಿ ಉಳಿದರು. ಬಿತ್ತನೆ ಕುಯಿಲು ಸಂದರ್ಭಗಳಲ್ಲಿ ಪರಸ್ಪರ ದುಡಿಯುತ್ತಿದ್ದಾರೆ. ಇದು ಅನಿವಾರ್ಯ ಕೂಡ, ಈ ಜಾತಿಯ ಜನರೇ ಬಹುಸಂಖ್ಯಾತರಾದ್ದರಿಂದ ಕೂಲಿಕಾರ್ಮಿಕರಾದ ಇದೇ ಜಾತಿಯ ಜನರೂ ಇವರ ಕೈಕೆಳಗೆ ದುಡಿಯುತ್ತಿದ್ದರು. ಇದರಿಂದ ಕರುಳ ಬಳ್ಳಿ ಭಾವವೊಂದು ಉಳಿದುಕೊಂಡೇ ಇರುತ್ತಿತ್ತು. ಇಂಥ ವ್ಯವಸ್ಥೆಯೊಂದು ಅಸ್ಥಿತ್ವದಲ್ಲಿರುವಾಗ, ಪಾರಂಪರಿಕವಾದ ಆಚರಣೆಗಳು ಹಬ್ಬ-ಹರಿದಿನ, ಮದುವೆ, ಕ್ರೀಡೆ, ದೈವಪೂಜೆ, ಇತ್ಯಾದಿ ವಿಚಾರಗಳಲ್ಲಿ ತೀವ್ರವಾದ ಬದಲಾವಣೆಯನ್ನು ತರಲು ಸಾಧ್ಯವಾಗುವುದಿಲ್ಲ. ಆದರೂ ಆಧುನಿಕತೆಯ ಪ್ರಭಾವವನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಅಂಕೋಲ, ಕಾರವಾರ, ಮೊದಲಾದ ನಗರ ಪ್ರದೇಶ ಮತ್ತು ಅವುಗಳ ಸುತ್ತ ಮುತ್ತಲ ಹಳ್ಳಿಗಳು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿವೆ. ಆದರೂ ಇವುಗಳ ಪ್ರಭಾವ ಬಯಲ ಸೀಮೆಯ ನಗರಗಳಿಗಿಂತ ತೀವ್ರವಾದಂತೆ ಅನ್ನಿಸುವುದಿಲ್ಲ. ಉದಾ: ಬೆಂಗಳೂರು ಮೈಸೂರು, ತುಮಕೂರು ನಗರ, ಮತ್ತು ಸುತ್ತಮುತ್ತಲ ಹಳ್ಳಿಗಳು ಆಧುನೀಕರಣಗೊಂಡ ವೇಗ, ತೀವ್ರತೆ ಮತ್ತು ಅವು ಜನರ ಬದುಕಿನಲ್ಲಿ ಮಾಡಿದ ಪರಿಣಾಮಗಳ ಮಟ್ಟ ಉತ್ತರಕನ್ನಡದ ಜನತೆಯಲ್ಲಿ ಉಂಟಾಗಿಲ್ಲ. ಕಾರವಾರ ಕರಾವಳಿಯ ತೀರವಾಗಿದ್ದು ಸ್ವಲ್ಪ ಭಿನ್ನವಾಗಿದೆ. ಇಲ್ಲಿ ಹೊರಗಿನ ಪ್ರಭಾವ ಇವರಲ್ಲಿ ಸ್ವಲ್ಪಮಟ್ಟಿಗೆ ಹೆಚ್ಚಾದಂತೆ ಅನಿಸುತ್ತದೆ.ಈ ಭಾಗದ ಪ್ರಭಲ ವರ್ಗದ ಈಡಿಗರಲ್ಲಿ ಆಧುನಿಕ ಪ್ರಭಾವದ ಛಾಯೆಯಿದೆ. ಆಚರಣೆಗಳು ಬೇರೆ ಅರ್ಥ ಪಡೆದುಕೊಳ್ಳುತ್ತಿವೆ.

ಇಲ್ಲಿಯ ಬಹುತೇಕ ಹಳ್ಳಿಗಳಲ್ಲಿ ಹಳೆಯ ಪಾರಂಪರಿಕ ಆಚರಣೆಗಳು ಇನ್ನೂ ಜೀವಂತವಾಗಿದೆ. ಆಧುನಿಕತೆಯ ಪ್ರಭಾವ ಅಷ್ಟಾಗಿ ಇಲ್ಲ. ಉತ್ತರ ಕನ್ನಡದಲ್ಲಿಯ ನಾಮಧಾರಿಗಳು ಹಿಂದೆ ಹಳೆ ಪೈಕದವರಾಗಿದ್ದವರು,ಇಂದು ಬಹುತೇಕ ವೈದಿಕೀಕರಣಗೊಂಡಿದ್ದಾರೆ. ಇದಕ್ಕೆ ಮಧ್ಯಕಾಲೀನ ಭಕ್ತಿ ಚಳುವಳಿಯ ಹಿನ್ನೆಲೆಯಲ್ಲಿ ಕಾರಣಗಳನ್ನು ಗುರುತಿಸಲು ಸಾಧ್ಯವಿದೆಯೇ ? ಎನ್ನುವ ಪ್ರಶ್ನೆ ಅನೇಕ ಕಾರಣಗಳಿಗೆ ಕಾಡುತ್ತದೆ.

ದೀವರು ಅಥವಾ ಹಳೆಪೈಕರಾದ ಇವರ ಆರಾಧ್ಯದೈವ ತಿರುಪತಿಯ ವೆಂಕಟರಮಣನಾಗಿದ್ದಾನೆ. ಇವರು ಹಳೆಪೈಕರಾಗಿದ್ದವರು ಯಾವಸಂದರ್ಭದಲ್ಲಿ ನಾಮಧಾರಿಗಳಾಗಿ ಪರಿವರ್ತಿತವಾದರೆಂದು ತಿಳಿಯದೆಂದು ಸ್ಥಳೀಯರು ಹೇಳುತ್ತಾರೆ. ಈ ಹೆಸರು ೨೦ನೇ ಶತಮಾನದ ಮೊದಲ ಭಾಗದಲ್ಲಿ ಚಾಲ್ತಿಯಲ್ಲಿ ಬಂದಿರಬಹುದೆಂದು ಹೇಳುತ್ತಾರೆ. ಏಕೆಂದರೆ ಕೆನರಾ ಗೆಝುಟಿಯರ್ ನಲ್ಲಾಗಲಿ, ಥರ್ಸ್ಟನ್ ನ ಕಾಸ್ಟ್ ಅಂಡ ಟ್ರೈಬ್ಸ್ ಆಫ್ ಸದರನ್ ಇಂಡಿಯಾದಲ್ಲಾಗಲೀ (೧೯೦೯) ಈ ಹೆಸರಿನ ಉಲ್ಲೇಖವಿಲ್ಲವೆಂದು ತಿಳಿದು ಬಂದಿದೆ. ಹೀಗೆ ಇವರು ಪರಿವರ್ತನೆಯಾದುದು ಆಂತರಿಕ ಒತ್ತಡದಿಂದಲೋ? ಬಾಹ್ಯ ಪ್ರಭಾವದಿಂದಲೋ? ಎನ್ನುವುದನ್ನು ಆಲೋಚಿಸಬೇಕಿದೆ. ಬಹುಶಃ ಅಲ್ಲಿಯ ಬಹುಸಂಖ್ಯಾತರಾದ ಬ್ರಾಹ್ಮಣರ ಪ್ರಭಾವ ವಿರುವುದನ್ನು ಗಮನಿಸಿದರೆ, ಅವರ ಪ್ರಭಾವವನ್ನು ತಳ್ಳಿಹಾಕಲು ಬಾರದು.

ಇಂದಿನ ಇವರ ಸಾಂಸ್ಕೃತಿಕ ಆಚರಣೆಗಳಾದ ಮದುವೆ ಮೊದಲಾದ ಶುಭಸಮಾರಂಭಗಳಿಗೆ ಅಯ್ಯನ ಪಾತ್ರ ಪ್ರಮುಖವಾಗಿದೆ. ಇವರ ಪ್ರತಿ ಮನೆಗಳಲ್ಲೂ ತುಲಸಿಕಟ್ಟೆ ಇರುತ್ತದೆ. ತಿರುಪತಿಯ ಯಾತ್ರೆಯನ್ನು ಬಹುನಿಷ್ಠೆಯಿಂದ ಕೈಗೊಳ್ಳುತ್ತಾರೆ. ಮೈಸೂರಿನ ಗುಲ್ವಾಡಿ ಮಠಕ್ಕೆ, ನಿಷ್ಠರಾಗಿದ್ದಾರೆ. ವಿಷ್ಣುಸಂಬಂಧಿ ಹಬ್ಬಗಳನ್ನು ಬಹುತೇಕ ಹಳ್ಳಿಗರು ನಿಷ್ಠೆಯಿಂದ ಆಚರಿಸುತ್ತಾರೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯವರಾದ್ದರಿಂದ 'ಬಳ್ಳಿ" ವ್ಯವಸ್ಥೆಯನ್ನು ಉಳಿಸಿಕೊಂಡು ಬಂದಿದ್ದಾರೆ. ನಗರದ ಮದುವೆ ಮತ್ತು ರಿಜಿಸ್ಟರ್ಡ್ ಮದುವೆಗಳಲ್ಲಿ ಈಗ ಅಂತರ್ ಜಾತಿ ವಿವಾಹ ಪದ್ಧತಿ ಪ್ರಾರಂಭವಾಗಿದೆ. ಬಯಲು ಸೀಮೆಯ ಈಡಿಗರು ಕೂಡ ಈಚೆಗೆ ತಮ್ಮ ಗೋತ್ರ ಪದ್ದತಿಯನ್ನು ಮೀರುತ್ತಿರುವುದು (ವಿವಾಹ ಪದ್ದತಿಯಲ್ಲಿ) ಕಂಡು ಬರುತ್ತದೆ. ಉತ್ತರಕನ್ನಡ ಜಿಲ್ಲೆಯಲ್ಲಿ ಬಿಲ್ಲವರೂ ಅಲ್ಪಸಂಖ್ಯೆಯಲ್ಲಿದ್ದಾರೆ. ಇವರೂ ತಮ್ಮ ಆಚರಣೆಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಹೆಚ್ಚು ಪರಿವರ್ತನೆಗಳು ಕಂಡು ಬಂದಿಲ್ಲ.

ಉತ್ತರ ಕನ್ನಡದ ನಾಮಧಾರಿ ದೀವರು ಹಿಂದೆ ಸೈನಿಕ ವೃತ್ತಿಯಲ್ಲಿ ತೊಡಗಿದ್ದರ ಸಂಕೇತವಾಗಿ 'ಖೇತ್ರಿ' ಹಬ್ಬವನ್ನು ಆಚರಿಸುತ್ತಾರೆ. ಕೆಲಕುಟುಂಬಗಳಲ್ಲಿ ಹಳೆಯ ಖಡ್ಗ ಕೋವಿಗಳಿವೆ. ಹಿಂದೆ ಯುದ್ಧ ನಡೆದಿದ್ದಿರಬಹುದಾದ ಸ್ಥಳಗಳಲ್ಲಿ "ಕೋಳಿಯಂಕ" ವನ್ನಾಡಿ ರಣದೇವತೆಯ ಹೆಸರಿನಲ್ಲಿ ರಕ್ತ ಸಮರ್ಪಣೆ ಮಾಡುತ್ತಾರೆ. ಆದರೆ ಇದು ವ್ಯಾಪಕವಾಗಿಲ್ಲ. ಈ ಆಟ ಜೂಜಾಟವಾಗಿ ಪರಿವರ್ತನೆಗೊಳ್ಳತೊಡಗಿದಂತೆ, ನ್ಯಾಯಬಾಹಿರವೆಂದು ಬಹಿಷ್ಕಾರವಾಗಿದೆ. ಆದರೂ ತಮ್ಮ ರಣದೇವತೆ ಮುನಿಯುವಳೆಂದು ಮುಚ್ಚುಮರೆಯಲ್ಲಾದರೂ ಈ ಆಟಗಳನ್ನು ಆಡುತ್ತಾರಂತೆ (ವಿವರಗಳಿಗೆ ನೋಡಿ, ಈಡಿಗ, ಸುವರ್ಣಸಂಚಿಕೆ-

೧೯೯೫. ಪು-೨೯೩೦-೩೧). "ಸುಗ್ಗಿಯ ಆಟ, ಕೋಲಾಟ, ಸೋಗುಹಾಕುವುದು ಯಕ್ಷಗಾನ, ಬಯಲಾಟ" ಗಳು ಇಂದಿಗೂ ಇವರ ಪ್ರಸಿದ್ಧ ಆಟಗಳು. ಕೃಷಿಪ್ರಧಾನ ಕಸುಬುಳ್ಳ ಇವರು ಬಿಡುವಿನ ಕಾಲಗಳಲ್ಲಿ ಮೇಲಿನ ಕಲೆಗಳಲ್ಲಿ ತೊಡಗಿಸಿಕೊಳ್ಳುತ್ತಾರೆ. ಕೋಲು ಹಾಕುವುದರಲ್ಲಿ ಇವರು ಪ್ರಸಿದ್ಧರಂತೆ. ಅಂಕೋಲ ನಾಮಧಾರಿಗಳು ಸುಗ್ಗಿ ತುರಾಯಿ ಕಟ್ಟಿ ಕೋಲಾಡುವುದನ್ನು ಬಿಟ್ಟಿದ್ದಾರಂತೆ. ಇದಕ್ಕೆ ಕಾರಣಗಳನ್ನು ಕಂಡು ಕೊಳ್ಳಬೇಕಿದೆ. ಸೊರಬದ ಕಡೆಯ ದೀವರಗಳಲ್ಲಿ ಸುಗ್ಗಿಯಾಟ, ಕೋಲಾಟಗಳು ಅಲ್ಲಲ್ಲಿ ಪ್ರಧಾನವಾಗಿ ಕಾಣುವುದಿಲ್ಲ. ಅದು ಮಾಮೂಲಿನಂತೆ ಅಸ್ತಿತ್ವದಲ್ಲಿದೆ ಇಲ್ಲಿ ಡೊಳ್ಳು ಕುಣಿತ ಪ್ರಸಿದ್ಧ ಕ್ರೀಡಾಚರಣೆಯಾಗಿದೆ.

ನಾಮಧಾರಿಗಳು, ದೀವರು, ತೆಂಗಿನ ದೀವರುಗಳಿಗೆ ಸಂಬಂಧಿಸಿದಂತೆ ಮದುವೆಯ ಹಾಡುಗಳು ಲಭ್ಯವಾಗಿವೆ. ಮದುವೆಗೆ ಸಂಬಂಧಿಸಿದ ಈ ಹಾಡುಗಳು, ಎರಡೂ ಸಮೂಹದವರ ಸಾಮ್ಯ ಆಚರಣೆಗಳನ್ನು ಹೇಳುತ್ತವೆ. ಡಾ॥ ಎನ್ .ಆರ್ . ನಾಯಕ್ ರವರು ಸಂಪಾದಿಸಿರುವ "ಕೂಸಾಯ್ತು ನಮ್ಮ ಕೊಮರಾಗೆ" ಪುಸ್ತಿಕೆಯಲ್ಲಿ ನಾಮಧಾರಿಗಳ ಮದುವೆಯ ಹಾಡುಗಳು ಮತ್ತು ತೆಂಗಿನ ದೀವರ ಮದುವೆಯ ಹಾಡುಗಳು ಸಂಗ್ರಹಿಸುಲ್ಪಟ್ಟಿವೆ. ತೆಂಗಿನದೀವರಿಗೂ ನಾಮಧಾರಿಗಳಿಗೂ ಈ ಆಚರಣೆಗಳಲ್ಲಿ ಹೆಚ್ಚು ವ್ಯತ್ಯಾಸವಿದ್ದಂತೆ ಕಾಣುವುದಿಲ್ಲ.

ಈ ಹಾಡುಗಳಲ್ಲಿ ಪ್ರಮುಖ ಶಾಸ್ತ್ರಗಳು ಮತ್ತು ಅವುಗಳ ಸಂಬಂಧದ ಸ್ವರೂಪಗಳು ವ್ಯಕ್ತವಾಗುತ್ತವೆ. ಪ್ರಮುಖವಾಗಿ ಕೆಳಗಿನ ವಿಷಯಗಳಿಗೆ ಸಂಬಂಧಿಸಿದಂತೆ ಹಾಡುಗಳಿವೆ.

೧). ಮದುವೆಯ ನಿಶ್ಚಯ.

೨). ಅಕ್ಕನನ್ನು ಕರೆಯುವುದು.

೩). ಮೂಹೂರ್ತಕ್ಕೆ ಹೋಗುವುದು.

೪). ವೀಳ್ಯ ಕೊಡುವುದು.

೫). ತಿಗುರೆಣ್ಣೆ (ಎಣ್ಣೆಹಚ್ಚುವುದು).

೬). ಕಳಸನೀರು ವೀಯುವುದು.

೭). ಪೆನ್ನೆ (ಕೂದಲು ತೆಗೆಯುವುದು).

೮). ಬಾಸಿಂಗ ಕಟ್ಟುವುದು.

೯). ಬಾಗಿಲು ಪೂಜೆ.

೧೦). ದಿಬ್ಬಣ ಹೊರಡುವ ತಯಾರಿ.

೧೧). ದಿಬ್ಬಣಹೊರಡುವುದು.

೧೨). ದಿಬ್ಬಣ ಎದುರುಗೊಳ್ಳುವುದು.

೧೩). ನೆಂಟರುಪಚಾರ.

೧೪). ಮದುಮಗ ಹಂದರ ಪ್ರವೇಶಿಸುವುದು.

೧೫). ಕೂಸೊಪ್ಪಲು ಹೋಗುವುದು.

೧೬). ಹೆಣ್ಣು ಸಿಂಗರಿಸುವುದು.

೧೭). ಮಡಿಲಕ್ಕಿ ತುಂಬುವುದು.

೧೮). ಕೂಸೊಪ್ಪಿಬರುವುದು.

೧೯). ಹೆಣ್ಣುಧಾರೆಗೆ ಬರುವುದು.

೨೦). ಧಾರೆ.

೨೧). ಹಸೆ ಜಗುಲಿಗೆ ಬರುವುದು.

೨೨). ಉಂಗುರ ಹಾಕುವುದು.

೨೩). ಹರಸೇಸೆ.

೨೪). ಬಾಸಿಂಗ ಸಡಿಲಿಸುವುದು.

೨೫). ಗಂಧೀಳ್ಯ.

೨೬). ಓಕುಳಿ.

೨೭). ಮದುಮಗನಿಗೆ ಕರೆ.

೨೮). ಬಳುವಳಿ.

೨೯). ಹೆಣ್ಣೊಪ್ಪಿಸುವುದು.

೩೦). ದಿಬ್ಬಣ ಗಂಡಿನ ಮನೆಗೆ ಬರುವುದು.

೩೧). ಬಾಗಿಲು ತಡೆಯುವುದು.

೩೨). ಗಂಡಿನ ಮನೆಯಲ್ಲಿ ಸೇಸೆಯಿಡುವುದು.

೩೩). ಬೀಗರೂಟ, ಇತ್ಯಾದಿ.

ನಾಮಧಾರಿಗಳು ಮತ್ತು ತೆಂಗಿನ ದೀವರು ಪ್ರಮುಖವಾಗಿ ಮದುವೆಯ ಶಾಸ್ತ್ರಗಳನ್ನು ಆಸಕ್ತಿಯಿಂದ ಮಾಡುತ್ತಾರೆ. ಇವರು ಮಾಡುವ ಪ್ರತಿಶಾಸ್ತ್ರಕ್ಕೂ ಹೇಳುವ ಹಾಡಿಗೂ ನೇರಸಂಬಂಧವಿದೆ. ಮದುವೆಯಲ್ಲಿ ಅಕ್ಕನನ್ನನು ಕರೆಯುವುದು, ತೆಂಗಿನ ದೀವರು ಮತ್ತು ನಾಮಧಾರಿಗಳಲ್ಲಿ ಬಹು ಮುಖ್ಯ ಕೆಲಸವಾದಂತೆ ಕಾಣುತ್ತದೆ. ಮುನಿಸಿಕೊಂಡ ಅಕ್ಕನನ್ನು ತಮ್ಮ ಕರೆಯಲು ಹೋಗುವುದು, ಆಕೆ ಅನೇಕ ನೆಪ ಹೇಳಿ ಮದುವೆಗೆ ಬರದೆ ತಪ್ಪಿಸಿಕೊಳ್ಳಲು ಯತ್ನಿಸುವುದು ತಿಳಿಯುತ್ತದೆ. ಇದಕ್ಕೆ ಕಾರಣಗಳನ್ನು ಊಹಿಸಲು ಸಾಧ್ಯವಿದೆ. ಆದರೆ ಕಾರಣಗಳನ್ನು ಹೇಳುವ ವಿವರಗಳಿಲ್ಲ. ಆದರೆ ಅಕ್ಕನ ಮನೆಗೆ ಬಹುದಿನಗಳಿಂದಲೂ ಬಾರದಿರುವ ತಮ್ಮ ಮದುವೆಗೆ ಕರೆಯಲು ಬರುತ್ತಾನೆ. ಹಿರೆ ಅಕ್ಕ ಹಿರೆಭಾವರಿಗೆ ಮದುವೆಯ ಎಲ್ಲಾ ಕಾರ್ಯಗಳಲ್ಲಿ ಬಹುಮುಖ್ಯ ಸ್ಥಾನವಿದೆ. ಎಲ್ಲಾ ಶಾಸ್ತ್ರ ಕಾರ್ಯಗಳಲ್ಲಿ ಹಿರೆಯಕ್ಕನೇ ಮುಂದಿರಬೇಕಾದುದನ್ನು ಮುಂದಿನ ಹಾಡುಗಳು ಸೂಚಿಸುತ್ತವೆ. ಅಕ್ಕ ತಮ್ಮನ ಸಂಬಂಧದ ಸ್ವರೂಪದ ಬಗ್ಗೆ ಈ ಹಾಡುಗಳು ಬೆಳಕು ಚೆಲ್ಲುತ್ತವೆ. ಈ ಎಲ್ಲಾ ಆಚರಣೆಗಳಿಗೂ ಜಾತಿ ಸಂಬಂಧಿಕರು ಸೇರಲೇಬೇಕು. ಸಮೂಹವಿಲ್ಲದೆ ಇಂಥ ಕಾರ್ಯಗಳು ಸಾಧ್ಯವೇಯಿಲ್ಲ. ಹಿಂದೆ ಹೇಳಲಾದ ಪ್ರಧಾನ ಕಾರಣಗಳಂತೆ ಇಂದೂ ಇಲ್ಲಿ ಈ ಸಾಮೂಹಿಕ ಆಚರಣೆಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿವೆ. ತೆಂಗಿನ ದೀವರು ಮದುವೆ ಕಾರ್ಯಗಳಲ್ಲಿ ಇವರಿಗಿಂತ ಏನೂ ಭಿನ್ನವಾದಂತೆ ಕಾಣುವುದಿಲ್ಲ. ಅವರ ಹಾಡುಗಳ ಪ್ರಮುಖಾಂಶಗಳು ಹೀಗಿವೆ.

೧). ಹೆಣ್ಣುಕೇಳಲು ಹೋಗುವುದು.

೨). ಅಕ್ಕನನ್ನು ಕರೆಯುವುದು.

೩). ಮದುವೆಯ ಸಿದ್ಧತೆ ಮಾಡಿಕೊಳ್ಳುವುದು.

೪). ಮದುಮಗ ಮಿಂದು ಬಂಗಾರ ವಿಡುವುದು.

೫). ಹೆಣ್ಣು ಗೆಲ್ಲಲು ಹೋರಡುವುದು.

೬). ಪಾದ ತೊಳೆಯುವುದು.

೭). ಹೆಣ್ಣುಗೆಲ್ಲುವುದು.

೮). ಮನೆತುಂಬಿಸುವುದು.

೯). ಬಾಗಿಲತಡೆಯುವುದು.

೧೦). ಹೆಣ್ಣು ಗೆಲ್ಲಲು ಬಂದ ಸುದ್ದಿಮುಟ್ಟಿಸುವುದು.

೧೧). ದಿಬ್ಬಣದ ಹಾಡುಗಳು.

ಒಟ್ಟು ಈ ಎರೆಡೂ ಸಮುದಾಯಗಳು ಮದುವೆಯ ಸಂದರ್ಭಗಳಲ್ಲಿ ಸಾಮ್ಯವನ್ನು ಪಡೆದುಕೊಂಡಿವೆ. ಸ್ವಲ್ಪ ಹೆಚ್ಚುಕಡಿಮೆ ಶಾಸ್ತ್ರಗಳು ವ್ಯತ್ಯಾಸವಿದ್ದಿರಬಹುದು. ಉದಾ: ಅಕ್ಕನನ.ನ್ನುಕರೆಯುವ ಒಂದು ಹಾಡು ತೆಂಗಿನ ದೀವರಲ್ಲಿ ಹೀಗಿದೆ.

ಎಲ್ಲೆಲ್ಲಿಗೆ ಈಳೀ ಮೆಲ್ಲದಿಂದ್ ಕೊಡಲಕ್ಕ
ಕೋಏಕಿಂದಾಚೆ ಹಿರಿಯಕ್ಕ| ಹಿರಿಭಾವ
ಅಪ್ಪಿಗೋಂದೀಳೆ ಮುಟ್ಟಸೇ ಬಾರೋ | ಮಗನೇ
ಅಪ್ಪಿಬ್ರಪಾದ ಹಿಡುದೇ ಬಾರೋ

ಹೀಗೆ ತಾಯಿಯನ್ನು ಕೇಳಿ ಅನುಮತಿ ಪಡೆದುಕೊಂಡು ಹೊರಡುತ್ತಾನೆ. ಇದು ಇಡೀ ಮದುವೆ ಹಾಡಿನ ಪ್ರಾರಂಭದ ವಿಷಯ. ನಾಮಧಾರಿಗಳಲ್ಲಿ ಪ್ರಾರಂಭದಲ್ಲೆ ಈ ಅರ್ಥಕೊಡುವ ಹಾಡಿದೆ.ಇಂದು ಈ ಹಾಡುಗಳ ಸಂಖ್ಯೆ ಕ್ಷೀಣಿಸುತ್ತಿದೆ. ನಗರದ ಪ್ರಭಾವ ದೂರವಿರುವ ಹಳ್ಳಿಗಳಲ್ಲಿ ಮಾತ್ರ ಕಡಿಮೆ ಅವಧಿಯಲ್ಲಿ ಕಡಿಮೆ ಹಾಡಿ ಮುಗಿಸುತ್ತಾರೆ. ಇನ್ನು ನಗರದ ಛತ್ರಗಳಲ್ಲಿ ಇವು ಇದ್ದರೆ ಉಂಟು ಇಲ್ಲದಿದ್ದರೆ ಇಲ್ಲವೇ ಇಲ್ಲ. ಏಕೆಂದರೆ ಅಲ್ಲಿ ಕಡಿಮೆ ಅವಧಿಯಲ್ಲಿ ಮದುವೆ ಮುಗಿಯ ಬೇಕಲ್ಲವೇ? ತುಳು ಭಾಷೆಯ ಪ್ರಭಾವ ಈ ಜನರ ಮೇಲೆ ಸಾಕಷ್ಟಿದೆ.

ಮದುವೆಗೆ ಸಂಬಂಧಿಸಿದಂತೆ ಇಂದು ಇತರೆ ಈಡಿಗರೊಂದಿಗೂ ಉದಾ: ಬಿಲ್ಲವ, ಈಡಿಗ, ಇತ್ಯಾದಿ ಸಂಬಂಧಗಳು ಬೆಳೆಯುತ್ತಿವೆ. ಬಯಲು ಸೀಮೆಯ ಅಂದರೆ ಬೆಂಗಳೂರು ಮೈಸೂರು ಕಡೆಯ ಈಡಿಗರು 'ನಾಡಾರರ"ಜೊತೆ ವಿವಾಹಸಂಬಂಧಗಳನ್ನು (ತಮಿಳುರು) ಬೆಳೆಸಿಕೊಂಡಂತೆ ಇಲ್ಲಿಯೂ ಇತರರೊಂದಿಗೆ ಸಂಬಂಧ ವ್ಯಾಪಕವಾಗುತ್ತಾ ಸಾಗಿದೆ.'ನಾಡಾರ್ ' ಮತ್ತು ಈಡಿಗರ ಸಂಬಂಧದ ಬಗ್ಗೆ ವಿವರಕ್ಕೆ ನೋಡಿ:[Karnataka State gezwteer MysOrte district ಪು.೧೬೦ ed, B.N. Sri Sothyan ೧೯೬೭] ಬಹು ಹಿಂದೆಯೇ ಕಳ್ಳು ಇಳಿಸುವ ವೃತ್ತಿ ಇವರಿಂದ (ನಾಡಾರರು) ದೂರವಾಗಿದ್ದರಿಂದ, ಬಯಲು ಸೀಮೆಯರಂತೆ ಇವರು ಈಚಲು ಮರ, ಸೇಂದಿ ಇತ್ಯಾದಿಗಳನ್ನು ಪೂಜಿಸುವುದು ಹೆಚ್ಚಾಗಿ ಕಂಡು ಬರುವುದಿಲ್ಲ.

ಶಿವಮೊಗ್ಗ ಜಿಲ್ಲೆಯ ದೀವರಲ್ಲಿ ಹೆಚ್ಚು ಕಡಿಮೆ ನಾಮಧಾರಿಗಳಂತೆಯೇ ಸಾಂಸ್ಕೃತಿಕ ವಾತಾವರಣವಿದೆ. ಭಾಷೆಯ ದೃಷ್ಟಿಯಿಂದ ಮತ್ತು ಮದುವೆಯ ಆಚರಣೆಗಳ ದೃಷ್ಟಿಯಿಂದ ಇವರು ಸಾಮ್ಯವನ್ನು ಪಡೆದರೂ ಕೊಂಚ ವ್ಯತ್ಯಾಸಗಳು ಇವೆ. ದೀವರ ಗಂಡು ದೇವರು ಬಹುತೇಕ ಆಂಜನೇಯ, ತಿರುಪತಿ ವೆಂಕಟರಮಣ ಮತ್ತೆ ಇತರೆ ವೈಷ್ಣವ ದೇವರುಗಳಾಗಿವೆ. ಗಂಡು ದೇವರುಗಳ ಪೂಜೆಯ ವಿಷಯದಲ್ಲಿ ಸಾಕಷ್ಟು ಭಿನ್ನತೆಯಿದ್ದರೂ ಹೆಣ್ಣು ದೇವತೆಯ ಪೂಜೆಯಲ್ಲಿ ಸಾಕಷ್ಟು ಸಾಮ್ಯವನ್ನು ಪಡೆದುಕೊಂಡಿದ್ದಾರೆ. ಚಂದ್ರಗುತ್ತಿಯ ಎಲ್ಲಮ್ಮ ಇಲ್ಲಿಯ ಈಡಿಗರಿಗೆ ಕುಲದೇವತೆ. ಶುಕ್ರವಾರ ಮಂಗಳವಾರಗಳಲ್ಲಿ ಈ ದೇವತೆಗೆ ಪೂಜೆ ನಡೆಯುತ್ತದೆ. ಚಂದ್ರಗುತ್ತಿಯ ಜಾತ್ರೆಯ ಸಂದರ್ಭಗಳಲ್ಲಿ ಸಾಮಾಜಿಕವಾಗಿ ಹಿಂದುಳಿದ ಜಾತಿಗಳವರಂತೆ ಇವರು ಆಚರಣೆಗಳನ್ನು ಮಾಡುತ್ತಾರೆ. ಹರಕೆ, ಬಲಿ ಬತ್ತಲೆಪೂಜೆ ಇತ್ಯಾದಿ ಆಚರಣೆಗಲ್ಲಿ ಇವರೂ ಭಾಗವಹಿಸುತ್ತಾರೆ. ಇವರು ಚಾರಿತ್ರಿಕವಾಗಿ ದುರ್ಬಲವರ್ಗದೊಂದಿಗೆ ನಿರಂತರವಾಗಿ ಹೊಂದಿರುವ ಸಂಬಂಧಗಳ ಮೇಲೆ ಈ ಆಚರಣೆಗಳು ಬೆಳಕು ಚೆಲ್ಲುತ್ತವೆ. ಅನಂತಮೂರ್ತಿಯವರ "ಬತ್ತಲೆ ಪೂಜೆ ಏಕೆ ಕೂಡದು" ರ್ಗಾ೫ ಪುಸ್ತಕದಲ್ಲಿ ಒಂದು ಲೇಖನದಲ್ಲಿ ಈ ವಿಷಯವನ್ನು ಸಂಸ್ಕೃತಿಕೇಂದ್ರಿತ ಚರ್ಚೆಯಾಗಿ ಚಿಂತಿಸಿದ್ದಾರೆ. ಈ ಆಚರಣೆಗಳೇ ಕೆಲವು ಒಳನೋಟಗಳನ್ನು ಕೊಡುವಂತೆ ಇದಕ್ಕೆ ಒಂದು ಚಾರಿತ್ರಿಕ ಹಿನ್ನೆಲೆಯಿದೆ ಮತ್ತು ಒಂದು ವರ್ಗದ ಕೈವಾಡವಿದೆ.ಈ ಬಗ್ಗೆ ಆಳವಾದ ಸಂಶೋಧನೆ ನಡೆಯಬೇಕಿದೆ. (ವಿವರಕ್ಕೆ -ಕರ್ನಾಟಕದ ಜಾತ್ರೆಗಳು ಸಿ.ಎಸ್ . ಶಿವಕುಮಾರಸ್ವಾಮಿ. ಕನ್ನಡ ಭಾರತಿ. ಬಿ-ಆರ್ .ವಿ).

ದೀಪಾವಳಿ ಹಬ್ಬ ಇವರಲ್ಲಿ ಇಂದು ಪ್ರಮುಖ ಹಬ್ಬವಾಗಿದೆ, ಈ ಸಂದರ್ಭದಲ್ಲಿ ದನ ಬೇದರಿಸುವಕ್ರೀಡೆ, ತುಂಬಾ ಸಾಹಸಮಯ ಮತ್ತು ರೋಚಕವಾದದ್ದು. ಅಂಟಿಕೆ ಪಿಂಟಿಕೆ, ಆಚರಣೆ ಇವರಲ್ಲಿದೆ. ಇನ್ನಿತರೆ ಸಾಹಸಮಯ ಕ್ರೀಡೆಗಳೂ ಇಲ್ಲಿ ಉಳಿದುಕೊಂಡಿದೆ. ಸಾಮೂಹಿಕವಾದ ಉತ್ಪಾದನಾವ್ಯವಸ್ಥೆ - ಕೃಷಿ, ಇಲ್ಲಿರುವುದರಿಂದ ಇತರ ಪ್ರದೇಶಗಳಿಗೆ ಹೋಲಿಸಿದರೆ ಇಲ್ಲಿಯ ದೀವರು ಸ್ವಲ್ಪ ಸುಖಿಗಳೇ ಹೌದು. ಆದರೆ ಈ ಹಿನ್ನೆಲೆಯಲ್ಲಿ ಅವರ ಸಂಘಟನಾತ್ಮಕ ಹೋರಾಟದ ಪಾತ್ರ ಮುಖ್ಯವಾಗಿದೆ ಎನ್ನುವುದು ಗಮನಾರ್ಹ .

ಬಿಲ್ಲವರು: ದಕ್ಷಿಣ ಕನ್ನಡ ಜಿಲ್ಲಾದ್ಯಂತ ವ್ಯಾಪಿಸಿರುವ ಇವರು ಬಹುಸಂಖ್ಯಾತರೂ ಹೌದು. ಭೌಗೋಳಿಕವಾಗಿ ದೀವರಂತೆಯೇ ಇವರ ಪರಿಸರವಿದ್ದರೂ ಸಹ್ಯಾದ್ರಿ ಪರ್ವತ ಶ್ರೇಣಿ ಇವರನ್ನು ಒಂದು ಪ್ರತ್ಯೇಕ ಪ್ರದೇಶವಾಗಿ ವಿಂಗಡಿಸಿ ಬಿಟ್ಟಿದೆ. ಆದ್ದರಿಂದಲೇ ಅವರು ಬಯಲು ಸೀಮೆಯ ಮತ್ತು ಶಿವಮೊಗ್ಗ ಜಿಲ್ಲೆಯ ಈಡಿಗರಿಗಿಂತಾ ತುಂಬಾ ಭಿನ್ನ."ತುಳು" ಇವರ ಮಾತೃಭಾಷೆ. ಆದರೆ ಆಡಳಿತ ಭಾಷೆಯಾಗಿ ಕನ್ನಡ

ಇಲ್ಲಿ ಹೇರಲ್ಪಡುತ್ತಿದೆ. ಬಹು ಹಿಂದಿನಿಂದಲೂ ಈ ಪ್ರದೇಶಕ್ಕೆ ಕರ್ನಾಟಕದ ಬಯಲು ಪ್ರದೇಶದಿಂದ ಸಂಪರ್ಕ ಸಾಧ್ಯವಾಗದಿರುವಂತೆ ಭೌಗೋಳಿಕ ವಾತಾವರಣ ಏರ್ಪಟ್ಟಿದೆ. ಹಾಗಾಗಿ ಇದು ಪಕ್ಕದ ಕೇರಳ ಮತ್ತು ಸಮುದ್ರದಾಚೆಯ ಬ್ರಿಟೀಶರ ಸಂಪರ್ಕಗಳಿಗೆ ಮೊದಲು ತೆರೆದುಕೊಂಡಿತು. ಆದರೂ ಅದರ ಪ್ರಭಾವ ಒಂದು ಮಿತಿಯಲ್ಲಿದೆ.ರಾಜಶಾಹಿ ವ್ಯವಸ್ಥೆಯಲ್ಲಿ ಈ ಭಾಗ ಬೇರೆ ಬೇರೆ ಧರ್ಮದ ರಾಜರ ಆಡಳಿತಕ್ಕೆ ಒಳಪಟ್ಟಿದೆ. ಟಿಪ್ಪು- ಹೈದರ್ , ಬ್ರಿಟೀಶ್ ಇವರ ಆಡಳಿತದ ಸಂದರ್ಭಗಳಲ್ಲಿ ಈವಾತಾರಣ ಸ್ವಲ್ಪ ಪ್ರಭಾವವನ್ನು ಸ್ವೀಕರಿಸಿದೆ. ಇಂದು ಅಲ್ಲಿ ಬಹುಸಂಖ್ಯಾಮಟ್ಟದಲ್ಲಿ ಮುಸ್ಲಿಂ,ಕ್ರೈಸ್ತರು ಇರುವುದನ್ನು ಗಮನಿಸಬಹುದು. ಬಹುತೇಕ ಕ್ರೈಸ್ತ ಮಿಷನರಿಗಳು ಮೊದಲು ತಮ್ಮ ಅಸ್ತಿಭಾರವನ್ನು ಹಾಕಿದ್ದು ಇಲ್ಲಯೇ. ತಮ್ಮ ಧರ್ಮ ಪ್ರಚಾರ ಕಾರ್ಯವನ್ನು ಇಲ್ಲಿ ರಚನಾತ್ಮಕವಾಗಿ ಈ ಸಂದರ್ಭಗಳಲ್ಲಿ ಮಾಡಿದರು. ಮೇಲ್ಕಂಡ ಮಾತಿಗೆ ಪೂರಕವಾದ ಮಾಹಿತಿಯನ್ನು ಶಿವರಾಮಕಾರಂತ ಸಾಹಿತ್ಯಕೃತಿಗಳು ಕೊಡಬಲ್ಲವು. ಉದಾ: ಅವರ "ಚೋಮನದುಡಿ" ಕಾದಂಬರಿಯು, ದಕ್ಷಿಣ ಕನ್ನಡ ಜಿಲ್ಲೆಯ  ಸಾಮಾಜಿಕ ಜೀವನದ ಮೇಲೆ ಸಾಕಷ್ಟು ಒಳನೋಟಗಳನ್ನು ಕೊಡುತ್ತದೆ. "ಚೋಮನ ಮಗ ಗುರವನನ್ನು ಗೇಣಿ ಭೂಮಿಯ ಆಸೆ ತೋರಿಸಿ, ಕ್ರೈಸ್ತನನ್ನಾಗಿ ಮತಾಂತರಿಸುವುದು. ಮತ್ತು ಈ ಸಂಸ್ಥೆಯ ಉದ್ದೇಶ" "ಬಹುಮುಖವಾದದ್ದು"ಎನ್ನುವುದನ್ನು ಕಾರಂತರು ಸೂಚಿಸಿದ್ದಾರೆ.೧) ಧರ್ಮಕ್ಕೆ ಸೇರಿಸಿ ಜನಸಂಖ್ಯೆಯನ್ನು ಹೆಚ್ಚಿಸಿ ಕೊಳ್ಳುವ ಮೂಲಕ ಅವರ ಬೆಂಬಲ ಪಡೆಯುವುದು. ಆಮೂಲಕ ತಮ್ಮ ಸಾಮ್ರಾಜ್ಯವು ಶಾಶ್ವತವಾಗಿ ಇಲ್ಲಿ ಬೇರೂರುವಂತೆ ಮಾಡುವುದು. ಈ ಉದ್ದೇಶಕ್ಕಾಗಿ ಅಧಿಕಾರ ಪಡೆದ ಬ್ರಿಟೀಶ್ ಸರ್ಕಾರ ಉತ್ತಮ ಭೂಮಿಯನ್ನು ಧರ್ಮಕ್ಕೆ ಸೇರಿಸಿಕೊಂಡವರಿಗೆ ಗೇಣಿ ಕೊಡುವುದೆಂದು ಆಸೆ ತೋರಿಸಿದ್ದು.೨). ಅಂಥವರಿಗೆ ರಕ್ಷಣೆ ನೀಡುವುದು ಮತ್ತು ಸಾಮಾಜಿಕವಾಗಿ ಉನ್ನತ ಸ್ಥಾನ ದೊರಕಿಸುವುದು, ಎನ್ನುವ ಕಾರ್ಯಕ್ರಮಗಳು ಈ ಉದ್ದೇಶ ಇಟ್ಟುಕೊಂಡು ರೂಪುಗೊಂಡಂಥವು. ಈ ಉದ್ದೇಶ ವ್ಯಾಪಕ ಬದಲಾವಣೆಯನ್ನು ತಂದಿದೆ. ಅದೇನೇ ಇರಲಿ ಒಟ್ಟು ಇಂದಿನ ಕ್ರೈಸ್ತರಾಗಿರುವ ದ.ಕ. ದವರು ಬಹುತೇಕ ಬಿಲ್ಲವರು. (ಮಾಹಿತಿ ಡಾ|| ಚಂದ್ರ ಪೂಜಾರ್ . ಮುಡಿಪು ಬಂಟ್ವಾಳತಾ||) ಹೊರಗಿನಿಂದ ಬಂದ ಕ್ರೈಸ್ತರಿಗೆ ಬಿಲ್ಲವರ ಪ್ರಭಾವವಾಗಿದ್ದು ಬೇರೆ ಬೇರೆ ವಲಯಗಳಲ್ಲಿ ನಿಜವಾದರೂ ಕ್ರೈಸ್ತರ ಪ್ರಭಾವ ಬಿಲ್ಲವ ಸಮೂಹದ ಮೇಲಾಗಿರುವುದು ಗಮನಾರ್ಹವಾದುದು.

ವಸಾಹತುಶಾಹಿ ಆಡಳಿತ ವ್ಯವಸ್ಥೆ ಬಹುತೇಕ ತನ್ನ ಅಸ್ತಿಭಾರವನ್ನು ಮೊದಲು ಗಟ್ಟಿಗೊಳಿಸಿದ್ದು ಮಂಗಳೂರಿನಲ್ಲೇ. ಅಂದ ಮೇಲೆ ಆಧುನಿಕ ಆಡಳಿತ ಪದ್ಧತಿಯ ಋಣಾತ್ಮಕ ಮತ್ತು ಗುಣಾತ್ಮಕ ಅಂಶಗಳು

ಬಿಲ್ಲವರ ಮೇಲೂ ಆಗಿವೆ. ಈ ಕಾರಣಕ್ಕೆ ಬಿಲ್ಲವರ ಸಮುದಾಯ ಸ್ವಲ್ಪ ಮಟ್ಟಿಗೆ ಛಿದ್ರವಾಯಿತು. ಕಾರಣ, ಕ್ರೈಸ್ತ ಧರ್ಮ ಮತ್ತು ವಸಾಹತು ಶಾಹಿಯ ಪ್ರಭಾವ. ೨). ೨ನೇ ಹಂತದಲ್ಲಿ ಸ್ವಾತಂತ್ರ್ಯ ಚಳುವಳಿಯ ಪ್ರಭಾವ, ಅನಂತರದ ಭೂಮಸೂದೆ ಪ್ರಕರಣ. ಇದರಿಂದ ಬಿಲ್ಲವರ ಆರ್ಥಿಕ ತಳಹದಿಯಲ್ಲೇ ಬದಲಾವಣೆ ಸಾಧ್ಯವಾಯಿತು. ಜಮೀನ್ದಾರಿಕರಲ್ಲಿ ಧಾರ್ಮಿಕ ಸಂಸ್ಥೆಗಳಾದ ಭೂತದಗುಡಿ, ಭೂತಾರಾಧನೆಯ ಹೆಸರಿನಲ್ಲಿ ಕೇಂಧ್ರಿಕೃತವಾದ ಭೂಮಿಗಳು ಗೇಣಿಧಾರರ ಪಾಲಾದವು. ಗೇಣೀದಾರರು ಬಹುತೇಕ ಬಿಲ್ಲವರಾಗಿದ್ದರು. ಹೀಗೆ ವಿಕೇಂದ್ರಿಕರಣವಾದ ಭೂಮಿಯ ಸ್ಥಿತಿಯು ಇಡೀ ಕುಟುಂಬ ಮೇಲೆ ಪ್ರಭಾವ ಬೀರಿತು. ಅಲ್ಲಿಯ ಸಾಂಸ್ಕೃತಿಕ ಆಚರಣೆಗಳ ಕೇಂದ್ರಗಳು ವಿಕೇಂದ್ರೀಕರಣ ಗೊಂಡವು. ವಿಕೇಂದ್ರೀಕರಣವಾದ ಪರಿಣಾಮವಾಗಿ ಆಚರಣೆಗಳು ಅಲ್ಲಿಲ್ಲಿ ವ್ಯಾಪಕವಾದವು. ಸಮೂಹದ, ಅಥವಾ ಊರಿನ ಹಿಡಿತ ಭೂಮಾಲಿಕರ ಕೈತಪ್ಪಿತು. ಮುಂದಿನ ಹಂತಗಳಲ್ಲಿ ತಾನೇ ತಾನಗಿ ಬದಲಾಗುತ್ತಾ ಸಾಗಿತು.

೧). ೭೦ ದಶಕದ ಭೂಹೋರಾಟದ ಘಟನೆ, ಪರಿಣಾಮಗಳು.

೨). ವಸಾಹತು ಆಡಳಿತವ್ಯವಸ್ಥೆಯ ಪರಿಣಾಮ; ಕೈಗಾರಿಕೆಗಳ ಆಗಮನ, ಸಾಮಾಜಿಕ ನ್ಯಾಯದಕಲ್ಪನೆಯು ಬದಲಾಗಿದ್ದು. ಸಾಮಾಜಿಕ ಸ್ಥಾನಮಾನಗಳು ಪಲ್ಲಟವನ್ನು ತಂದಿದ್ದು. (ಇಲ್ಲಿ ಗಮನಿಸಬೇಕಾದುದೆಂದರೆ ವಸಾಹತುಶಾಹಿಯ ಋಣಾತ್ಮಕ ಪರಿಣಾಮಗಳಷ್ಟೇ ಗುಣಾತ್ಮಕ ಪರಿಣಾಮಗಳನ್ನು ಕಾಣಬಹುದು).

೩). ಇಲ್ಲಿಯ ಬಹುಸಂಖ್ಯಾತರು ಬಿಲ್ಲವ ಜನವರ್ಗ.

೪). ಭೌಗೋಳಿಕ ಪರಿಸರ: ಇವುಗಳು ಇಲ್ಲಿನ ಆರ್ಥಿಕ ರಾಜಕೀಯ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಬದಲಿಸಿದವು.

೨ನೇ ಅಧ್ಯಾಯದಲ್ಲಿ ತಿಳಿಸಿರುವಂತೆ ಬಿಲ್ಲವರ ಜೀವನಾವರ್ತನದ ಆಚರಣೆಗಳು ಮತ್ತು ವಾರ್ಷಿಕಾವರ್ತನಗಳಲ್ಲಿ ಬದಲಾವಣೆಗಳಾಗಿವೆ. ಇಲ್ಲಿ ಆಚರಣೆಗಳನ್ನು ಹೆಸರಿಸುವ ಅಗತ್ಯವಿಲ್ಲ. ಕಾರಣ ಹಿಂದಿನ ಅಧ್ಯಾಯಗಳಲ್ಲಿ ಹೆಸರಿಸಲಾಗಿದೆ ೧). ಬದಲಾವಣೆಯ ಮಾತನ್ನು ಚರ್ಚೆಗೆ ಒಳಪಡಿಸಿದಾಗ, ಎಂಥ ಜನವರ್ಗದಲ್ಲಿ ಯಾವ ಪ್ರಮಾಣಗಳಲ್ಲಿ ಯಾಕೆ ಬದಲಾಗಿದೆ ಎನ್ನುವುದನ್ನು ಗುರ್ತಿಸಬೇಕಾದುದು ಮುಖ್ಯ.

ಸಾರಾಸಗಟಾಗಿ ಗುರ್ತಿಸಹೊರಟರೆ ಅದು ಸರಳೀಕರಣವಾಗುತ್ತದೆ. ಈ ಅಧ್ಯಯನದ ವ್ಯಾಪ್ತಿಯೊಳಗಡೆ ಈ ಸಮಗ್ರ ವಿಷಯವನ್ನು ಸೂಕ್ಷ್ಮ ವಿಶ್ಲೇಷಣೆಗೆ ಅಥವಾ ಚರ್ಚೆಗೆ ಒಳಪಡಿಸುವುದು ಸಾಧ್ಯವಿಲ್ಲ. ಆದರೆ ಚರ್ಚೆಗಳಲ್ಲಿ ಈ ವಲಯಗಳನ್ನು ಸ್ಪಷ್ಟ ಮಾಡುವ ಪ್ರಯತ್ನವಿದೆ.

ಬಿಲ್ಲವರಲ್ಲಿ ಅನೇಕ ವರ್ಗಗಳಿವೆ. ಅವರಿಗೆ ಕೆಲವು ವೃತ್ತಿಗಳಿವೆ. ಈ ವೃತ್ತಿಗಳಲ್ಲಿ ಕೆಲವು ನಗರ ಕೇಂದ್ರಿತವೃತ್ತಿ. ಕೆಲವು ಹಳ್ಳಿಕೇಂದ್ರಿತ ವೃತ್ತಿಗಳಾಗಿವೆ. ಹಳ್ಳಿಕೇಂದ್ರಿತ ವೃತ್ತಿಯ ಸ್ವರೂಪಗಳೇ ಬೇರೆ. ನಗರ ಕೇಂದ್ರಿ ಶ್ರಮದ ಸ್ವರೂಪವೇ ಬೇರೆ. ಈ ೨ಬಗೆಯ ಉತ್ಪಾದನಾ ವ್ಯವಸ್ಥೆ ೨ವರ್ಗವನ್ನು ಬೇರೆಬೇರೆ, ರೀತಿಯಲ್ಲಿ ತಮ್ಮ ಬದುಕನ್ನು ರೂಪಿಸಿಕೊಳ್ಳುವಂತೆ ಒತ್ತಾಯಿಸುತ್ತವೆ. ಈ ಒತ್ತಾಯಕ್ಕನುಗುಣವಾದ ಜೀವನಸ್ಥಿತಿ ಅವರದ್ದಾಗಿರುತ್ತದೆ.

ಮೊದಲು ಹಳ್ಳಿ ಕೇಂದ್ರಿತ ಜೀವನ ವಿಧಾನವನ್ನು ನೋಡೋಣ.

**ಹಳ್ಳಿಯ ಬಿಲ್ಲವರ ಸಾಂಸ್ಕೃತಿಕ ಸ್ಥಿತಿಗತಿಗಳು**

ಹಳ್ಳಿಗಳಲ್ಲಿರುವ ಬಿಲ್ಲವರ ವಿಭಿನ್ನವರ್ಗಗಳನ್ನು ಕುರಿತು ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಸ್ಥೂಲವಾಗಿ ಅವುಗಳನ್ನು ಹೀಗೆ ವಿಂಗಡಿಸಬಹುದು.

೧). ಭಾರಿ ಭೂಮಾಲೀಕ ವರ್ಗ.

೨). ಮಧ್ಯಮ ಸ್ಥಿತಿಯ ಭೂಮಾಲೀಕ ವರ್ಗ.

೩). ತುಂಡು ಭೂಮಾಲೀಕ ವರ್ಗ ಮತ್ತು ಮೂರ್ತೆದಾರರು.

೪). ಭೂರಹಿತ ಕೂಲಿಕಾರ್ಮಿಕ ವರ್ಗ.

ಮೊದಲನೇ ವರ್ಗದ ಸಂಖ್ಯೆ ಕಡಮೆ ಒಂದು ಹಳ್ಳಿಗೆ ೨-೩ ಕುಟುಂಬವಿರಬಹುದು. ಆದರೂ ಇಂದಿನ ಸ್ಥಿತಿಯಲ್ಲಿ ಭೂಮಿ ಅವರಿಗೆ ೮-೧೦ ಹೆಕ್ಟರಿಗೂ ಮೀರಿ ಇಲ್ಲ. ಇಂಥ ಸ್ಥಿತಿ ಇರುವವರು ಅಪರೂಪ. ಅವರು ಬಹುತೇಕ ನಗರ ಜೀವನ ಸಂಪರ್ಕ ಪಡೆಯುತ್ತಿರುವವರಾಗಿದ್ದಾರೆ.ಹಳ್ಳಿಯಲ್ಲಿರುವುದು, ಈ ವರ್ಗದವರಿಗೆ, ನಗರದ ಸಂಪರ್ಕ ಸುಲಭಸಾಧ್ಯ. ಜೊತೆಗೆ ಈತನಿಗೆ ತನ್ನದೇ ಆಸಕ್ತಿಗಳಿರುತ್ತವೆ. ೨ನೇ ವರ್ಗದವರು ಇವರಿಗೆ ಬಹುತೇಕ ಗೇಣಿಧಾರರಾಗಿದ್ದವರು ಇಂದು ಈ ಸ್ಥಿತಿಗಳಲ್ಲಿದ್ದಾರೆ. ಇವರಿಗೆ ನಗರದ ಸಂಪರ್ಕ ಮತ್ತು

ಸೌಲಭ್ಯಗಳು ಸ್ವಲ್ಪಮಟ್ಟಿಗೆ ಇರಲು ಸಾಧ್ಯ. ೩ ಮತ್ತು ೪ನೇ ವರ್ಗದವರಿಗೆ ಇದು ಅಪರೂಪದ ಕನಸು.

ಇಂಥ ಸ್ಥಿತಿಯಲ್ಲಿರುವ ಇವರು ಊರಿನ, ಸಾಮಾಜಿಕ ಸಾಂಸ್ಕೃತಿಕ ವಲಯಗಳಲ್ಲಿ ಶ್ರೇಣೀಕೃತವಾಗಿಯೇ ಭಾಗವಹಿಸುತ್ತಾರೆ. ೧ನೇ ವರ್ಗದವರು ಊರಿನ ಭೂತಾರಾಧನೆ, ಯಕ್ಷಗಾನ ಕಲೆ ಮತ್ತು ಸಾಂಸ್ಕೃತಿಕ ಕ್ರೀಡೆಗಳಾದ ಕುಂಬಳ, ಕೋಳಿಯಂಕ, ಮೊದಲಾದ ಆಚರಣೆಗಳಲ್ಲಿ ತೋರುವ ಆಸಕ್ತಿ ಭಿನ್ನವಾದುದು. ಕಾರಣ ನಗರದ ಪ್ರಭಾವ, ಆ ಮೂಲಕ ತನ್ನ ಆಲೋಚನಾ ವಿಧಾನಗಳಲ್ಲಿ ಬದಲಾವಣೆ. ಮತ್ತು ವ್ಯವಹಾರಿಕ ಮನಸ್ಸು ಇವುಗಳು ಹೆಚ್ಚಿನ ಪ್ರಮಾಣದಲ್ಲಿರುತ್ತವೆ. ವಸಾಹತು ಶಾಹಿ ವ್ಯವಸ್ಥೆ ದೇಸೀಯ ಜ್ಞಾನವನ್ನು ಕೀಳಾಗಿ ಕಾಣುವಂತೆ ನಮ್ಮನ್ನು ಪ್ರಚೋದಿಸಿರುವುದು ವ್ಯಾಪಕವಾಗಿದೆ. ಇಂದು ಈ ಹಿನ್ನೆಲೆಯಲ್ಲಿ ಊರಿನ ಸಾಂಸ್ಕೃತಿಕ ಕಾರ್ಯ ಕ್ರಮಗಳು ಮತ್ತು ತಮ್ಮ ಕುಟುಂಬದ ಆಚರಣೆಗಳಲ್ಲಿ ಅನಾಸಕ್ತಿ ಸಹಜವಾಗಿದೆ. ಆಧುನಿಕ ಜ್ಞಾನ ಇದನ್ನು ತಿರಸ್ಕರಿಸಿದೆ. ಜೊತೆಗೆ ಇಂಥವರಿಂದ ಹಳ್ಳಿಗಳಿಗೆ ಹೊಸ ಆಧುನಿಕ ಸೌಲಭ್ಯಗಳು ಕಾಲಿರಿಸಿದರೆ ಅದರ ಪರಿಣಾಮ ಇಡೀ ಹಳ್ಳಿಯ ಮೇಲಾಗುವ ಸಾಧ್ಯತೆಯಿದೆ. ಆದರೂ ಇದು ಈ ವಿಭಾಗದಲ್ಲಿ ಕಡಿಮೆ. ಕಾರಣ ಸಾರಿಗೆ ವ್ಯವಸ್ಥೆ ಹಳ್ಳಿಗಳಲ್ಲಿ ವ್ಯಾಪಕವಾಗಿಲ್ಲ. ಆದರೂ ಮೇಲ್ವರ್ಗದವರ ನಡವಳಿಕೆಗಳು ಇತರರಿಗೆ ತಮ್ಮ ಕೀಳರಿಮೆಯ ಪ್ರವೃತ್ತಿಯಿಂದಾಗಿ ಮಾದರಿಯಾಗಿ ಕಾಣುತ್ತವೆ. ಇತರೆ ವರ್ಗದವರು ತಮ್ಮ ಶಕ್ತ್ಯಾನುಸಾರ ತಮ್ಮ ನಂಬಿಕೆಗಳು ಮತ್ತು ಆಚರಣೆಗಳನ್ನು ಉಳಿಸಿಕೊಂಡಿದ್ದಾರೆ. ಉದಾ: ಭೂರಹಿತ ನೊಬ್ಬನ ಕುಟುಂಬವದವರಿಗೆ ಆರೋಗ್ಯ ಸಮಸ್ಯೆ ಬಂದರೆ ನಗರದ ಆಸ್ಪತ್ರೆ ಸೌಲಭ್ಯ ಪಡೆವುದು ಕಷ್ಟ. ತಾನು ಹಿಂದಿನಿಂದ ನಂಬಿದ ಧೈವ ಭೂತಗಳಿಗೆ ಮೊರೆಹೋಗುತ್ತಾನೆ. ತನಗೆ ನ್ಯಾಯ ಬೇಕಾದರೆ, ಹಳ್ಳಿಯ ಶ್ರೀಮಂತನಲ್ಲಿಗೆ ಬರುತ್ತಾನೆ. ಕಾರಣ ಕೋರ್ಟಿಗೆ ಕೊಡಲು ಸಾಧ್ಯವಿಲ್ಲ. ಜೊತೆಗೆ ಆಧುನಿಕ ಜ್ಞಾನ ಇವನಿಗೆ ಕಡಮೆ ಸಾಧ್ಯ. ಶಿಕ್ಷಣ ಇತ್ಯಾದಿಗಳು ಇವನಿಗೆ ಸಾಧ್ಯವಾಗದಿರಬಹುದು. ಹೀಗೆ ಆಯಾವರ್ಗದ ಆರ್ಥಿಕ ಸ್ಥಿತಿಗತಿಗಳಿಗೆ ಅನುಸಾರವಾಗಿ ನಂಬಿಕೆಗಳು ಹಳ್ಳಿಯ ಬಿಲ್ಲವರುಗಳಲ್ಲಿ ಉಳಿದು ಕೊಂಡಿವೆ. ಇಂಥವರಲ್ಲಿ ಬಹುತೇಕ ಊಳಿಗಮಾನ್ಯ ವ್ಯವಸ್ಥೆಯ ಆಚರಣೆಗಳಾದ ಭೂತಾರಾಧನೆ, ಮದುವೆಯ ಸಂಪ್ರದಾಯಗಳು ಆಚರಣೆಗಳು ಗಟ್ಟಿಯಾಗಿಯೇ ಉಳಿದು ಕೊಂಡಿವೆ. ಈ ಕಾರಣ ಇದಕ್ಕೆ ಪರ್ಯಾಯ ಸ್ಥಿತಿ ರೂಪಿಸಿ ಕೊಳ್ಳಲು ಅವರಿಂದ ಸಾಧ್ಯವೂ ಇಲ್ಲ. ಆದರೆ ಆಧುನಿಕ ವ್ಯವಸ್ಥೆ ಇಂದು ಹಳ್ಳಿಗಳ ಮೇಲೆ ಬೀರಿರುವ ಪ್ರಭಾವ ಅಲ್ಪಪ್ರಮಾಣದಲ್ಲಿದೆ. ಕಷ್ಟದಲ್ಲಿ ಶಿಕ್ಷಣ ಪಡೆದ ದುರ್ಬಲವರ್ಗದವರು ಇಂದು ಎಲ್ಲ ದೃಷ್ಟಿಯಿಂದ ತೂಗುಯ್ಯಾಲೆ ಸ್ಥಿತಿಯಲ್ಲಿರುವಂತೆ ಮಾಡಿದೆ. ಇವರ ಸ್ಥಿತಿಯೇ ಬೇರೆ.

ನಗರಕೇಂದ್ರಿತ ಬಿಲ್ಲವರು: ನಗರದ ಜೀವನ ವಿಧಾನಗಳು ತುಂಬಾ ವಿಚಿತ್ರವಾದ ಸ್ಥಿತಿಗೆ ಹಳ್ಳಿಯ ಜನರನ್ನು ಒಳಪಡಿಸುತ್ತಿದೆ. ಇದು ಅವರನ್ನು ಅನುಕ್ರಮವಾಗಿ ಆರ್ಥಿಕ ಸಾಮಜಿಕ ಸಾಂಸ್ಕೃತಿಕ ವಲಯಗಳಲ್ಲಿ ವಿಚಿತ್ರವಾದ ಸ್ಥಿತಿಗೆ ತಲುಪಿಸಿದೆ. ಹಳ್ಳಿಗಿಂತ ತುಂಬಾ ಸಂಕೀರ್ಣವಾದ ವರ್ಗವ್ಯವಸ್ಥೆ ಮಂಗಳೂರನ್ನೂ ಸೇರಿದಂತೆ ಇತರೇ ತಾಲ್ಲೂಕು ಕೇಂದ್ರಗಳ ನಗರಗಳಲ್ಲದೆ ತಾಲ್ಲೂಕು ಕೇಂದ್ರಗಳೆಲ್ಲವೂ ನಗರದ ಪೂರ್ಣ ಲಕ್ಷಣಗಳನ್ನು ಒಳಗೊಂಡಿಲ್ಲವಾದರೂ ನಗರದಲಕ್ಷಣಗಳನ್ನು ಒಳಗೊಂಡಿದೆ. ವಿಭಿನ್ನವಾದ ಕೈಗಾರಿಕೆಗಳು, ಚಿಕ್ಕ ಪ್ರಮಾಣದಿಂದ ದೊಡ್ಡಪ್ರಮಾಣದವರೆಗೂ ಹರಡಿಕೊಂಡಿವೆ. ವಿಶಾಲವಾದ, ನಗರ ಹೆಚ್ಚು ಸಾಂದ್ರತೆಯುಳ್ಳ ಜನಸಂಖ್ಯೆ.ವಿಭಿನ್ನ ಧರ್ಮಗಳ ಜನ, ಇತ್ಯಾದಿ ದೃಷ್ಟಿಯಿಂದ ಮಂಗಳೂರು ಬೃಹತ್ ನಗರವಾಗುವ ಪ್ರಕ್ರಿಯೆಯಲ್ಲಿದೆ. ನಗರದ ಪ್ರಮುಖ ಆರ್ಥಿಕ ಚಟುವಟಿಕೆಗಳಾದ ಕಾರ್ಖಾನೆಗಳು ವ್ಯಾಪಾರ, ಉದ್ದಿಮೆಗಳು ಎಲ್ಲ ಅಗತ್ಯಗಳಿಗೆ ಅನುಗುಣವಾಗಿ ನಿರ್ಮಾಣ ಗೊಂಡಿವೆ. ಇಂತಹ ನಗರದಲ್ಲಿ ಜೀವನ ಯಾಂತ್ರಿಕವಾಗಿರುತ್ತದೆ. ಇಲ್ಲಿಯ ಜನರನ್ನು ೫ ವರ್ಗಗಳಾಗಿ ವಿಂಗಡಿಸಿ ಕೊಳ್ಳಬಹುದು.

೧). ಬಂಡವಾಳ ಶಾಹಿವರ್ಗ.

೨). ಮೇಲ್ಮಧ್ಯಮ ವರ್ಗ.

೩). ಮಧ್ಯಮವರ್ಗ.

೪). ಕೂಲಿಕಾರ್ಮಿಕರು.

೫). ಉದ್ಯೋಗ ರಹಿತ ನಿರ್ಗತಿಕರು.

ಪ್ರಾಚೀನ ಕಾಲಗಳಿಂದಲೂ ನಗರದ ಅಸ್ತಿತ್ವ ಭಾರತದಲ್ಲಿತ್ತು ಎನ್ನುವುದು ಸ್ಪಷ್ಟ. ಆದರೆ ಇಂಥನಗರಗಳು ಹಳ್ಳಿಯ ಜೀವನ ವಿಧಾನಗಳಿಂದ ಪ್ರಭಾವಗೊಂಡಂಥವು. ಉದಾ: ಅಯೋಧ್ಯೆ ಕಾಶಿ, ಹಸ್ತಿನಾವತಿ ಇತ್ಯಾದಿ. ಈ ನಗರದ ಜೀವನ ಮೌಲ್ಯಗಳು ಹಳ್ಳಿಯಿಂದಲೇ ಪ್ರಭಾವಿತವಾದವುಗಳು. ನಗರದ ಅಸ್ತಿತ್ವದ ಮೂಲಬೇರು ಹಳ್ಳಿಯಲ್ಲಿತ್ತು. ಆದರೆ ಇಂದಿನ ನಗರಗಳ ಅಸ್ತಿತ್ವ ಬೇರೆತರಹದ್ದು. ಇವುಗಳು ವಸಾಹತು ಶಾಹಿಮೌಲ್ಯಗಳನ್ನಾದರಿಸಿದವುಗಳು. ಹಳ್ಳಿಯಿಂದ ಪ್ರಭಾವಿತವಾಗುತ್ತಿದ್ದ ನಗರದ ಬೆಳವಣಿಗೆ ಭಾರತದಲ್ಲಿತ್ತು, ವಸಾಹತು ನಗರಕಲ್ಪನೆ ಇದಕ್ಕೆ ಧೂಮಕೇತುವಿನಂತೆ ಮಧ್ಯದಲ್ಲಿ ಎರಗಿತು. ಅದು ತನ್ನ ಪ್ರಭಾವವನ್ನು ಭಾರತಾದ್ಯಂತ ನಗರಗಳಿಗೆ ಪ್ರಸಾರಮಾಡುವಲ್ಲಿ ಯಶಸ್ವಿಯಾಯಿತು. ರಾಜಕೀಯದ ಮೂಲಕ ಎಲ್ಲಾವಲಯಗಳ ಹಿಡಿತವನ್ನಿಟ್ಟುಕೊಂಡ ಅವರು ಇದನ್ನು ರಚನಾತ್ಮಕವಾಗಿ ಮಾಡಿದರು. ಕರ್ನಾಟಕದಲ್ಲಿ ಮಂಗಳೂರು ಮೊದಲಿಗೆ

ಬ್ರಿಟಿಶ್ ರ ಪ್ರಭಾವಕ್ಕೊಳಗಾದ ನಗರ. ಅಲ್ಲಿಯೇ ಬಂದರು ಇದ್ದುದ್ದರಿಂದ ವ್ಯಾಪಾರ, ಉದ್ದಿಮೆ, ಆಡಳಿತ ಕೇಂದ್ರವಾಗಿ ಅಲ್ಲಿ ಹೆಚ್ಚು ತಳ ಊರಲು ಸಾಧ್ಯವಾಯಿತು. ಇದರ ಪರಿಣಾಮವಾಗಿ ಮಂಗಳೂರಿನ ಮತ್ತಿತರ ಬಹುತೇಕ ನಿವಾಸಿಗಳು ಸೇರಿದಂತೆ ಕ್ರೈಸ್ತರಾದರು. ಈ ನಗರ ಭಾರತದ ದೇಸೀಯೇ ಜ್ಞಾನ ಪರಂಪರೆಯನ್ನು ಕೀಳಾಗಿ ಕಾಣುವ ನಗರವಾಗಿ ಮಾರ್ಪಡಲು ಸಾಧ್ಯವಾಯಿತು. ಹಾಗಾಗಿ ಮುಂದಿನ ಬೆಳವಣಿಗೆಗಳಲ್ಲಿ ನಗರಕ್ಕೆ ವಲಸೆಹೋದ, ಹಳ್ಳಿಯ ಭೂಮಾಲೀಕರು, ನಗರವಾಸಿಗಳಾಗಿ ಬಂಡವಾಳ ಶಾಹಿಗಳಾದರು. ಹಳ್ಳಿಯಿಂದ ವಲಸೆ ಹೋದ ನಿರ್ಗತಿಕ ಕೂಲಿಕಾರ್ಮಿಕರು ಬಂಡವಾಳಶಾಹಿ ವ್ಯವಸ್ಥೆಯೊಳಗಡೆ ಕಾರ್ಖಾನೆಗಳಲ್ಲಿ ಮತ್ತಿತರವಲಯಗಳಲ್ಲಿ ಕೂಲಿ ಕಾರ್ಮಿಕರಾದರು. ಹಳ್ಳಿಯಿಂದ ಶಿಕ್ಷಣ ಪಡೆದ ಯುವಕರು ನಗರಗಳಲ್ಲಿ ನೌಕರಿ ಪಡೆದು ನೆಲೆಯೂರಿದರು ಇವರು ಮಧ್ಯಮ ವರ್ಗದವರಾದರು. ಹಳ್ಳಿಯ ಮತ್ತು ನಗರದ ಶ್ರೀಮಂತ ಕುಟುಂಬದವರು ಉನ್ನತ ಶಿಕ್ಷಣ ಪಡೆದು ಉನ್ನತ ನೌಕರಿಗಳನ್ನು ಪಡೆದು ಮೇಲ್ಮಧ್ಯಮ ವರ್ಗದವಾರಾದರು. ಇದಲ್ಲದೆ ಇಂದಿಗೂ ನಗರಗಳಲ್ಲಿ ನಿರುದ್ಯೋಗಿಗಳಾದ ನಿರ್ಗತಿಕರಿದ್ದಾರೆ. ಇವರು ಕೊಳಚೆ ಪ್ರದೇಶದ ನಿವಾಸಿಗಳು. ಇದಿಷ್ಟು ವರ್ಗ ವಿರುವ ನಗರದ ಜನತೆಗೆ ಆಯಾ ವರ್ಗನುಸಾರವಾದ ಜೀವನದ ಸ್ಥಾನಮಾನಗಳಿರುತ್ತವೆ. ಈಸ್ಥಾನಮಾನಗಳಿಗೆ ಅನುಸಾರವಾಗಿ ಅವರ ಸಾಮಾಜಿಕ, ಸಾಂಸ್ಕೃತಿಕ ಬದುಕು ನಿರ್ಧಾರವಾಗುತ್ತವೆ. ಮತ್ತು ಬದಲಾವಣೆಗೊಳ್ಳುತ್ತಿರುತ್ತವೆ. ಜೊತೆಗೆ ಸಂಕೀರ್ಣದ ಸ್ವರೂಪವನ್ನು ಪಡೆದು ಕೊಳ್ಳುತ್ತಿರುತ್ತವೆ.

ಹಳ್ಳಿಯಿಂದ ನಗರಕ್ಕೆ ಬಂದು ಬಂಡವಾಳ ಶಾಹಿಗಳಾದವರ ಸಾಂಸ್ಕೃತಿಕ ಜೀವನದ ಮತ್ತು ಆಚರಣೆಯ ಸ್ವರೂಪ ವಿಚಿತ್ರವಾದುದು.ಅವರಿಗೆ ವಿಪರೀತ ಸಂಪಾದನೆಯಾಗಿರುತ್ತದೆ. ಈ ಸಂಪಾದನೆಯ ಕೇಂದ್ರಿಕರಣಒಂದು ವಿಧದಲ್ಲಿ ಅವರಿಗೆ ಬೇರೆಬೇರೆ ಭಯಗಳನ್ನು ಹುಟ್ಟು ಹಾಕಬಹುದು. ವಿವಿಧವರ್ಗದ ಜನರು ಅವರ ಮೇಲೆ ಗಮನ ಕೇಂದ್ರಿಕರಿಸಿರುತ್ತಾರೆ. ಸರ್ಕಾರದ ಕಣ್ಣಿರುತ್ತದೆ. ಈ ಭಯ ಅವರನ್ನು ಮತ್ತೊಂದು ರೀತಿಯ ತಂತ್ರ ರೂಪಿಸಲು ಪ್ರಚೋದಿಸುತ್ತದೆ. ಈತಂತ್ರದ ಉದ್ದೇಶ, ತನ್ನ ಮತ್ತು ತನ್ನ ಸಂಪನ್ಮೂಲದ ಮೇಲಿರುವ ಜನರ ಗಮನವನ್ನು ಬೇರೆಡೆಗೆ ತಿರುಗಿಸಿ ತನ್ನನ್ನು ಮತ್ತು ಸಂಪತ್ತನ್ನು ಆವಮೂಲಕ ಪ್ರತಿಷ್ಠೆಯನ್ನು ರಕ್ಷಿಸಿಕೊಳ್ಳುವುದಾಗಿರುತ್ತದೆ. ಇದರ ಪರಿಣಾಮದ ಫಲಶೃತಿಯಾಗಿ ಅವರು ಹಳ್ಳಿಗಳಲ್ಲಿ (ತಮ್ಮ ಜಮೀನು ಇರುವ ಹಳ್ಳಿಗಳು) ನಗರಗಳಲ್ಲಿ (ತಮ್ಮ ಕಾರ್ಖಾನೆಗಳಿರುವ ಸ್ಥಳ) ವ್ಯಾಪಾರಿಕೇಂದ್ರಗಳಲ್ಲಿ -ಬಸ್ ನಿಲ್ದಾಣದ ಸ್ಥಳಗಳಲ್ಲಿ ದೇವಾಲಯಗಳನ್ನು ಕಟ್ಟಿಸುವುದು, ಭೂತಾರಾಧನೆಯಲ್ಲಿ ತಾವು ಭಕ್ತರಂತೆ ವರ್ತಿಸುವುದು

ಇತ್ಯಾದಿಗಳು ಪ್ರಾರಂಭವಾಗಿವೆ. ಇಂದು ದ.ಕ. ದಲ್ಲಿ. ಭಾರಿ ಉದ್ದಿಮೆದಾರರು ಹೋಟೆಲ್ ಮಾಲೀಕರು, ಈ ಕೆಲಸಗಳನ್ನು ರಚನಾತ್ಮಕವಾಗಿ ಮಾಡುತ್ತಿದ್ದಾರೆ. ಇದರಲ್ಲಿ ಬಿಲ್ಲವರ ಪಾಲೂ ಕಡಮೆಯಿಲ್ಲ. ಬಿಲ್ಲವರ ಅಸೋಸಿಯೇಷನ್ ಇಂದು ಒಂದು ಪ್ರತಿಷ್ಠಿತ ಸಂಘವಾಗಿ ಬೆಳೆದಿದೆ. ಪ್ರತಿಷ್ಠಿತ ಬಿಲ್ಲವರು ಇದರ ಮೂಲಕ ಮೇಲಿನ ರೀತಿಯ ಕೆಲಸಗಳನ್ನು ಮಾಡಿಸುತ್ತಾರೆ. ಹಾಗೆಯೇ ಯಕ್ಷಗಾನ ಮೊದಲಾದ ಕಲಾಪ್ರದರ್ಶನಕ್ಕೆ ಹಣ ಬರುತ್ತಿದೆ. (ಡಾ| ಕೆ. ಚಿನ್ನಪ್ಪಗೌಡರು ಭೂತಾರಾಧನೆ ಎನ್ನುವ ಗ್ರಂಥಗಳಲ್ಲಿ ಇಂಥ ಪ್ರಭಾವ, ಬದಲಾವಣೆಗಳನ್ನು ಗುರುತಿಸುವಲ್ಲಿ ಉತ್ತಮ ಪ್ರಯತ್ನ ಮಾಡಿದ್ದಾರೆ. ಅಷ್ಟಲ್ಲದೆ ಬೇರೆ ಬಗೆಯಲ್ಲೂ ಆಲೋಚಿಸಲು ಸಾಧ್ಯವಿದೆ. (ವಿವರಕ್ಕೆ ನೋಡಿ ಭೂತಾರಾಧನೆ, ಒಂದು ಅಧ್ಯಯನ,ಡಾ|| ಕೆ. ಚಿನ್ನಪ್ಪಗೌಡ. ಪು. ೨೫೯-೨೪೮-೨೯೦ ಮುದಿಪು ಪ್ರಕಾಶನ. ಮನಸಗಂಗೋತ್ರಿ)). ಹೀಗೆ ಬೇರೆ ಜಾತಿಯ ಸಂಘಗಳ ಮೂಲಕ ಭೂತಾರಾಧನೆ ಮೊದಲಾದವುಗಳು ನಡೆಯುತ್ತಿವೆ. ಅಂದರೆ ಇದರ ಹಿಂದೆ ವ್ಯವಹಾರಿಕ ಉದ್ದೇಶಗಳಿವೆ ಎನ್ನುವುದು ಸ್ಪಷ್ಟ. ಮದುವೆ ಮೊದಲಾದ ಆಚರಣೆಗಳಲ್ಲಿ ಹಳೆಯ ಸೊಗಡು ಮಾಯವಾಗಿರುತ್ತವೆ. ನಗರದ ಫ್ಯಾಷನ್ ಗಳು ವೈಭವವಾದ, ಆಕರ್ಷಕವಾದ ವಸ್ತುಗಳು ಸ್ಥಾನ ಪಡೆದು ಕೊಂಡಿವೆ.

೨ ನಗರದ ಮಧ್ಯಮ ವರ್ಗದವರ ಸ್ಥಿತಿ ವಿಚಿತ್ರವಾದುದು ಹಳ್ಳಿಯಿಂದ ನಗರಕ್ಕೆ ವಲಸೆ ಬಂದವರು ಮೊದಮೊದಲು ತಮ್ಮ ಆಚರಣೆಗಳಿಗೆ ಗಮನ ಕೊಡುತ್ತಾರೆ. ಕಾರಣ ಹಳ್ಳಿಯ ಸಂಸ್ಕೃತಿಯ ಪ್ರಭಾವ ಅವರನ್ನು ಅಷ್ಟುಸುಲಭವಾಗಿ ಬಿಡಲಾರದು.ಅವುಗಳು ಅವರ ಸುಪ್ತಾವಸ್ಥೆಯಲ್ಲಿದ್ದು ಕಾಡಿಸುತ್ತಿರುತ್ತವೆ. ದಿನನಿತ್ಯದ ಬಿಡುವಿಲ್ಲದ ಕೆಲಸ, ಸಮಯಕ್ಕೆ ಅಂಟಿಕೊಂಡ ಜೀವನ, ತೀರಾ ಯಾಂತ್ರಿಕವಾಗುತ್ತದೆ. ವಿವಿಧ ಪ್ರದೇಶದಿಂದ ಬಂದು ನೆಲೆಯೂರಿದ ಈ ಜನರಲ್ಲಿ ಸಾಮೂಹಿಕ ಸಂಬಂಧಗಳಿರುವುದಿಲ್ಲ, ಅದು ಸಾಧ್ಯವೂ ಇಲ್ಲ. ಅಕ್ಕಪಕ್ಕದವರು ಕೂಡ ಪರಸ್ಪರರು ಅಪರಿಚಿತರು. ಪ್ರತಿಯೊಬ್ಬರೂ ಅವರವರ ಕೆಲಸಗಳಲ್ಲಿ ಯಂತ್ರಗಳಂತೆ ತೊಡಗಿರುತ್ತಾರೆ. ಬಿಡುವಿನ ವೇಳೆಯಲ್ಲಿ ಅನಾಥರಂತೆ ತಮ್ಮ ಮನೆಯಲ್ಲಿ ಕಳೆಯಬೇಕು. ಈ ಸ್ಥಿತಿ ವ್ಯಕ್ತಿ ಕೇಂದ್ರಿತ ಆಲೋಚನೆಗೆ ಒತ್ತಾಯಿಸುತ್ತದೆ. ವ್ಯಕ್ತಿ ಸಿನಿಕವಾಗುತ್ತಾನೆ. ಸಾಮೂಹಿಕ ಜೀವನದಿಂದ ವಿಮುಖನಾಗಿರುತ್ತಾನೆ. ಸಾಮೂಹಿಕ ಜೀವನದಿಂದ ವಿಮುಖನಾಗಿರುತ್ತಾನೆ. ಅಂತರ್ಮುಖಿಯಾಗುತ್ತಾನೆ. ಇಂಥವರ ಕುಟುಂಬ ಕೂಡ ಮೂಲದ ಬೇರನ್ನೂ ಕಳಚಿ ಕೊಂಡು, ಹೊಸ ವ್ಯವಸ್ಥೆಗೆ ಸಂಪೂರ್ಣ ಹೊಂದಿಕೊಳ್ಳಲೂ ಆಗದ ಒಂದು ಬಗೆಯ ವಿಚಿತ್ರ ಸ್ಥಿತಿಯನ್ನು ಅನುಭವಿಸುತ್ತಾನೆ. ಬಂಡವಾಳಶಾಹಿ ಸಂಸ್ಕೃತಿಯ ಹೊಸ ಆಕರ್ಷಣೆಗಳು ಈ ವರ್ಗದ ಕನಸಾಗಿರುತ್ತವೆ. ಮೊದಲೇ ತಿಳಿಸದಂತೆ ಹಳ್ಳಿಗಳ ಮೌಲ್ಯಗಳನ್ನು

ನಗರದಲ್ಲಿ ಕೀಳಾಗಿ ಕಾಣಲಾಗುತ್ತದೆ. ಈ ಕಾರಣಕ್ಕೆ ಈ ಬಗೆಯ ಆಚರಣೆಗಳು, ಮೌಲ್ಯಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತವೆ. ಆದರೂ ಒಂದು ಬಗೆಯ ಅನಾಥ ಸ್ಥಿತಿ ಇವರನ್ನು ಹಿಂಸಾತ್ಮಕವಾಗಿ ಕಾಡುತ್ತದೆ. ನಂಬಿಕೆಯಿಲ್ಲದಿದ್ದರೂ ಇಂಥ ಆಚರಣೆಗಳನ್ನು ಮಾನಸಿಕ ಜಂಜಟಗಳ ಬಿಡುಗಡೆಗಾಗಿ ಆಚರಿಸುತ್ತಾರೆ. ಇವು ತಾತ್ಕಾಲಿಕವಾಗಿ ಇವರಿಗೆ ಮುಕ್ತಿ ಕೊಡಬಹುದು. ನಗರದ ಜ್ಞಾನ ಈಮೌಲ್ಯ ಮತ್ತು ಆಚರಣೆಗಳನ್ನು ಮೌಢ್ಯಗಳೆಂದು ತಿರಸ್ಕರಿಸುವಂತೆ ಪ್ರಚೋದಿಸುವುದೇ ಇದಕ್ಕೆ ಬಹುಮುಖ್ಯವಾದ ಕಾರಣ.

ಇನ್ನು ಕೂಲಿಕಾರ್ಮಿಕರು ಮತ್ತು ನಿರ್ಗತಿಕರು ಆರ್ಥಿಕವಾಗಿ ತಮ್ಮ ಭದ್ರತೆಗಾಗಿ ತಡಕಾಡುತ್ತಿರುತ್ತಾರೆ. ದಿನದ ಊಟಕ್ಕಾಗಿ ಹೋರಾಡುವ ಇವರಿಗೆ ಉಳಿದಂತೆ ಈ ಬಗ್ಗೆ ಆಲೋಚಿಸಲು ಸಮಯವೆಲ್ಲಿ? ಇಂಥ ಆಚರಣೆಗಳಿಗೆ ಅಗತ್ಯವಾದ ಖರ್ಚನ್ನು ಭರಿಸುವುದಾದರೂ ಎಲ್ಲಿಂದ. ಮುಖ್ಯವಾಗಿ ಹಳ್ಳಿಯಂತೆ ನಗರವು ಸಂಪ್ರದಾಯಕರವಾದ ಯಾವುದೇ ಜೀವನಾವರ್ತನ, ವಾರ್ಷಿಕಾವರ್ತನದ ಆಚರಣೆಗಳನ್ನು ಅಪೇಕ್ಷಿಸುವುದೂ ಇಲ್ಲ. ಒತ್ತಾಯಿಸುವುದೂ ಇಲ್ಲ. ಏಕೆಂದರೆ ಇಲ್ಲಿ ವ್ಯಕ್ತಿ ಕೇಂದ್ರಿತ ಜೀವನ ಅಸ್ತಿತ್ವದಲ್ಲಿರುತ್ತದೆ. ಈ ಆಚರಣೆಗಳು ಸಾಮೂಹಿಕ ಸಂಬಂಧಗಳನ್ನು ರೂಪಿಸಿಕೊಳ್ಳುವಂತೆ ಒತ್ತಾಯಿಸುತ್ತವೆ. ಈ ಸ್ಥಿತಿಯಲ್ಲಿ ಪರಸ್ಪರ ಇವೆರಡೂ ವಿಧಾನಗಳು ಮುಖಾಮುಖಿಯಾಗುತ್ತವೆ. ಅಕ್ಕಪಕ್ಕದ ಮನೆಯವರು ಪರಿಚಯವಿಲ್ಲದಿರುವಾಗ, ಸಾಮೂಹಿಕವಾಗಿ ಯಾವುದೇ ಆಚರಣೆಗಳನ್ನು ಆಚರಿಸುವುದು ಹೇಗೆ? ಹೀಗಾಗಿ ನಗರಗಳಲ್ಲಿ ಭೂತಾರಾಧನೆ, ಯಕ್ಷಗಾನಗಳು ಕೇವಲ ಪ್ರದರ್ಶಿತ ಕಲೆಗಳಾಗಿವೆ. ಈ ಪ್ರದರ್ಶನಕ್ಕೆ ಹಣವಂತರು ಪ್ರೋತ್ಸಾಹಿಸುತ್ತಾರೆ. ಇಂದು ಈ ಕಾರಣಕ್ಕೆ ಈ ಕಲೆಗಳು ಸಾಂಪ್ರದಾಯಿಕ ಪರಿಕರಗಳು ಮತ್ತು ಶೈಲಿಯನ್ನು ಒಂದೊಂದಾಗಿ ಬಿಡುತ್ತಾ ಆಧುನಿಕ ಶೈಲಿ ಮತ್ತು ಪರಿಕರಗಳನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಹಳ್ಳಿಗಳಲ್ಲಿ ಮಾತ್ರ ಇವಕ್ಕೆ ಇನ್ನೂ ಜೀವವಿದೆ. ಏಕೆಂದರೆ ಅಲ್ಲಿಯ ಸ್ಥಿತಿ ಹಾಗಿದೆ. ಬಹುಸಂಖ್ಯಾತ ದುಡಿವ ಜನ ತಮ್ಮ ಕಷ್ಟ ಸುಖ ಪರಿಹಾರಕ್ಕೆ, ಮನೋರಂಜನೆಗೆ ಇವುಗಳಿಗೆ ಅಖ ಬಿದ್ದಿದ್ದಾರೆ. ಆಧುನಿಕ ಪರಿಕಾರಗಳಾದ ಟಿ.ವಿ., ರೇಡಿಯೋಗಳು ಇವರಿಗೆ ಕಷ್ಟಲಭ್ಯ. ಸಿನಿಮಾಗಳೂ ಇವರಿಗೆ ಕಷ್ಟವೇ. ನಗರಕ್ಕೆ ಬಂದು ನೋಡಲು ಇರುವ ಆರ್ಥಿಕ ಮತ್ತು ಭೌಗೋಳಿಕ ದುರವಸ್ಥೆ ಕೂಡ ಇದಕ್ಕೆ ಕಾರಣವಿರಬಹುದು.

ನಗರದ ಕೂಲಿಕಾರ್ಮಿಕರಲ್ಲಿ ಮೊದಮೊದಲು ಸಾಮೂಹಿಕ ಜೀವನ ಸಾಧ್ಯವಿತ್ತು ಆಧುನಿಕ ತಂತ್ರಜ್ಞಾನ ಈಗ ಶ್ರಮಿಕನನ್ನು ಇಂಥ ಜೀವನದಿಂದ ಬೇರ್ಪಡಿಸುವ ಮಾದರಿಯದ್ದಾಗಿದೆ. ಇಲ್ಲಿ ವ್ಯಕ್ತಿ ಶ್ರಮಕ್ಕಿಂತ ಯಂತ್ರದ ಕೆಲಸವೇ ಮುಖ್ಯವಾಗಿರುವುದು ಇದಕ್ಕೆ ಕಾರಣ. ಹೀಗಾಗಿ ಇವರು ಇಂದು ಸಮೂಹ ಜೀವನದಿಂದ

ಛಿದ್ರವಾಗಿದ್ದಾರೆ. ಹಾಗಾಗಿ ದೇಸೀಯ ಸಾಂಸ್ಕೃತಿಕ ಆಚರಣೆಗಳಿಗೆ ಅಸ್ತಿತ್ವವಿಲ್ಲ. ನಗರದಲ್ಲಿ ಹಬ್ಬ, ಹರಿದಿನ, ಮದುವೆ, ಮುಂಜಿ, ಹುಟ್ಟು ಸಾವು, ಋತುಮತಿಯ ಸಂದರ್ಭಗಳು ಆಚರಣೆಯಲ್ಲಿ ತಮ್ಮ ಅಸ್ತಿತ್ವ ಕಳೆದುಕೊಳ್ಳುತ್ತಿವೆ. ಬಂಡವಾಳ ಶಾಹಿಯು ಆಕರ್ಷಕವಾದ ಸಂಸ್ಕೃತಿಯ ಆಸ್ಥಾನವನ್ನು ಪಡೆದುಕೊಂಡಿದೆ. ಅಲ್ಲಿಯವರು ಅನಿವಾರ್ಯವಾಗಿ ಈ ಸ್ಥಿತಿಯನ್ನು ಸಹಜವೆಂಬಂತೆ ಒಪ್ಪಿಕೊಂಡಿದ್ದಾರೆ. ಆದರೆ ಹಳ್ಳಿಗಳಲ್ಲಿ ಇನ್ನೂ ಇವುಗಳ ಸೊಗಡು ಜೀವಂತವಾಗಿದೆ. ಇದಕ್ಕೆ ಅಲ್ಲಿಯ ಉತ್ಪಾದನಾ ವಿಧಾನ ಮತ್ತು ಭೌಗೋಲಿಕ ಪರಿಸರ ಬಹುಮುಖ್ಯಕಾರಣ.

ಯಾವುದೇ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ, ಜೀವನ ಅಲ್ಲಿನ ಉತ್ಪಾದನಾ ವಿಧಾನ, ಮತ್ತು ಹೊರಗಿನ ಪ್ರಭಾವಗಳೆರೆಡರಿಂದಲೂ ಹಾಗೂ ಅಂತರಿಕ ಬೆಳವಣಿಗೆಯಿಂದಲೂ ನಿರ್ಧಾರವಾಗುತ್ತಿರುತ್ತವೆ ಎನ್ನುವುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಆದರೆ ಇದು ಸ್ಥೂಲ ಮತ್ತು ಸೀಮಿತ ಅಧ್ಯಯನವೆನ್ನುವ ಎಚ್ಚರಿಕೆಯೂ ಇದೆ.

ಇಂದು ಒಟ್ಟು ಈಡಿಗರ ಸಾಂಸ್ಕೃತಿಕ ಜೀವನದ ಬಗ್ಗೆ ಚರ್ಚಿಸುವುದಾದರೆ, ವೈದಿಕೀಕರಣದ ಪ್ರಕ್ರಿಯೆ ಮತ್ತು ಆರ್ಯ ಈಡಿಗ ಸಂಘದ ಪ್ರಭಾವಗಳನ್ನು ಬಿಟ್ಟು ಮಾತನಾಡುವುದು ಸಾಧ್ಯವಾಗುದು. ೧೯೩೫ನೇ ಆರ್ಯ ಈಡಿಗರ ಸಮ್ಮೇಳನದಲ್ಲಿ ನಾರಾಯಣ ಗುರುವನ್ನು ಇಡೀ ಈಡಿಗರ ಗುರುವೆಂದು ಸ್ವೀಕರಿಸಲಾಯಿತು. ಇಂದಿಗೂ ಶೇ. ೮೦. ಈಡಿಗರಿಗೆ ನಾರಾಯಣಗುರುವಿನ ಬಗ್ಗೆ ಏನೇನೂ ತಿಳಿಯದು. ನಾರಾಯಣಗುರುಗಳು ಕೇರಳದ ತಿರುವನಂತಪುರದ ಚೆಂಪಳಂಡಿಯಲ್ಲಿ ೧೮೫೫ ರಲ್ಲಿ ಜನಿಸಿದರು. ೧೯೨೮ ರಲ್ಲಿ ನಿಧನರಾದರು. ಇಂದು ಇವರಿಂದ ಪ್ರಾರಂಭವಾದ ಗುರು ಪರಂಪರೆ ಕೇರಳದಲ್ಲಿ ಮುಂದುವರೆಯುತ್ತಿದೆ. ದಕ್ಷಿಣ ಕನ್ನಡ ಜಿಲ್ಲೆಗೂ ನಾರಾಯಣ ಗುರುಗಳ ಪ್ರಭಾವ ವ್ಯಾಪಿಸಿತು. ಕಾರಣ ತಿಯ್ಯಾ ಜಾತಿಯಲ್ಲಿ ಹುಟ್ಟಿದ ನಾರಾಯಣ ಗುರುವಿನ ಕುಲವೂ ಕಳ್ಳು ಇಳಿಸುವ ವೃತ್ತಿಯನ್ನೇ ಅನುಸರಿಸುತ್ತಿತ್ತು. ಸಾಮಾಜಿಕವಾಗಿ ಬಿಲ್ಲವರು, ತಿಯ್ಯಾಗಳು ಒಂದೇ ಸ್ಥಿತಿಯಲ್ಲಿದ್ದರು. ಹೆಚ್ಚು ಕಡಿಮೆ ಒಂದೇ ಭೌಗೋಳಿಕ ಪರಿಸರದಲ್ಲಿ ವಾಸಮಾಡುತ್ತಿದ್ದಾರೆ. ಬೇರೆ ಹೆಸರಿನಿಂದ ಕರೆಯಲ್ಪಡುತ್ತಿದ್ದರು ಅಷ್ಟೆ. ಇಂದು ಬಿಲ್ಲವ ಸಮುದಾಯ ಬಹುತೇಕ ನಾರಾಯಣ ಗುರುಗಳನ್ನು ತಮ್ಮ ಗುರುಗಳೆಂದು ಒಪ್ಪಿಕೊಂಡಿದೆ. ಈ ಮೂಲಕವಾಗಿ ಸಾಮಾಜಿಕವಾಗಿ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುತ್ತಿದೆ. ಬಂಡವಾಳ ಶಾಹಿ ವ್ಯವಸ್ಥೆ ಗುರು ಪರಂಪರೆಗೆ ಹೊಸ ಮೆರುಗನ್ನು ಕೊಟ್ಟಿದೆ. ಆದರೆ ಅದರ ಸ್ವರೂಪ, ಮತ್ತು ಫಲಿತಾಂಶಗಳು ಪ್ರಶ್ನಾರ್ಹಮತ್ತು ಚರ್ಚಾರ್ಹ. ಹೀಗೆ ಒಪ್ಪಿಕೊಂಡ ಈ ಗುರುಗಳ

ಹೆಸರಿನಲ್ಲಿ ನೂರಾರು ಶಾಲಾ ಕಾಲೇಜು ದೇವಾಲಯಗಳನ್ನು ಕಟ್ಟಿಸಿ ಪ್ರಚಾರ ಮಾಡುತ್ತಿರುವ ಬಿಲ್ಲವರು ಎಂಥ ವರ್ಗದವರೆನ್ನುವುದನ್ನು ಮತ್ತೆ ಚರ್ಚಿಸಬೇಕಾಗಿಲ್ಲ. ಒಟ್ಟು ಈ ಒಂದು ವರ್ಗದ ಪ್ರತಿಷ್ಠೆಯನ್ನು ಇಡೀ ಜಾತಿಯಲ್ಲಿನ ಒಂದು ಸಮುದಾಯಕ್ಕೆ ಹೇರಲಾಗುತ್ತಿದೆ. ಅಥವಾ ಅನುಕರಿಸುವಂಥ ಒಂದು ಕೀಳಿರಿಮೆ ಸ್ಥಿತಿಯನ್ನು ಸೃಷ್ಟಿಸಲಾಗುತ್ತಿದೆ.

ನಾರಾಯಣಗುರು ಹಿಂದೂ ಧರ್ಮವನ್ನು ಸಾರ್ವತ್ರೀಕರಿಸುವ ತತ್ವವನ್ನು ಮುಂದಿಟ್ಟುಕೊಂಡು ವ್ಯಾಪಕ ಪ್ರಚಾರವನ್ನು ಗಿಟ್ಟಿಸಿಕೊಂಡರು ೧೯ನೇ ಶತಮಾನದಲ್ಲಿ ಭಾರತವೂ ಸೇರಿದಂತೆ ಕೇರಳದಲ್ಲಿ ಮುಸ್ಲಿಂ ಮತ್ತು ಕ್ರೈಸ್ತ ಮತಗಳು ತಮ್ಮ ಪ್ರಭಾವಗಳನ್ನು ಹೆಚ್ಚಿಸಿಕೊಳ್ಳಲು ಸ್ಪರ್ಧಿಸುತ್ತಿದ್ದ ಸಂದರ್ಭ. ಇಂಥ ಸಂದರ್ಭದಲ್ಲಿ ವೈದಿಕ ಧರ್ಮವು ತನ್ನ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ಹುಟ್ಟು ಹಾಕಿದೆ. ವೈಧಿಕ ತತ್ವಗಳನ್ನೇ ವಿಶ್ವಮತವನ್ನಾಗಿ ಭೋದಿಸುವಂತೆ ನಾರಾಯಣಗುರುವಿಗೆ ಒಂದು ರೀತಿಯಲ್ಲಿ ಪ್ರೋತ್ಸಾಹ ಸಿಕ್ಕಿದೆ. ತಿಯ್ಯಾ ಜಾತಿಯ ಈ ಗುರುವಿಗೆ ಪ್ರೋತ್ಸಾಹಸಿಕ್ಕಿ ಜನಪ್ರಿಯವಾಗಲು ಬಹುಮುಖ್ಯ ಕಾರಣವಿದೆ. ತಿಯ್ಯಾಗಳು ಕೇರಳದ ಬಹು ಸಂಖ್ಯಾತರಾಗಿದ್ದ ಈ ಜನ ಬೆಂಬಲವನ್ನು ಗಳಿಸುವ ಉದ್ದೇಶವಾಗಿ ನಾರಾಯಣ ಗುರುವಿನಂಥವರನ್ನು ವೈಧಿಕ ಧರ್ಮದ ಪ್ರಚಾರಕನನ್ನಾಗಿ ಜನಪ್ರಿಯಗೊಳಿಸಿರುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ಮೊದಲೇ ಸಾಮಾಜಿಕ ಮತ್ತು ಆರ್ಥಿಕವಾಗಿ ಕೆಳಸ್ತರದಲ್ಲಿದ್ದ ತಿಯ್ಯಾ-ಈಳವರು ನಾರಾಯಣ ಗುರವನ್ನು ತಮ್ಮ ಗುರುವನ್ನಾಗಿ ಒಪ್ಪಿಕೊಂಡು. ಎತ್ತಿ ಹಿಡಿದರು. ಸ್ವಾತಂತ್ರ ಚಳುವಳಿಯ ಸಂದರ್ಭದಲ್ಲಿ ಗಾಂಧೀಯಂತವರೂ ನಾರಾಯಣ ಗುರುವಿನ ಪ್ರಭಾವವನ್ನೂ ಗುರುತಿಸಿ ಪ್ರೋತ್ಸಾಹಿಸಿದ್ದರಿಂದ ಇವರಿಗೆ ವ್ಯಾಪಕ ಜನಪ್ರಿಯತೆ ಲಭ್ಯವಾಯಿತು. ಹೀಗೆ ಜನಪ್ರಿಯನಾದ ತಮ್ಮ ಜಾತಿಯವರನ್ನು ಸಾಂಸ್ಕೃತಿಕ ವ್ಯಕ್ತಿಯಾಗಿ ಎತ್ತಿ ಹಿಡಿದಿರುವುದು ಸಹಜ. ಮೊದಲೇ ಸಾಮಾಜಿಕವಾಗಿ ಕೀಳರಿಮೆಯನ್ನು ಅನುಭವಿಸುತ್ತಿದ್ದವರಿಗೆ, ನಾರಾಯಣಗುರು ಆರಾಧ್ಯರಾಗಲು ಹೆಚ್ಚು ಒತ್ತಾಯಬೇಕಿರಲಿಲ್ಲ. ಹೀಗೆ ಜನಪ್ರಿಯನಾದ ಈ ಗುರು, ಭಾರತಾದ್ಯಂತ ಜನಪ್ರಿಯ ವ್ಯಕ್ತಿಯಾದರು. ಮೊದಮೊದಲು ಕೇರಳದ ಈಳವ,ತಿಯ್ಯಾ ಜಾತಿಯ ಎಲ್ಲಾ ವರ್ಗದವರು ಯಾವ ಅರ್ಥ ಮತ್ತು ಉದ್ದೇಶಗಳನ್ನು ಇಟ್ಟು ಕೊಂಡು ನಾರಾಯಣ ಗುರುವನ್ನು ಸ್ವೀಕರಿಸಿದ್ದರೋ ಅದಕ್ಕಿಂತ ಭಿನ್ನವಾದ ಉದ್ದೇಶಗಳನ್ನು ಮೇಲು ವರ್ಗದ ಈಳವ ಮತ್ತು ತಿಯ್ಯಾ ಜನರು ಅಳವಡಿಸಿಕೊಳ್ಳುತ್ತಾ ನಾರಾಯಣ ಗುರುವನ್ನು ಪ್ರಚಾರದಲ್ಲಿ ಗಟ್ಟಿಗೊಳಿಸುತ್ತಾ ಹೋದರು. ಕೆಳ ವರ್ಗಗಳು ಅವರನ್ನು ಸ್ವೀಕರಿಸಿದ್ದು ಕೇವಲ ಭಕ್ತಿ ಮತ್ತು ಐಕ್ಯತೆಗಾಗಿ ನೆಲೆಗಳಲ್ಲಿ ಮಾತ್ರ.

ಬಹುಶಃ ಆ ನೆಲೆಗಳಿಂದ ಅವರು ಪಲ್ಲಟಗೊಂಡಿರಲು ಯಾವ ಸ್ವಾರ್ಥದ ಒತ್ತಡಗಳು ಒತ್ತಾಯಿಸಿರಲಾರವು. (ಹೀಗೆ ಭಾರತಾದ್ಯಂತ ಜನಪ್ರಿಯರಾಗಿರುವ ಹಿನ್ನೆಲೆಯಲ್ಲಿ ವೈದಿಕ ಮತದ ಮೂಲಭೂತವಾದಿಗಳ ಕೈವಾಡವನ್ನು ಗಮನದಲ್ಲಿಟ್ಟುಕೊಳ್ಳುವುದು ಮುಖ್ಯ. ಈ ಉತ್ತೇಜನದಲ್ಲೂ ಅವರ ಹಿತಾಸಕ್ತಿಗಳು ಹುದುಗಿವೆ). ಕರ್ನಾಟಕದ ಪ್ರಭಲವರ್ಗದ ಈಡಿಗರು, ನಾರಾಯಣ ಗುರುವಿನಂಥವರ ಅನಿವಾರ್ಯತೆಯನ್ನು ಕಂಡುಕೊಂಡರು. ಆರ್ಥಿಕವಾಗಿ ಪ್ರಭಲರಾದ ಈಡಿಗರಿಗೆ ಸಾಮಾಜಿಕವಾಗಿ ತಮ್ಮ ಸ್ಥಾನವನ್ನು ಸ್ಥಿರಪಡಿಸಿಕೊಳ್ಳುವ ಆಂಶಿಕ ಅನಿವಾರ್ಯವಾಗಿ ನಾರಾಯಣ ಗುರುವನ್ನು ತಮ್ಮ ಗುರುವಾಗಿ ಸ್ವೀಕರಿಸುವ ಅವಶ್ಯಕತೆ ಇತ್ತು. ಇದಲ್ಲದೆ ಇನ್ನೂ ಅನೇಕ ಉದ್ದೇಶಗಳಿವೆ.

ಈಡಿಗ ಉಪಪಂಗಡಗಳನ್ನು ಒಟ್ಟು ಸೇರಿಸಿ ಬಹುಸಂಖ್ಯಾತರಾಗಿ ರೂಪಿಸುವ ಅನಿವಾರ್ಯತೆ ಕರ್ನಾಟಕದ ಈಡಿಗ ರಾಜಕಾರಣಿಗಳಿಗೆ, ಮತ್ತು ಈಡಿಗ ಬಂಡವಾಳಶಾಹಿ ಮಧ್ಯವ್ಯಾಪಾರಿಗಳಿಗೆ ಇತ್ತು. ನಾರಾಯಣ ಗುರುವಿನ ಹೆಸರಿನಲ್ಲಿ ಸಾಂಸ್ಕೃತಿಕವಾಗಿ ಒಂದಾಗುವ ಅಗತ್ಯ ೧೯೯೫ರ ಈಡಿಗ ಮಹಾಸಮ್ಮೇಳನದ ಸಂದರ್ಭದಲ್ಲಿ ಎಲ್ಲಾ ಈಡಿಗ ಉಪಪಂಗಡದವರಿಗೆ ಒತ್ತಿ ಹೇಳಲಾಯಿತು. ಶಿವಮತವೇ ನಮ್ಮ ಮತ ನಾರಾಯಣಗುರುವೇ ನಮ್ಮ ಗುರು ಎಂದು ಸ್ವಿಕರಿಸುವ ಸಾಂಕೇತಿಕ ಕ್ರಿಯೆ ಇಲ್ಲಿ ವಿಧ್ಯುಕ್ತವಾಗಿ ನಡೆಯಿತು. ಅಲ್ಲಿ ಸೇರಿದ್ದ. ಲಕ್ಷಾಂತರ ಈಡಿಗರಿಗೆ (ವಿಶೇಷವಾಗಿ ಬಯಲು ಸೀಮೆಯವರಿಗೆ, ಮತ್ತು ದೀವರಿಗೆ) ಇದೊಂದು ಹೊಸ ಬೆಳವಣಿಗೆಯಾಗಿ ಕಂಡಿತು. ಅನೇಕ ಕಡೆಯಲ್ಲಿ ಅಲ್ಪಸಂಖ್ಯಾತರಾಗಿ ಇತರರ ದಬ್ಬಾಳಿಕೆಗೆ ಒಳಗಾಗಿದ್ದ ಈಡಿಗರಿಗೆ ನಾರಾಯಣಗುರು ಅವರಿಗೆ ಗುರುವಾಗುವ ವಿಷಯ ಭಾವುಕ ನೆಲೆಯಲ್ಲಿ ಆಕರ್ಷಕವಾದ ಮತ್ತು ಸಂತೋಷವಾದ ಅನುಭವವಾಗಿರಬಹುದು ಆದರೆ ವಿಶಿಷ್ಟ ಜೀವಂತ ಸಾಂಸ್ಕೃತಿಕ ಜೀವನವನ್ನು ಅನುಭವಿಸುತ್ತಿರುವವರಿಗೆ ಇದೊಂದು ಹೇರಿಕೆಯಾಗಿರಲೂ ಸಾಧ್ಯ. ಒಂದು ವರ್ಗಕ್ಕೆ ಪ್ರತಿಷ್ಠೆಯಾಗಿ ಕಂಡ ಈ ಅಂಶ, ಅದೇ ಜಾತಿಯ ಕೆಳವರ್ಗದವರಲ್ಲಿ ಅವರ ಸಂಸ್ಕೃತಿಯ ಬಗ್ಗೆಯೇ ಕೀಳರಿಮೆ ಹುಟ್ಟಿಕೊಂಡು ನಿಧಾನವಾಗಿ ಆ ಬದುಕಿನಿಂದ ವಿಮುಖವಾಗುವ ಪ್ರವೃತ್ತಿಯನ್ನು ಬೆಳೆಸುತ್ತದೆ . ಈ ಘಟನೆಯು ಈಡಿಗ ಉಪಪಂಗಡದಲ್ಲೂ ಈ ಪ್ರಕ್ರಿಯೆಯನ್ನು ಹುಟ್ಟು ಹಾಕಿದೆ.

ಈ ಪ್ರಕ್ರಿಯೆ ಸಾಂಸ್ಕೃತಿಕವಾಗಿ ಅನೇಕ ಪಂಗಡಗಳ ವೈಶಿಷ್ಟ್ಯತೆ ಮತ್ತು ಜೀವಂತಿಕೆಯನ್ನು ನಾಶಪಡಿಸುವ ಗುಣವನ್ನು ಪಡೆದಿರುತ್ತದೆ. ಕರ್ನಾಟಕದ ಪ್ರಭಲಜಾತಿಗಳಾದ ವೀರಶೈವ, ಒಕ್ಕಲಿಗ, ಬ್ರಾಹ್ಮಣರು ಗುರು ಪರಂಪರೆಯನ್ನು ಹುಟ್ಟುಹಾಕಿಕೊಂಡು ರಾಜಕೀಯವಾಗಿ ಆರ್ಥಿಕವಾಗಿ ರಕ್ಷಣೆ ಪಡೆದಿರುವ ಈ ಬೆಳವಣಿಗೆ

ಈಡಿಗ ಪ್ರಭಲ ವರ್ಗವನ್ನು ಪ್ರಚೋದಿಸಿರುವುದು ಸಹಜ. ದಕ್ಷಿಣ ಕನ್ನಡದ ಅನೇಕಕಡೆ, ನಾರಾಯಣ ಗುರುಗಳ ಹೆಸರಿನಲ್ಲಿ ಪ್ರಬಲ ಬಿಲ್ಲವರು ಕಾಲೇಜುಗಳನ್ನು ದೇವಾಲಯಗಳನ್ನು ಕಟ್ಟುತ್ತಿದ್ದಾರೆ. ಕುದ್ರೋಳಿಯ ಗೋಕರ್ಣನಾಥೇಶ್ವರ ದೇವಾಲಯ ಇದಕ್ಕೊಂದು ನಿದರ್ಶನ. ದಕ್ಷಿಣ ಕನ್ನಡದಲ್ಲಿ ಈ ಪ್ರಕ್ರಿಯೆ ವ್ಯಾಪಕವಾಗುತ್ತಿದೆ. ಮುಂದಿನ ದಿನಗಳಲ್ಲಿ ಇದು ರಾಜ್ಯದ ಈಡಿಗ ಸಮುದಾಯವನ್ನು ವ್ಯಾಪಿಸುತ್ತದೆಂದು ಹೇಳಬಹುದಾದರೂ ಬಂಡವಾಳ ಶಾಹಿ ವ್ಯವಸ್ಥೆ ಇಂಥ ಭಾವನಾತ್ಮಕ ನೆಲೆಯ ವಿಚಾರಗಳಿಗೆ ಯಾವ ಸ್ವರೂಪ ಕೊಡುತ್ತದೆಂದು ಖಚಿತವಾಗಿ ಹೇಳಲಾಗದು. ಒಟ್ಟಾರೆ ಇಂದಿನ ಸ್ಥಿತಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಒಂದು ವರ್ಗದ ಹಿತರಕ್ಷಣೆಯ ಉದ್ದೇಶವನ್ನು ತೆರೆಯ ಹಿಂದಿಟ್ಟುಕೊಂಡು, ವಿವಿಧ ಸಾಂಸ್ಕೃತಿಕ ಜೀವನಕ್ಕೆ ಹೊಂದಿಕೊಂಡಿರುವ ಈಡಿಗ ಪಂಗಡ, ಉಪಪಂಗಡಗಳ ಮೇಲೆ ಹೇರಲಾಗುತ್ತಿದೆ. ಎನ್ನುವುದಕ್ಕಿಂತ ಅನುಕರಿಸಲೇಬೇಕಾದ ಸ್ಥಿತಿಯನ್ನು ನಿರ್ಮಾಣ ಮಾಡಲಾಗುತ್ತಿದೆ ಎನ್ನಬಹುದು.

# ಅಧ್ಯಾಯ-೫

# ಸಮಾರೋಪ

ಈ ಅಧ್ಯಯನದಲ್ಲಿ ಚರ್ಚೆಗೊಳಪಟ್ಟಿರುವ ಈಡಿಗರ ಮೂರು ಪಂಗಡಗಳು ತಮ್ಮದೇ ಆದ ಚರಿತ್ರೆಯನ್ನು ಒಳಗೊಂಡಿವೆ. ಆದ್ದರಿಂದ ಇವುಗಳನ್ನು ಪ್ರತ್ಯೇಕವಾಗಿಯೇ ಚರ್ಚಿಸುವ ಅವಶ್ಯಕತೆಯನ್ನು ಈ ಅಧ್ಯಯನ ಕಂಡುಕೊಂಡಿದೆ. ಸಾಮಾನ್ಯವಾಗಿ ಈಡಿಗರಲ್ಲಿ ಇಂದು ಗುರುತಿಸಲ್ಪಡುವ ಕರ್ನಾಟಕದ ಬಯಲು ಸೀಮೆಯ ಜನಕ್ಕೆ ಒಂದು ಸುದೀರ್ಘ ಚರಿತ್ರೆಯಿದೆ. ಈಗಾಗಲೇ ಚರ್ಚಿಸಿರುವಂತೆ ವೇದಗಳಲ್ಲಿ ಇವರ ಬಗ್ಗೆ ಮಾಹಿತಿಗಳು ದೊರಕಿವೆ. ಗೌಡಪುರಾಣವು ಇವರ ವಂಶಾವಳಿಯ ಕಥೆಯನ್ನು ಹೇಳುತ್ತದೆ. ವೇದಗಳ ಕಾಲದಲ್ಲಿ ಕಳ್ಳು ತೆಗೆವ ವೃತ್ತಿಯ ಈಡಿಗರು ದೇವತೆಗಳಂಥ ಪ್ರಬಲರ ಮನ್ನಣೆ ಪಡೆದಿದ್ದರು. ಕಳ್ಳು ಅಂಥವರ ಸೇವೆಗೆ ಮಾತ್ರ ಮೀಸಲಾಗಿತ್ತು. ಕೊನೆಗೆ ಅದನ್ನು ತಯಾರಿಸುತ್ತಿದ್ದ ಈಡಿಗರಿಗೆ (ಪಾನಕ್ಕೆ) ನಿಷೇಧವಿತ್ತು. ಅಂದರೆ ಕಳ್ಳು ಅಂದಿನ ಸಂದರ್ಭದಲ್ಲಿ ಪ್ರಬಲ ವರ್ಗದ ಹಿಡಿತಕ್ಕೊಳಪಟ್ಟಿತ್ತು. ಈ ಕಾರಣಕ್ಕೆ ಈಡಿಗರು ಅವರ ಹಿಡಿತದಲ್ಲಿದ್ದರು. ಕಳ್ಳು ತಯಾರಿಸುವ ಅನುಮತಿಯನ್ನು ಅವರು ಈಡಿಗರಿಗೆ ಮಾತ್ರ ಮೀಸಲಾಗಿಸಿದ್ದರು. ಈಡಿಗರು ದೇವತೆಗಳನ್ನು ಓಲೈಸುತ್ತಾ ಅವರ ಸೇವೆಯನ್ನು ನಮ್ರತೆಯಿಂದ ಮಾಡಿಕೊಂಡು ತಮ್ಮ ಹಿತಾಸಕ್ತಿಗಳನ್ನು ರೂಪಿಸಿಕೊಂಡು ರಕ್ಷಿಸಿಕೊಳ್ಳುತ್ತಾ ಬಂದರು. ಕೌಂಡಿಣ್ಯ ಮುನಿಯ ಮತ್ತು ಅವನ ವಂಶದ ಕಥೆ ಇದಕ್ಕೊಂದು ನಿದರ್ಶನ. ಹೀಗೆ ಇವರು ಮನ್ನಣೆ ಪಡೆದು ಕೊಳ್ಳುತ್ತಾ ಮುಂದಿನ ಹಂತಗಳಲ್ಲಿ ರಾಜ್ಯವನ್ನು ಆಳುವವರಾಗುವ ಮಟ್ಟಕ್ಕೂ ಏರಿದರು. ಕಾಟವೇಶ್ವರನ ಕಥೆ ಇದಕ್ಕೊಂದು ನಿದರ್ಶನ. ಮಧ್ಯಕಾಲೀನ ಭಾರತದ ಚರಿತ್ರೆಯ ಸಂದರ್ಭದಲ್ಲಿ ಕಳ್ಳು ಮೇಲು [redacted] ವರ್ಗಗಳ ಮನ್ನಣೆಯನ್ನು ಕಳೆದುಕೊಂಡಿತ್ತು. ಹೀಗೆ ಮನ್ನಣೆ ಕಳೆದುಕೊಂಡ ಕಾಲ ಘಟ್ಟ ಯಾವುದು ಎನ್ನುವುದನ್ನು ನಿಖರವಾಗಿ ಹೇಳಲಾಗದು. ಸಾಮಾನ್ಯವಾಗಿ ಬೌದ್ಧ, ಜೈನ ಧರ್ಮಗಳ ಉಗಮದ ಸಂದರ್ಭವು ವೈದಿಕ ಧರ್ಮದ ಆಚರಣೆಗಳಲ್ಲಿ ಕೆಲವು ಸುಧಾರಣೆಗಳನ್ನು ಮಾಡಿಕೊಳ್ಳುವ ಅನಿವಾರ್ಯತೆಯನ್ನು ಸೃಷ್ಟಿಸಿರಬೇಕು. ಈ ಸಂದರ್ಭದಲ್ಲಿ ಯಜ್ಞಯಗಾದಿಗಳ ಆಚರಣೆಯಲ್ಲಿ ಗೋ -ಬಲಿ, ಗೋಮಾಂಸ ಭಕ್ಷಣೆ,ಸುರಪಾನ ಮೊದಲಾದವುಗಳು ನಿಷೇದವಾದಂತೆ ಕಳ್ಳು ಕೂಡ ನಿಷೇಧವಾಗಿರಲು ಸಾಧ್ಯ. 'ಕಳ್ಳು' ವೇದಗಳ ಕಾಲದಲ್ಲಿ 'ಸಿದ್ಧಿರಸ' ವೆಂಬ ಹೆಸರನ್ನು ಪಡೆದುಕೊಂಡಿದ್ದು ಮಧ್ಯ ಕಾಲದ ವೇಳಗೆ ಇದು 'ಶಾಂಭವಿ', 'ಸುರೆ' ಎನ್ನುವ ಹೆಸರನ್ನು ಪಡೆದುಕೊಂಡಿದೆ. ಇದು ಗಮನಾರ್ಹ. ಮೇಲ್ವರ್ಗದವರಿಂದ ವರ್ಜಿಸಲ್ಪಟ್ಟ ಕಳ್ಳು ತದನಂತರ ಇತರೆ ಕೆಳವರ್ಗಕ್ಕೆ ಲಭಿಸುವುದು ಕಷ್ಟವಾಗಲಿಲ್ಲ. ಇದೇ ವೃತ್ತಿಯನ್ನು ನಂಬಿ

ಬದುಕುತ್ತಿದ್ದ ಈಡಿಗರಿಗೆ ಕಳ್ಳು ಮನ್ನಣೆ ಪಡೆದುಕೊಂಡಾಗ ಇತರೆ ವರ್ಗಕ್ಕೆ ಮಾರಿ ಬದುಕುವುದು ಅನಿವಾರ್ಯವೂ ಆಯಿತು. ಎಲ್ಲಮ್ಮನ ಚೌಡಿಕೆ ಸಂಪ್ರದಾಯದ ಜನಪದ ಹಾಡುಗಳಲ್ಲಿ ಈ ಅಭಿಪ್ರಾಯಕ್ಕೆ ನಿದರ್ಶನಗಳು ಸಿಗುತ್ತವೆ. ಎಲ್ಲಮ್ಮ ಮತ್ತು ಓರುಗಲ್ಲು ರಾಜನ ಕಥೆಗಳಲ್ಲಿ ಬರುವ ಈಡಿಗರ ಮಾರ್ತಾಡಗೌಡ ಶ್ರೀಮಂತ ಹೆಂಡದ ವ್ಯಾಪಾರಿಯಾಗಿದ್ದಾನೆ. ಕಲ್ಯಾಣ ಪಟ್ಟಣಕ್ಕೆ ಆನೆಯ ಮೇಲೆ ಮದನ ಸುರಿಯನ್ನು ಸಾಗಿಸಿ ಮಾರುವವನಾಗಿದ್ದಾನೆ. ಅಂದರೆ ಆಗಿನ ಶೂದ್ರ ವರ್ಗ ಕಳ್ಳನ್ನು ವರ್ಜಿಸಿರಲಿಲ್ಲವೆನ್ನುವುದು ಸ್ಪಷ್ಟವಾಗುತ್ತದೆ. ಅಂದಿನ ನಗರಗಳಲ್ಲಿ ಶೂದ್ರವರ್ಗ ಇವರಿಗೆ ಪ್ರಮುಖ ಗ್ರಾಹಕರಾಗಿದ್ದರು. ವಸಾಹತು ಶಾಹಿಕಾಲದ ನಂತರ ಈ ವರ್ಗ ಹೆಂಡದ ಮೇಲಿನ ಕೀಳರಿಮೆಯಿಂದ ವಿಮುಖವಾಗುತ್ತಾ ಬಂದಿದೆ. ಮಾರ್ತಾಂಡ ಗೌಡ ಕೆಳಜಾತಿಯ ಮಾತಂಗಿಯನ್ನು ಸೇಂದಿ ವನಕ್ಕೆ ಸಹ ಬಿಟ್ಟುಕೊಳ್ಳುವುದಿಲ್ಲ. ಮಡಿವಂತಿಕೆಯ ಕಲ್ಪನೆ ಆಗ ಇನ್ನೂ ಇರುವುದು ಸ್ಪಷ್ಟವಾಗುತ್ತದೆ. ಅಂದರೆ ಪಂಚಮರಿಗಿಂತ ಮೇಲಸ್ತರದ ಶೂದ್ರ ವರ್ಗದವರು "ಕಳ್ಳಿಗೆ ಗ್ರಾಹಕರಾಗಿದ್ದರು ಎನ್ನಬಹುದು. ಇದೇ ಸಂದರ್ಭದಲ್ಲಿ ಇವನ ತಮ್ಮನಾದ ಬಲ್ಲೇಗೌಡನು ಮಾತಂಗಿಗೆ ಸುರೆಯನ್ನು ಕೊಟ್ಟು ಸತ್ಕರಿಸುತ್ತಾನೆ. ಆಕೆಯ ಅನುಗ್ರಹದಿಂದ ಇವನು ಶ್ರೀಮಂತನಾಗುತ್ತಾನೆ. ಅಂದರೆ ಬಡವನಾದ ಬಲ್ಲೇಗೌಡನು ತನಗಾಗಿ ಇರುವ ೧೨ ಮರದ ಕಳ್ಳನ್ನು ತೆಗೆದು ಅಣ್ಣನೊಂದಿಗೆ ಸ್ಪರ್ಧಿಸಿ ವ್ಯಾಪಾರ ಮಾಡಲಾರ. ಆದ್ದರಿಂದ ಆತ, ಈಚಲು ವನದಲ್ಲೇ ಕೆಳಜಾತಿಯವರಿಗೆ ಕಳ್ಳು ಮಾರಿ ಜೀವನ ಸಾಗಿಸುತ್ತಿದ್ದ. ಇವನಿಗೆ ಈ ವರ್ಗದಲ್ಲಿ ವ್ಯಾಪಕವಾಗಿ ಗ್ರಾಹಕರು ಮುಂದೆ ಲಭ್ಯವಾಗಿ ಇವನೇ ಅಣ್ಣನಿಗಿಂತ ಶ್ರೀಮಂತನಾಗಿರಲು ಸಾಧ್ಯವಾಗಿರಬಹುದು. ಈ ತಿಳುವಳಿಕೆಯಂತೆ ಕಳ್ಳು ಈ ವೇಳೆಗೆ ವ್ಯಾಪಾರದ ಲಕ್ಷಣವನ್ನು ಏಕಸ್ವಾಮ್ಯತ್ವದೊಂದಿಗೆ ಪಡೆದು ಕೊಳ್ಳುತ್ತಿರುವುದು ಸ್ಪಷ್ಟವಾಗುತ್ತದೆ. ಈ ಹಂತದಲ್ಲಿಂದ ಈಡಿಗರ ಕೌಟುಂಬಿಕ ವ್ಯವಸ್ಥೆಯಲ್ಲಿ ಬದಲಾವಣೆಗಳು ಕಾಣಿಸಿಕೊಂಡಿವೆ. ಸಾಂಸ್ಕೃತಿಕವಾಗಿ ಎಲ್ಲಮ್ಮ ಮಾತಂಗಿಯರು ಈಡಿಗರಿಗೆ ಪೂಜ್ಯರಾಗಿದ್ದಾರೆ. (ವೇದ ಕಾಲದಲ್ಲಿ ದೇವತೆಗಳು ಈಶ್ವರ ಪಾರ್ವತಿಯರು ದೈವಗಳಾಗಿದ್ದರು ಎನ್ನುವುದು ಗಮನಾರ್ಹ.)

ವಸಾಹತು ಶಾಹಿ ಆಡಳಿತ ವ್ಯವಸ್ಥೆ ಕರ್ನಾಟಕದಲ್ಲಿ ೧೯ನೇ ಶತಮಾನದ ವೇಳಗೆ ತನ್ನ ಅಸ್ತಿತ್ವವನ್ನು ಪಡೆದುಕೊಂಡಿದ್ದು ಸರಿಯಷ್ಟೆ. ಈ ಸಂದರ್ಭದಲ್ಲಿ ಕಳ್ಳು ವೃತ್ತಿ ಮತ್ತು ಮಾರುವ ವ್ಯವಸ್ಥೆಯು ಸರ್ಕಾರದ ನಿಯಂತ್ರಣಕ್ಕೆ ಒಳಪಟ್ಟಿತು. ಬ್ರಿಟಿಷರಿಗೆ ಆದಾಯದ ಅವಶ್ಯಕತೆಯಿದುದ್ದರಿಂದ, ವ್ಯಾಪಾರದ ಮೇಲೆ ಮೊದಲ ಹಂತದಲ್ಲಿ ವ್ಯಾಪಕವಾಗಿ ತೆರಿಗೆ ವಿಧಿಸಿದರು. ನಂತರದಲ್ಲಿ ಕಳ್ಳು ತೆಗೆಯುವ ಮರಗಳಾದ ಈಚಲು, ತಾಳೆ, ಬೊಗನೆ ಮರಗಳಿಗೂ ತೆರಿಗೆ ಹೇರಿದರು. ಇದರಿಂದ ವೃತ್ತಿಪರ ಈಡಿಗರಲ್ಲಿ ಬಹುಸಂಖ್ಯಾತರು ಕೂಲಿ

ಕಾರ್ಮಿಕರಾದರು. (ಕಳ್ಳು ತೆಗೆಯುವ ವೃತ್ತಿಯಲ್ಲಿ) ಮೊದಲಿಂದಲೂ ಕಳ್ಳು ವ್ಯಾಪಾರದಲ್ಲಿ ಮುಂದುವರಿದಿದ್ದವರು, ತೆರಿಗೆ ನೀಡಲು ಸಮರ್ಥರಾದ್ದರಿಂದ ಅವರು ಗುತ್ತಿಗೆದಾರರಾದರು, ನಂತರದಲ್ಲಿ ಬೃಹತ್ ಬಂಡವಾಳ ಶಾಹಿಗಳಾದರು. ಹೀಗಾಗಲು ಕೈಗಾರಿಕಾ ಕ್ರಾಂತಿಯ ಪ್ರಭಾವವಿದೆ, ಉತ್ಪಾದನಾ ಸಾಧನಗಳು, ವಿಧಾನಗಳು ಬದಲಾದಂತೆ, ಉತ್ಪಾದನೆ ಒಂದೆಡೆ, ಕೆಲವೇ ವ್ಯಾಪಾರಿಗಳಲ್ಲಿ ಕೇಂದ್ರೀಕೃತವಾಗಿರುವುದು ಸರಿಯಷ್ಟೆ. ಹೀಗೆ ಬಂಡವಾಳ ಶಾಹಿಗಳು ಒಂದು ವರ್ಗವಾಗಿ ರೂಪುಗೊಂಡರು, ಪರ್ಯಾಯವಾಗಿ ಕೂಲಿಕಾರ್ಮಿಕರು ಮತ್ತೊಂದು ವರ್ಗವಾಗಿ ಉಳಿದರು. ಬ್ರಿಟಿಷರಿಂದ ಭಾರತೀಯರಿಗೆ ದೇಶದ ಅಧಿಕಾರ ವರ್ಗವಾದ ಮೇಲೆ ಕೂಡ ದೇಶೀಯ ಬಂಡವಾಳ ಶಾಹಿ, ಮತ್ತು ಭೂಮಾಲೀಕರ ಅಭಿವೃದ್ಧಿಗೆ ಅಗತ್ಯವಾದ ರಾಷ್ಟ್ರವ್ಯವಸ್ಥೆಯನ್ನು ರೂಪಿಸಲಾಯಿತು. ಆಳುವ ವರ್ಗದವರು ಇವರ ಹಿತವನ್ನು ರಕ್ಷಿಸಿದರೆ ಬಂಡವಾಳ ಶಾಹಿಗಳು ಭೂಮಾಲೀಕರು ಆಳುವ ವರ್ಗದ ಅಧಿಕಾರವನ್ನು ಗಟ್ಟಿಗೊಳಿಸಲು ಪೂರಕವಾಗಿ ದುಡಿಯುತ್ತಿರುವ ವಿಚಾರ ಇಂದಿಗೂ ಸ್ಪಷ್ಟ. ಹೀಗಾಗಿ ನಂತರದಲ್ಲಿ ಈ ವ್ಯವಸ್ಥೆ ಮುಂದುವರಿದು ಈಡಿಗರ ಕೌಟುಂಬಿಕ ಜೀವನದಲ್ಲಿ ವಿಘಟನೆಗಳು ವ್ಯಾಪಕವಾದವು. ನಂತರದಲ್ಲಿ ಸರ್ಕಾರದ ಪಾನನಿರೋಧ ಕಾಯಿದೆ, ಇವರ ವೃತ್ತಿಯನ್ನು ಕಿತ್ತುಕೊಂಡಿದೆ. ಇದು ದುಡಿವ ಈಡಿಗರನ್ನು ಮತ್ತೂ ದಿಕ್ಕುತಪ್ಪಿಸಿದೆ. ಹಳ್ಳಿ, ನಗರಗಳಲ್ಲಿ ಹಂಚಿಹೋಗಿರುವ ಇವರು ಕರ್ನಾಟಕಾದ್ಯಂತ ಅಲ್ಪಸಂಖ್ಯಾತರಾಗಿ ಹಂಚಿಹೋಗಿದ್ದಾರೆ. ಈ ಸ್ಥಿತಿ ಅವರ ಸಾಂಸ್ಕೃತಿಕ ಜೀವನದಲ್ಲಿ ವ್ಯಾಪಕವಾದ ಬದಲಾವಣೆಯನ್ನು ತಂದಿದೆ. ಇದರ ಪರಿಣಾಮ ಕೆಳವರ್ಗದ ಈಡಿಗರಿಗೆ ಋಣಾತ್ಮಕವಾದುದಾಗಿದೆ. ಇಂದು ಈಡಿಗರು ಸಾಂಸ್ಕೃತಿಕವಾಗಿ ತಮ್ಮದೇ ಅನನ್ಯತೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗಿಲ್ಲ. ಆರ್ಥಿಕವಾಗಿ ಭದ್ರವಾದ ನೆಲೆಯೂ ಇಲ್ಲ. ಇದರ ಜೊತೆಗೆ ಜಾತಿ ರಾಜಕೀಯ ವ್ಯವಸ್ಥೆ ಇವರ ಮೇಲೆ ವಿಚಿತ್ರವಾದ ಪರಿಣಾಮವನ್ನು ಉಂಟುಮಾಡಿದೆ. ಒಟ್ಟು ಕೆಳವರ್ಗದ ಈಡಿಗರ ಸ್ಥಿತಿ ಇಂದು ಚಿಂತಾ ಜನಕವಾಗಿದೆ. ಇತರೇ ಕೂಲಿ ಕಾರ್ಮಿಕರು ನಿರ್ಗತಿಕರಂತೆ ಒಂದು ದುಡಿವ ವರ್ಗವಾಗಿ ಮತ್ತು ನಿರ್ಗತಿಕ ನಿರುದ್ಯೋಗಿ ವರ್ಗವಾಗಿರೂಪುಗೊಂಡಿದ್ದಾರೆ. ಇದೇ ಜಾತಿಯ ಶ್ರೀಮಂತ ಮಧ್ಯ ಗುತ್ತಿಗೆದಾರರು ಇಂದು ಬೃಹತ್ ಬಂಡವಾಳ ಶಾಹಿಗಳೂ, ಭೂಮಾಲೀಕರೂ ಆಗಿದ್ದು ಪ್ರಬಲ ವರ್ಗಕ್ಕೆ ಸೇರಿದ್ದಾರೆ.

ದೀವರ ಬಗ್ಗೆ ಹೇಳುವುದಾದರೆ ಕಳ್ಳು ಇಳಿಸುವುದು ಅವರಿಗೆ ಮೊದಲಿನಿಂದಲೂ ಅನುಷಂಗಿಕ ಕಸುಬಾಗಿ ಇರುವುದು ತಿಳಿದುಬರುತ್ತದೆ. ಮೊದಲು ಪಶುಪಾಲಕರಾಗಿದ್ದು ತದನಂತರದಲ್ಲಿ ಒಂದಷ್ಟು ಜನ ವಿಜಯನಗರದ ಕಾಲದಲ್ಲಿ ಸೈನ್ಯದಾಳುಗಳಾಗಿ ಪರಿವರ್ತನೆಗೊಂಡಿದ್ದಾರೆ. ಮಲೆನಾಡು ಭಾಗದಲ್ಲಿ ಭಾರತದ ವರ್ಣಾಶ್ರಮ

ಆಧಾರಿತ ಜಾತಿ ಪ್ರಭಾವ ದಟ್ಟವಾಗಿರುವುದರಿಂದ ೧೯ನೇ ಶತಮಾನದಲ್ಲಿ ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಲೆಯ ಲಿಂಗಾಯತ, ಒಕ್ಕಲಿಗ,ಬ್ರಾಹ್ಮಣ ಮೊದಲಾದ ಜಾತಿಯ ಭೂಮಾಲಿಕರ ಕೆಳಗೆ ಗೇಣಿದಾರರಾಗಿದ್ದರು. ಈ ಭಾಗದಲ್ಲಿ ಬಹುಸಂಖ್ಯಾತರಾದ ಇವರು ಶಿವಮೊಗ್ಗ ಜಿಲ್ಲೆಯ ಸಮಾಜವಾದಿ ಚಳುವಳಿಯ ಜೊತೆಗೆ ಪಾಲ್ಗೊಂಡು ಸಂಘಟಿತರಾದರು. ಭೂಮಾಲಿಕರ ವ್ಯಾಪಕವಾದ ಶೋಷಣೆಯ ನೋವು ಇವರನ್ನು ಹೋರಾಟಕ್ಕೆ ಪ್ರಚೋದಿಸಿರುವುದರಲ್ಲಿ ಅನುಮಾನವಿಲ್ಲ. ಇದಕ್ಕೆ ಕಾಗೋಡು ಹೋರಾಟ ಒಂದು ನಿದರ್ಶನ. ೧೯೭೪ರ ಭೂಸುಧಾರಣಾ ಕಾಯಿದೆ ಯನ್ವಯ ಶೇ. ೯೦ ರಷ್ಟು ಗೇಣಿದಾರರಾಗಿದ್ದ ದೀವರು ಭೂಮಿಯ ಮೇಲೆ ಹಕ್ಕನ್ನು ಪಡೆದರು. ಬಹುಸಂಖ್ಯಾರಾದ ಈ ಸಮುದಾಯದಲ್ಲಿ ರಾಜಕೀಯ ನಾಯಕರು ಹುಟ್ಟಿಕೊಂಡರು. ಹಾಗಾಗಿ ಇವರು ಬಯಲು ಸೀಮೆಯ ಈಡಿಗರಿಗಿಂತಉತ್ತಮವಾದ ಜೀವನವನ್ನು ನೆಡೆಸುತ್ತಿದ್ದಾರೆ. ಇತರೆ ಸಾಮಾಜಿಕ ಒತ್ತಡಗಳು ಇವರನ್ನು ತೀವ್ರವಾಗಿ ಒತ್ತಾಯಿಸಿ ಹಿಂಸಿಸಲು ಸಾಧ್ಯ ವಾಗುವುದಿಲ್ಲ. ಕಾರಣ ಬಹುಸಂಖ್ಯಾತರಾದ ಇವರಲ್ಲಿ ಸಂಘಟನಾ ಪ್ರಜ್ಞೆಯಿದೆ. ಈ ಸಂಘಟನಾ ಶಕ್ತಿಯು ಹೊರಗಿನ ಒತ್ತಡಗಳಿಗೆ ಮಣಿಯುವುದು ಸುಲಭ ಸಾಧ್ಯವಾಲ್ಲ. ಈ ಕಾರಣಕ್ಕೆ ಇವರ ಸಾಂಸ್ಕೃತಿಕ ಬದುಕಿನಲ್ಲೂ ಅನನ್ಯತೆ ಇಂದಿಗೂ ಉಳಿದುಕೊಂಡು ಬಂದಿದೆ. ಅಂದ ಮಾತ್ರಕ್ಕೆ ಸಂಪೂರ್ಣ ಹೊರಗಿನ ಪ್ರಭಾವಗಳಾದ ಆಧುನಿಕತೆ,ಮತ್ತು ಧಾರ್ಮಿಕ ಪ್ರಭಾವದಿಂದ ಹೊರತಾಗಿಲ್ಲ, ಪ್ರಬಲ ಶಕ್ತಿಗಳು ಇಂಥ ಭದ್ರಕೋಟೆಯನ್ನು ಒಡೆದು ತಮ್ಮ ಪ್ರಭಾವ ವನ್ನು ವ್ಯಾಪಕಗೊಳಿಸುವ ಹುನ್ನಾರಗಳು ತಂತ್ರಗಳು ಇಂದಿನ ನವವಸಹಾತು ಶಾಹಿ ಸಂದರ್ಭದಲ್ಲಿ ವ್ಯಾಪಕವಾಗುತ್ತಿವೆ. ಅಂತ ಶಕ್ತಿಗಳ ಹುನ್ನಾರಗಳು, ತಂತ್ರಗಳು ಯಾವುವು? ಅವುಗಳು ಉಂಟುಮಾಡಬಹುದಾದ, ಪ್ರಧಾನವಾದ ಮತ್ತು ಪಾರ್ಶ್ವವಾದ ಪರಿಣಾಮದ ಸ್ವರೂಪಗಳು ಎಂಥವು? ಎನ್ನುವುದನ್ನು ಗುರುತಿಸುವ ಸೂಕ್ಷ್ಮವಾದ ಅಧ್ಯಯನಗಳು ಆಗಬೇಕಿದೆ. ಅಂಥ ಒಂದು ಚಿಕ್ಕ ಪ್ರಯತ್ನದ ಫಲವೇ ಈ ಅಧ್ಯಯನ. ಇಂಥ ಸಂಕೀರ್ಣಾವಸ್ಥೆಯನ್ನು ಸೂಕ್ಷ್ಮವಾಗಿ ಸಮಗ್ರ ಸ್ವರೂಪದಲ್ಲಿ ಅಧ್ಯಯನ ಮಾಡುವುದು ಸಂಶೋಧಕನಿಗೆ ಬಹುದೊಡ್ಡ ಸವಾಲು ಕೂಡ.

ಬಿಲ್ಲವರು ದೀವರಂತೆ ಸಂಘಟನಾತ್ಮಕ ಜೀವನ ನೆಡೆಸುತ್ತಾ ಬಂದವರು. ವಸಾಹತು ಶಾಹಿ ಆಡಳಿತ ವ್ಯವಸ್ಥೆ ಮತ್ತು ಆಧುನಿಕ ಉತ್ಪಾದನಾ ವ್ಯವಸ್ಥೆ ಇವರಲ್ಲಿ ವ್ಯಾಪಕವಾದ ವಿಘಟನೆಯನ್ನು ತಂದಿದೆ. ಹಳ್ಳಿ, ನಗರಗಳಲ್ಲಿ ಹಂಚಿಹೋಗಿರುವ ಇವರು ವಿಭಿನ್ನ ವರ್ಗಗಳಾಗಿ ರೂಪಗೊಂಡಿದ್ದಾರೆ. ವಸಾಹತು ಪೂರ್ವಕಾಲದಿಂದಲೂ ಗೇಣಿದಾರರಾಗಿದ್ದ ಬಹುತೇಕ ಬಿಲ್ಲವರು ದೀವರಂತೆ ಸಂಘಟಿತರಾಗಿ ಹೋರಾಡಿ,

ಭೂಮಿಯನ್ನು ಪಡೆದುಕೊಂಡಿದ್ದಾರೆ. ನಗರಗಳಲ್ಲಿ ನಿರ್ಗತಿಕ ಬಿಲ್ಲವರು ಕೂಲಿಕಾರ್ಮಿಕರಾಗಿದ್ದಾರೆ. ಶ್ರೀಮಂತ ಬಿಲ್ಲವರು ಮುಂಬೈ, ಮಂಗಳೂರು ನಗರಗಳಲ್ಲಿ ಹೋಟೆಲ್ ಉದ್ಯಮ ನಡೆಸುತ್ತಾ ಬಂಡವಾಳ ಶಾಹಿಗಳಾಗಿ ಬೆಳೆಯುತ್ತಿದ್ದಾರೆ. ತಾಳೆ, ಮತ್ತು ತೆಂಗಿನ ಸಸಿಗಳು ಇಂದಿಗೂ ಇಲ್ಲಿ ವ್ಯಾಪಕವಾಗಿರುವುದರಿಂದ ಬಹುಸಂಖ್ಯಾತ ನಿರ್ಗತಿಕ ಬಿಲ್ಲವರು ಇಂದಿಗೂ ಕಳ್ಳು ತೆಗೆದು ಮಾರುವ ವೃತ್ತಿಯನ್ನುಪ್ರಾಥಮಿಕ ವೃತ್ತಿಯಾಗಿಸಿಕೊಂಡೇ ಬದುಕುತ್ತಿದ್ದಾರೆ. ಸರ್ಕಾರ ಪಾನ ನಿರೋಧವನ್ನು ಜಾರಿಗೆ ತಂದರೂ ಬಯಲು ಸೀಮೆಯ ಈಡಿಗರಂತೆ ಇವರು ಪ್ರತಿಭಟನೆ ತೋರದೆಯಿರಲಿಲ್ಲ. ಈ ಭಾಗದಲ್ಲಿ ಬಹುಸಂಖ್ಯಾತರಾಗಿದ್ದವರು ಇವರೇ ಆದ್ದರಿಂದ ಸಂಘಟಿತರಾಗಿ ಹೋರಾಡಲು ಸಾಧ್ಯವಾಯಿತು. ಮೂರ್ತೆದಾರರ ಸಂಘಟನೆಗಳು ವ್ಯಾಪಕವಾಗಿ ಹುಟ್ಟಿಕೊಂಡು ಸರ್ಕಾರವನ್ನು ಪ್ರತಿಭಟಿಸಿ ಪಾನ ನಿರೋಧವನ್ನು ವಾಪಾಸು ಪಡೆಯುವಂತೆ ಮಾಡಿದರು. ಸೇಂದಿಯ ಬೆಲೆ ಹೆಚ್ಚಳ ಮರದ ತೆರಿಗೆ ರದ್ದತಿ ಮೊದಲಾದ ಅವಶ್ಯಕ ಬೇಡಿಕೆಗಳನ್ನು ಸರ್ಕಾರ ಮಾನ್ಯ ಮಾಡುವಂತೆ ಒತ್ತಾಯಿಸಿದರು. ಸರ್ಕಾರ ಮಾನ್ಯಮಾಡಿತು. ಇಂದಿಗೂ ಈ ಭಾಗದಲ್ಲಿ ಬಿಲ್ಲವರು, ಅಂದರೆ ಮೂರ್ತೆದಾರರು, ತಮ್ಮ ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಕಳ್ಳು ತೆಗೆಯುವ ವೃತ್ತಿಯಿಂದ ಪಡೆಯುತ್ತಿದ್ದಾರೆ. ಸ್ವತ: ಅವರೇ ತೆಗೆದು ಮಾರಾಟ ಮಾಡುವ ವ್ಯವಸ್ಥೆ ಇಲ್ಲಿರುವುದರಿಂದ, ಮಧ್ಯವರ್ತಿಗಳ ಮತ್ತು ಗುತ್ತಿಗೆದಾರರ ಶೋಷಣೆಯಿಂದ ಇವರು ಮುಕ್ತರಾಗಿದ್ದಾರೆ. ಇದು ಅವರ ಸಂಘಟನಾತ್ಮಕ ಹೋರಾಟದ ಫಲವಲ್ಲದೇ ಮತ್ತೇನೂ ಅಲ್ಲವೆಂಬುದು ಗಮನಾರ್ಹ. ಸಾಂಸ್ಕೃತಿಕವಾಗಿ, ನಗರ ಮತ್ತು ಹಳ್ಳಿಯಲ್ಲಿರುವ ಬಿಲ್ಲವರು ಆಯಾ ವರ್ಗಾನುಸಾರ ತಮ್ಮ ಆಚರಣೆ, ಹಾಗೂ ವಿಧಿ ವಿಧಾನಗಳಲ್ಲಿ ಆಸಕ್ತಿ ಹೊಂದಿದ್ದಾರೆ. ಹಳ್ಳಿಗಳಲ್ಲಿಯ ಮೂರ್ತೆದಾರರಲ್ಲಿ ಇಂದಿಗೂ ಅವರ ಸಾಂಸ್ಕೃತಿಕ ಬದುಕುಅನನ್ಯತೆಯನ್ನು ಉಳಿಸಿಕೊಂಡಿದೆ. ನಗರದ ಬಿಲ್ಲವರಲ್ಲಿ ನವ ವಸಾಹತುಶಾಹಿಯ ದಟ್ಟ ಪ್ರಭಾವವನ್ನು ಕಾಣಬಹುದು.ತಮ್ಮ ಮೂಲ ಸಂಸ್ಕೃತಿಯ ಪ್ರತೀಕವಾದ ಕೆಲವು ಆಚರಣೆಗಳು ಇವರಲ್ಲಿ ಬೇರೆಯದೇ ಉದ್ದೇಶವನ್ನು ಪಡೆದುಕೊಂಡುಕೆಲವು ಬದಲಾವಣೆಗಳೊಂದಿಗೆ ಇಂದಿಗೂ ಅಸ್ತಿತ್ವದಲ್ಲಿವೆ.

ಈ ಮೂರು ಈಡಿಗ ಸಮುದಾಯಗಳ ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕಿನ ಸ್ವರೂಪಗಳು ಹಿಂದಿನಿಂದ ಇಂದಿನವರೆಗೂ ತಮ್ಮದೇ ಆದ ವಿಧಾನದಲ್ಲಿ ಬೆಳೆದು ಬಂದಿವೆ. ಸಮೂಹ ಜೀವನಾವಸ್ಥೆಯಿಂದ ಚಾರಿತ್ರಿಕ ವಿಕಾಸದೊಡನೆಸಂಕೀರ್ಣಾವಸ್ಥೆಯ ಜೀವನ ವಿಧಾನವನ್ನು ಈ ಮೂರೂ ಪಂಗಡಗಳು ಪಡೆದುಕೊಳ್ಳುತ್ತಾ ಇವೆ. ಉತ್ಪಾದನಾ ವಿಧಾನ ಸಾಧನ ಸಲಕರಣೆಗಳ ಒಡೆತನ ಮತ್ತು ಉತ್ಪಾದನೆಯ ಹಂಚಿಕೆಯ ಸಂಬಂಧದ ಸ್ವರೂಪವು ವಿಕಾಸ ವಾಗುತ್ತಾ ಬಂದಂತೆ ಇಂದು ಸರಳಾವಸ್ಥೆಯ ಜೀವನ ವಿಧಾನ ಸಂಕೀರ್ಣಾವಸ್ಥೆಯ ಕಡೆಗೆ,

ಸಮೂಹ ಕೇಂದ್ರಿತ ಜೀವನವು ವ್ಯಕ್ತಿ ಕೇಂದ್ರಿತ ಜೀವನದ ಕಡೆಗೆ ಸಾಗುತ್ತಿರುತ್ತದೆ. ಇವರ ಜೀವನ ವಿಧಾನವೂ ಈ ಮಾದರಿಯಲ್ಲಿ ರೂಪುಗೊಳ್ಳುವ ಪ್ರಕ್ರಿಯೆಯಲ್ಲಿದೆ. ಈಡಿಗರಂ: ತೆ, ಇತರೆ ಅನುವಂಶಿಕ ವೃತ್ತಿ ಆಧಾರಿತ ಸಮೂಹಗಳ(ಅವಸ್ಥೆಯೂ) ಈ ಮಾದರಿಯಲ್ಲಿ ವಿಕಾಸವಾಗುತ್ತಾ ಬಂದಿದೆ. ಅಂದರೆ ಈ ಬದಲಾವಣೆಯ ಪ್ರಕ್ರಿಯೆ ಯಾವುದೇ ಭಾರತೀಯ ವ್ಯವಸ್ಥೆಯೊಳಗಿನ ಪಾರಂಪರಿಕವೃತ್ತಿ ಆಧಾರಿತ ಸಮೂಹದ ಮೇಲೆ ನಿರಂತರವಾಗಿ ತನ್ನ ಜಾಲವನ್ನು ಹರಿಸುತ್ತಲೇ ಇದೆ. ಈ ಪ್ರಕ್ರಿಯೆ ಕೇವಲ ಈಡಿಗರಿಗೆ ಮಾತ್ರ ಸೀಮಿತವಾಗಿಲ್ಲ ಎನ್ನುವುದು ಗಮನಾರ್ಹ.

# ಅನುಬಂಧ

## I.ಮಾಹಿತಿದಾರರ ವಿಳಾಸ ಮತ್ತು ವಿವರ

| | | |
|---|---|---|
| ೧. ಕರಿಯಪ್ಪ, (ಜೇರುಂಬೆ) | ೭೦ ವರ್ಷ | ಮಡ್ಡಿ ಈಡಿಗರು<br>(ಹಿಂದಿನಿಂದಲೂ, ಈಗಲೂ ಕೃಷಿ ವೃತ್ತಿ ನಿರತರು).<br>ಆನಗೋಳ ವಾಸಿ, ಕೆ.ಆರ್. ಪೇಟೆ ತಾ.<br>ಮಂಡ್ಯ ಜಿಲ್ಲೆ. |
| ೨. ಗಣಪ್ಪ | ೭೦ ವರ್ಷ | ದೀವರು<br>ಕೃಷಿಕರು.<br>ಮನ್ಮನೆ ಗ್ರಾಮ ಸಿದ್ದಾಪುರ ತಾ.<br>ಉತ್ತರ ಕನ್ನಡ. ಜಿಲ್ಲೆ. |
| ೩.ಗಂಗಾಧರಪ್ಪ | ೫೦ವರ್ಷ | ಮಡ್ಡಿ ಈಡಿಗರು.<br>(ಹಿಂದಿನಿಂದ ಕಳ್ಳು ತೆಗೆಯುತ್ತಿದ್ದು ಇಂದು<br>ಕೃಷಿಯನ್ನು ಆಧರಿಸಿದ್ದಾರೆ).<br>ಅಂಚೆಕೊಪ್ಪಲು ಗ್ರಾಮ, ತಿಪಟೂರು ತಾ.<br>ತುಮಕೂರು ಜಿಲ್ಲೆ. |
| ೪.ಗುಂಡಮ್ಮ (ದೊಡ್ಡಮ್ಮ) | ೮೦ ವರ್ಷ | ಕಲ್ಲುವಡ್ಡರು(ರಸ್ತೆ ಕೂಲಿ ಕೆಲಸ,)<br>ಕಂಚೀಪುರ, ಹೊಸದುರ್ಗ ತಾ., ಚಿತ್ರದುರ್ಗ ಜಿಲ್ಲೆ. |
| ೫.ಗುತ್ಯಮ್ಮ | ೧೦೩ವರ್ಷ | ಮಡ್ಡಿ ಈಡಿಗರು.<br>(ಹಿಂದೆ,ವ್ಯವಸಾಯ. ಈಗ ಚಿಲ್ಲರೆವ್ಯಾಪಾರಿಗಳು)<br>ನೇರ್ಲಿಗೆ, ಅಂಚೆ, ಅರಸೀಕೆರೆ ತಾ.ಹಾಸನ ಜಿಲ್ಲೆ. |

| | | |
|---|---|---|
| ೬. ಚಂದ್ರಶೇಖರ್ ಈ. | ೩೬ ವರ್ಷ | ಈಡಿಗರು (ಆಂಧ್ರಮೂಲದವರು)<br>ಸಾರಾಯಿ ವೆಂಡರ್, ಕಮಲಾಪುರ ವಾಸಿ<br>ಹೊಸಪೇಟೆ ತಾ, ಬಳ್ಳಾರಿ ಜಿಲ್ಲೆ. |
| ೭. ಚಂದ್ರಪೂಜಾರ್ | ೪೦ ವರ್ಷ | ಬಿಲ್ಲವರು<br>ಉಪನ್ಯಾಸಕರು, ಪದವಿಪೂರ್ವ ಕಾಲೇಜು,<br>ಕುರ್ನಾಡು, ಬಂಟ್ವಾಳ ತಾ. ಮುಡಿಪು (ದ.ಕ.) |
| ೮. ಜನಾರ್ಧನ ಪೂಜಾರ್ | ೪೫ ವರ್ಷ | ಬಿಲ್ಲವರು<br>ತಾಳೆಮರದ ಕಳ್ಳು ತೆಗೆಯುವವರು, ಅಂಗನೂರು<br>ಮುಡಿಪು ಅಂಚೆ, ಕುರ್ನಾಡು ಗ್ರಾಮ<br>ಬಂಟ್ವಾಳ ತಾ. (ದ.ಕ.) |
| ೯. ತಿಮ್ಮಕ್ಕ | ೫೦ ವರ್ಷ | ಮಾದಿಗರು<br>ಕೃಷಿ ಕಾರ್ಮಿಕರು, ಕಾಲೋನಿ ತಣಿಗೆಬೈಲು ಅಂಚೆ<br>ತರೀಕೆರೆ ತಾ., ಚಿಕ್ಕಮಗಳೂರು. ಜಿಲ್ಲೆ. |
| ೧೦. ತಿಮ್ಮಬೋವಿ | ೭೦ ವರ್ಷ | ಬೋವಿ (ಮಣ್ಣು ವಡ್ಡರು)<br>(ಮಣ್ಣು ಹಗೆಯುವ ಕೂಲಿ ಕಾರ್ಮಿಕರು)<br>ಕಂಚೀಪುರ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ. |
| ೧೧. ದೇವಪ್ಪ ಹಾಲ | ೩೬ ವರ್ಷ | ತೆಂಗಿನ ದೀವರು<br>(ಹಿಂದೆ ಕೂಲಿ ಕೃಷಿಕಾರ್ಮಿಕರು, ಇಂದು ಸ್ವಂತ<br>ಭೂಮಿಯಿಂದ ಕೃಷಿ ಮಾಡುತ್ತಿದ್ದಾರೆ),<br>ಮನ್ಮನೆ ಗ್ರಾಮ, ಸಿದ್ಧಾಪುರ ತಾ. ಉ.ಕ. |

| | | |
|---|---|---|
| ೧೨.ದುಗ್ಗಪ್ಪ | ೮೦ವರ್ಷ | ಮಾದಿಗರು<br>ಕೃಷಿ ಕೂಲಿ ಕೆಲಸ, ಕಂಚೀಪುರ, ಹೊಸದುರ್ಗ ತಾ. |
| ೧೩.ದೊಡ್ಡಗಂಗಪ್ಪ | ೧೦೪ವರ್ಷ | ಬೆಲ್ಲದ ಈಡಿಗರು<br>(ಈಚಲು ಕಳ್ಳಿನಿಂದ ಬೆಲ್ಲ ತಯಾರಿಸುತ್ತಿದ್ದವರು<br>ಇಂದು ಕೂಲಿ ಕೃಷಿ ಕಾರ್ಮಿಕರಾಗಿ ಜೀವನ<br>ನಡೆಸುತ್ತಿದ್ದಾರೆ), ತಾರೀಕೆರೆ ಗ್ರಾಮ,<br>ಹೊಸದುರ್ಗ ತಾ., ಚಿತ್ರದುರ್ಗ ಜಿಲ್ಲೆ. |
| ೧೪.ನೀಲಪ್ಪ ಕೆ. | ೪೩ವರ್ಷ | ಕುರುಬರು ವ್ಯವಸಾಯ<br>ಕಮಲಾಪುರ, ಹೊಸಪೇಟೆ ತಾ., ಬಳ್ಳಾರಿ ಜಿಲ್ಲೆ. |
| ೧೫.ಪಾಲಾಕ್ಷೀ ಗೌಡ ಎನ್.ಟಿ. | ೬೫ವರ್ಷ | ಮಡ್ಡಿ ಈಡಿಗರು<br>(ಹಿಂದೆ ಸೇಂದಿ ಗುತ್ತಿಗೆದಾರರು, ಈಗ ಕೃಷಿಕರು<br>ಮತ್ತು ಭಾರೀ ಭೂಮಾಲಿಕರು),<br>ಸಖರಾಯ ಪಟ್ಟಣ ಕಡೂರು ತಾ.,<br>ಚಿಕ್ಕಮಗಳೂರು ಜಿಲ್ಲೆ. |
| ೧೬.ಬಂಗಾರಪ್ಪ | ೪೫ ವರ್ಷ | ದೀವರು<br>ಸರ್ಕಾರಿ ವೃತ್ತಿ, ಮಾಲ್ವೆ ಗ್ರಾಮ, ಸಾಗರ ತಾ.<br>ಶಿವಮೊಗ್ಗ ಜಿಲ್ಲೆ. |
| ೧೭.ಬಾಲಾಪ್ಪು ಪೂಜಾರಿ | ೫೫ ವರ್ಷ | ಬಿಲ್ಲವರು<br>ಕಳ್ಳಿನಿಂದ ಬೆಲ್ಲ ತೆಗೆಯುವ ವೃತ್ತಿ, ಅಗ್ರಶಾಲೆ ಮನೆ<br>ಕುರ್ನಾಡು ಗ್ರಾಮ, ಮುಡಿಪು ಅಂಚೆ<br>ಬಂಟ್ವಾಳ ತಾ. ದ.ಕ. |

| | | |
|---|---|---|
| ೧೮.ರತ್ನಮ್ಮ | ೪೦ವರ್ಷ | ಬೋವಿ, (ಕಲ್ಲು ವಡ್ಡರು)<br>ರಸ್ತೆ ಕೂಲಿ ಕೆಲಸ, ಜೆಲ್ಲಿ ಹೊಡೆಯುವುದು<br>ಇತ್ಯಾದಿ), ಸಖರಾಯ ಪಟ್ಟಣ, ಕಡೂರು ತಾ.<br>ಚಿಕ್ಕಮಗಳೂರು ಜಿಲ್ಲೆ. |
| ೧೯.ರಾಜಣ್ಣ ಪಿ. | ೪೦ ವರ್ಷ | ಬೆಲ್ಲದ ಈಡಿಗರು (ಆಂಧ್ರಮೂಲದವರು)<br>ಈಚಲು ಕಳ್ಳು, (ಸೇಂದಿ)ತೆಗೆಯುವ ವೃತ್ತಿ<br>ಕಗ್ಗಲಕಟ್ಟೆ ಗ್ರಾಮ, ಹೊಸದುರ್ಗ ತಾ.<br>ಚಿತ್ರದುರ್ಗ ಜಿಲ್ಲೆ. |
| ೨೦.ರಾಮಣ್ಣ ಹೆಚ್ . | ೬೦ ವರ್ಷ | ಮಡ್ಡಿ ಈಡಿಗರು.<br>(ಹಿಂದೆ ಸೇಂದಿ ಗುತ್ತಿಗೆದಾರರು ಈಗ ವ್ಯಾಪಾರ)<br>ಕಂಚೀಪುರ ವಾಸ, ಹೊಸದುರ್ಗ ತಾ.<br>ಚಿತ್ರದುರ್ಗ ಜಿ. |
| ೨೧.ರಾಮಣ್ಣ ಕುಂಬ್ರಿ | ೪೦ ವರ್ಷ | ದೀವರು<br>(ಈಗ ಕೃಷಿ, ಹಿಂದೆ ಗೇಣಿದಾರರು),<br>ಮಸ್ಮನೆ ಗ್ರಾಮ, ಸಿದ್ಧಾಪುರ ತಾ. ಉ.ಕ. ಜಿ. |
| ೨೨.ರಾಮಲಿಂಗಯ್ಯ ವಿ. | ೪೫ ವರ್ಷ | ಮಡ್ಡಿ ಈಡಿಗರು<br>ಈಗ ಸಾರಾಯಿ ವೆಂಡರ್ ಹಿಂದೆ<br>ಸೇಂದಿಮಾರುತ್ತಿದ್ದವರು, ದೊಡ್ಡ ಪೇಕಲವಟ್ಟಿ<br>ಗ್ರಾಮ, ಹೊಸದುರ್ಗ ತಾ., ಚಿತ್ರದುರ್ಗ ಜಿಲ್ಲೆ. |

| | | |
|---|---|---|
| ೨೩. ಲೋಕಯ್ಯ ಪೂಜಾರಿ | ೬೦ವರ್ಷ | ಬಿಲ್ಲವರು<br>ಕಳ್ಳು ತೆಗೆಯುವವರು ಈಗಲೂ, ಕುರ್ನಾಡು ಗ್ರಾಮ<br>ಬೇಚಿಮಾರು ಮನೆ, ಮುಡಿಪು ಅಂಚೆ<br>ಬಂಟ್ವಾಳ ತಾ. ದ.ಕ.ಜಿ. |
| ೨೪. ವೆಂಕಟೇಶ ಮೂರ್ತಿ | | ೩.೨ ವರ್ಷ ಬ್ರಾಹ್ಮಣರು<br>ಕೆಮಿಸ್ಟ್, ಅಮರೇಶ್ವರ ಡಿಸ್ಟಿಲರಿ<br>ಬೂದುಗುಪ್ಪ ಕ್ರಾಸ್, ಕೊಪ್ಪಳ ತಾ.<br>ರಾಯಚೂರು ಜಿಲ್ಲೆ. |
| ೨೫. ಶಿವಪ್ಪ ಕೆ. | ೨೫ವರ್ಷ | ದೀವರು<br>ಎಂ.ಫಿಲ್. ವಿದ್ಯಾರ್ಥಿ,<br>ಶಿರಿನಾಯಕನ ಕೊಪ್ಪ ಗ್ರಾಮ,<br>ತತ್ತೂರು ಅಂಚೆ, ಸೊರಬ ತಾ., ಶಿವಮೊಗ್ಗ ಜಿಲ್ಲೆ. |
| ೨೬. ಸೋಮ್ಲಾ ನಾಯ್ಕ | ೪೦ವರ್ಷ | ಲಂಬಾಣಿ<br>ಕೃಷಿ ವೃತ್ತಿ, ಹಟ್ಟಿಸ್ಟ್ಯಾಂಡ್, ಕಡೂರು ತಾ.<br>ಚಿಕ್ಕಮಗಳೂರು ಜಿ. |
| ೨೭ಹುಚಪ್ಪ ಮಾಸ್ತರ ಎನ್. | ೭೦ ವರ್ಷ | ದೀವರು<br>ನಿವೃತ್ತ ಶಿಕ್ಷಕರು, ಹಿರೇಮನೆ ಗ್ರಾಮ<br>ಚೂರಿಕಟ್ಟೆ ಅಂಚೆ, ತಾಳಗುಪ್ಪ, ಸಾಗರ ತಾ.<br>ಶಿವಮೊಗ್ಗ ಜಿಲ್ಲೆ. |

೨೮. ಹೋಬಳಯ್ಯ — ೬೦ ವರ್ಷ — ಮಡ್ಡಿ ಈಡಿಗರು
ಕೃಷಿ ಕಾರ್ಮಿಕರು, ಸಖರಾಯಪಟ್ಟಣ,
ಕಡೂರು ತಾ., ಚಿಕ್ಕಮಗಳೂರು ಜಿಲ್ಲೆ.

## II ಆಕರಸೂಚಿ

### (I) ಗ್ರಂಥಗಳು:


೧. ಅನಂತಮೂರ್ತಿ ಯು.ಆರ್. — ೧೯೯೬. — ಬತ್ತಲೆ ಪೂಜೆ ಯಾಕೆ ಕೂಡದು
ಅಕ್ಷರ ಪ್ರಕಾಶನ, ಹೆಗ್ಗೋಡು. (ಸಾಗರ).

೨. ಅನಂತರಂಗಾಚಾರ್. ಎಸ್. (ಸಂ) — ೧೯೬೨ — ಸೂಕ್ತಿ ಸುಧಾರ್ಣವಂ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೩. ಉಮಾಪತಿ ಟಿ.ಸಿ. (ಅನು) — ೧೯೮೫ — ವೈಜ್ಞಾನಿಕ ಕಮ್ಯುನಿಸಂ ಎಂದರೇನು?
ನವಕರ್ನಾಟಕ ಪಬ್ಲಿಕೇಶನ್,
ಪ್ರೈ. ಲಿಮಿಟೆಡ್ . ಬೆಂಗಳೂರು.

೪. ಕಟ್ಟಿ. ಎ. ಆರ್. — ೧೯೯೩ — ಭಾರತೀಯ ಸಾಮಾಜಿಕ ಸಮಸ್ಯೆಗಳು ಹಾಗು
ಸಮಾಜಕಲ್ಯಾಣ,
ಪೂರ್ಣಪ್ರಜ್ಞ ಪ್ರಕಾಶನ, ರಾಮದುರ್ಗ. ೨೩.

೫. ಕಲ್ಬುರ್ಗಿ ಎಂ.ಎಂ. (ಸಂ) — ೧೯೯೪ — ಕರ್ನಾಟಕ ಕೈಫಿಯತ್ತುಗಳು
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ - ವಿದ್ಯಾರಣ್ಯ.

೬. [illegible] ಕೀರ್ತಿನಾಥ — ೧೯೯೫ — ಶಿವಮೊಗ್ಗ ಜಿಲ್ಲೆಯ ಸಮಾಜವಾದಿ ಚಳುವಳಿಗಳು
(ಅಪ್ರಕಟಿತ ಎಂ.ಫಿಲ್ .ಪ್ರಬಂಧ)

೭.ಕುವೆಂಪು, ೧೯೭೪ ಕರ್ಣಾಟ ಭಾರತ ಕಥಾಮಂಜರಿ
ಮಾಸ್ತಿವೆಂಕಟೇಶ ಅಯ್ಯಂಗಾರ್ (ಸಂ) ಪ್ರಸಾರಾಂಗ. ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೮.ಕುವೆಂಪು. ೧೯೯೨ ಕಾನೂರು ಹೆಗ್ಗಡತಿ
ಉದಯರವಿ ಪ್ರಕಾಶನ, ಮೈಸೂರು.

೯.ಕುವೆಂಪು ೧೯೬೭ ಮಲೆಗಳಲ್ಲಿ ಮದುಮಗಳು
ಉದಯರವಿ ಪ್ರಕಾಶನ, ಮೈಸೂರು.

೧೦.ಚಂದ್ರಶೇಖರ ಕಂಬಾರ, ೧೯೯೫ ಕನ್ನಡ ಶೈಲಿ ಕೈಪಿಡಿ
ಅಣ್ಣಾಮಲೈ ಇ(ಪ್ರ ಸಂ) ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ.

೧೧.ಚಿನ್ನಪ್ಪಗೌಡ .ಕೆ. ೧೯೯೦ ಭೂತಾರಾಧನೆ
ಒಂದು ಜಾನಪದೀಯ ಅಧ್ಯಯನ
ಮದಿಪು ಪ್ರಕಾಶನ, ಮಂಗಳ ಗಂಗೋತ್ರಿ. (ದ.ಕ.).

೧೨.ಜಯಪ್ರಕಾಶ್ ಬಂಜೆಗೆರೆ ೧೯೯೩ ಸಾಹಿತ್ಯ ವಿಮರ್ಶೆ - ೯೨
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೩.ದಯಾನಂದ. ನಾ (ರೂಪಾಂತರ) ೧೯೯೫ ನಮ್ಮ ಕಥೆ (ವೋಲ್ಗಾದಿಂದ ಗಂಗೆಗೆ)
ಶರತ್ ಪ್ರಕಾಶನ, ಬೆಂಗಳೂರು.

೧೪.ದೇವೇಂದ್ರ ದೇಸಾಯಿ. ೧೯೭೯ ಹಾವನೂರ ವರದಿ ಸಮಗ್ರ ಅಧ್ಯಯನ (ಸಂ)
ಚೈತ್ರ ಶಿಲ್ಪ ಪ್ರಕಾಶನ, ಮೈಸೂರು-೧೪.

೧೫.ನಾಯಕ್ ಎನ್ .ಆರ್. ೧೯೮೩ ಕೂಸಾಯ್ತು ನಮ್ಮ ಕೊಮರಾಗೆ
ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೧೬.ಪರಮಶಿವಯ್ಯ ಜೀ. ಶಂ. ೧೯೭೯ ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ
ಮೈಸೂರು-೧೨.

೧೭.ಮಯ್ಯ ಪಾ.ನ. ೧೯೯೫ ಕೋಟೆದವರು (ಕೋಟ ಜನಾಂಗದ ಸಾಂಸ್ಕೃತಿಕ
ಅಧ್ಯಯನ), ಪಾರಂಪಳ್ಳಿ ಪ್ರಕಾಶನ, ಮಂಗಳೂರು.

೧೮.ಮಲ್ಲಿಕಾರ್ಜುನ ಶಾಸ್ತ್ರಿ ಮಸ್ಕಿ (ಅನು) ದ್ವಂದ್ವ ಮಾನ ಮತ್ತು ಚಾರಿತ್ರಿಕ ಭೌತವಾದದ
೧೯೮೬ ಮೂಲ ಪಾಠಗಳು,
ನವಕರ್ನಾಟಕ ಪಬ್ಲಿಕೇಶನ್ (ಪ್ರೈ) ಲಿ.ಬೆಂಗಳೂರು.

೧೯.ರಾಜರತ್ನಂ ಜಿ.ಪಿ. ೧೯೯೦ (ಪ್ರ.ಮು ೧೯೩೪), ರತ್ನನ ಪದಗಳು
ಜಿ.ಪಿ. ರಾಜರತ್ನಂ ಸ್ಮಾರಕ, ಬೆಂಗಳೂರು.

೨೦.ರಾಮಚಂದ್ರಪ್ಪ ಬರಗೂರು ೧೯೯೦ ರಾಜಕೀಯ ಚಿಂತನೆ
ಬಯಲು ಪರಿಷತ್, ಬೆಂಗಳೂರು.

೨೧.ರಾಮಚಂದ್ರಾಚಾರ್. ಡಿ.ಬಿ. ೧೯೯೩ ಕುಡಿಯರ ಸಂಸ್ಕೃತಿ (ಉಪಸಂಸ್ಕೃತಿ ಅಧ್ಯಯನ
ಮಾಲೆ), ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು.

೨೨.ಲಕ್ಷ್ಮಣ ತೆಲಗಾವಿ (ಸಂ) ೧೯೯೧ ಸಂಶೋಧನ (ಎಂ. ಚಿದಾನಂದ ಮೂರ್ತಿ ಗೌರವ
ಸಂಪುಟ), ಚಿದಾನಂದ ಮೂರ್ತಿ ಅಭಿನಂದನಾ
ಸಮಿತಿ, ಬೆಂಗಳೂರು.

೨೩.ವೆಂಕಟೇಶ. ಜಿ. ಮಲ್ಲೇಶ್ವರಂ ೧೯೯೬
ಶಿಳಿವ ಶೇಜದ ಮುಂದೆ
ಸಾಹಿತ್ಯ ಪ್ರಕಾಶ, ಹುಬ್ಬಳ್ಳಿ.

೨೪.ಶಿವಕುಮಾರ ಸ್ವಾಮಿ ಸಿ.ಎಸ್. (ಸಂ) ೧೯೮೮
ಕರ್ನಾಟಕದ ಜಾತ್ರೆಗಳು
ಕನ್ನಡ ವಿಭಾಗ
ಸ್ನಾತಕೋತ್ತರ ಕೇಂದ್ರ,. ಬಿ.ಆರ್. ಪ್ರಾಜೆಕ್ಟ್.

೨೫.ಶಿವರಾಮಕಾರಂತ ೧೯೯೨
ಚೋಮನದುಡಿ
ಎನ್.ಬಿ. ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್
ಕುಮಾರ ಪಾರ್ಕ್ ಈಸ್ಟ್, ಬೆಂಗಳೂರು.

೨೬.ಸತ್ಯನಾರಾಯಣ . ಹೊ.ಮ. ೧೯೯೧
ಈಡಿಗ ಜನಾಂಗ ಒಂದು ಅಧ್ಯಯನ
ಲಾವಣ್ಯ ಪ್ರಕಾಶನ, ಮೈಸೂರು.

೨೭.ಸ್ವಾಮಿ ಕೆ.ಪಿ.. ೧೯೯೦
ಮದ್ಯಪಾನ
ನವಕರ್ನಾಟಕಪಬ್ಲಿಕೇಶನ್.(ಪ್ರೈ)ಲಿ.ಬೆಂಗಳೂರು.

೨೮.ಸೂರ್ಯನಾಥ್ ಯು. ಕಾಮತ್ (ಸಂ) ೧೯೮೫
ಕರ್ನಾಟಕ ಗ್ಯಾಸೆಟಿಯರ್ ಭಾಗ - ೨
ಕರ್ನಾಟಕ ಸರ್ಕಾರ, ಬೆಂಗಳೂರು-೯.

೨೯.ಸೂರ್ಯನಾಥ್ ಯು ಕಾಮತ್ (ಸಂ) ೧೯೮೬
ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩
ಕರ್ನಾಟಕ ಸರ್ಕಾರ ಬೆಂಗಳೂರು.

೩೦.ಹನುಮಂತಯ್ಯ ಇ. ೧೯೭೯
ಈಡಿಗ ಜನಾಂಗದ ಚರಿತ್ರೆ
ಪ್ರದೇಶ ಆರ್ಯ ಈಡಿಗರ ಯುವಕ ಸಂಘ ರಿ.
ಬೆಂಗಳೂರು.

೩. ನಿಯತ ಕಾಲಿಕೆಗಳು

೧. ಕರ್ನಾಟಕ ಅಧಿನಿಯಮ (ಸಂ) ೨೧.೧೯೬೬

ಕರ್ನಾಟಕ ಅಬ್ಕಾರಿ ಅಧಿನಿಯಮ -೧೯೬೫

ವಿಧಿ ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ.

ಕರ್ನಾಟಕ ಸರ್ಕಾರ ಬೆಂಗಳೂರು.

೨. ಕರಪತ್ರ (ಆರ್ಯ ಈಡಿಗರ ಸಂಘದ ಸುವರ್ಣಮಹೋತ್ಸವ ಸಮಿತಿ

೧೯೯೫ ಬೆಂಗಳೂರು.

೩. ನಿರ್ದೇಶನಾಲಯ

ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ.

ಕರ್ನಾಟಕ ಅಂಕಿ ಅಂಶಗಳ ನೋಟ ೧೯೯೨-೯೩

ಪ್ರಕಟಣೆ ೧೯೯೩. ಬೆಂಗಳೂರು.

೪. -------ಅದೇ-------------

--------ಅದೇ-----------

ಕರ್ನಾಟಕ ಅಂಕಿ ಅಂಶಗಳ ನೋಟ ೧೯೯೩-೯೪

ಪ್ರಕಟಣೆ ೧೯೯೪. ಬೆಂಗಳೂರು.

೫. --------ಅದೇ----------

ಕರ್ನಾಟಕ ಅಂಕಿ ಅಂಶಗಳ ನೋಟ ೧೯೯೪-೯೫

ಪ್ರಕಟಣೆ ೧೯೯೬. ಬೆಂಗಳೂರು.

೬. ರಾಮಯ್ಯ ಕೆ.

ಈಚಲು ಮರದಮ್ಮನ ಹಾಡು

ಪಂಚಮ

ಸಂ- ಗೋವಿಂದಯ್ಯ

ಸಂಚಿಕೆ -೭ ೧೯೮೪

ವಿನಯ ಪ್ರಿಂಟರ್ಸ್ ಮೈಸೂರು.

೭. ಲಕ್ಷ್ಮಣ ಕೊಡಸೆ. (ಸಂ)

"ಈಡಿಗರ ಜನಾಂಗದ ಇತಿಹಾಸ ಒಂದು ನೋಟ"

'ಈಡಿಗ' ಸುವರ್ಣ ಮಹೋತ್ಸವ ಸಂಚಿಕೆ ೧೯೯೫

ಪುಟಸಂಖ್ಯೆ ೨೪-೩೧

ಕರ್ನಾಟಕ ಆರ್ಯ ಈಡಿಗರ ಸಂಘ (ರಿ)

ಬೆಂಗಳೂರು.

೮. ವಸಂತ ಬನ್ನಾಡಿ

ಬಂಡವಾಳ ಶಾಹಿ ಪರಿಸರ

ಅರಿವು ಬರಹ ಟ್ರಸ್ಟ್ ರಿ-೧೯೯೩

ಕೊಣಾಜೆ. (ದ.ಕ.).

೯. ವೆಂಕಟಪ್ಪ ಅಪ್ಪಗೆರೆ

ಬಹುರಾಷ್ಟ್ರೀಯ ಕಂಪನಿಗಳಿಂದ ಸಂಸ್ಕೃತಿ ನಾಶ ಹೇಗೆ ಸಾಧ್ಯ?

ಸಂಕ್ರಮಣ

ಸಂ. ಚಂದ್ರಶೇಖರ ಪಾಟೀಲ

ಸಂಪುಟ. ೩೧ ಸಂಚಿಕೆ -೨

ಫೆಬ್ರವರಿ ೧೯೯೬ ಧಾರವಾಡ.

**ENGLISH BOOKS**


1.CHINNAPPA REDDY (Chairman) 1990
Report of the Third Backward Classes Commission
-II. Govt. of Karnataka Bangalore.

2.EDGAR THURSTON K.RANGACHARY. 1987
Castes and tribs of southern india
Volume- II
Assian Educational Service
New Delhi- Madras.

3.LOVIS F ISCHER. 1992
The Essential Gandhi
Vintage Book Edition
February- 1972. New Delhi.

4.ROBERT P. GWINN (Chirman) 1992
The New Encyclo paedia Britanica
Volume- 14
Macro paedia
Knowledge in depth
15th Edition London.

5.SRI SATHYAN (Ed) 1967
Mysore State Gezeteer
Govt. press
Bangalore.

6.VENKATA SWAMY. T. 1986
Report of the Karnataka Second
Backward Classes Commission
-III Govt of Karnataka.

7.WILLSON. H.H. 1855
Glossary of Judicial and Revenue terms
(I. Official Doccuments Relating to the
Administration of the Govet of British India)

8. W M H ALLEN AND CO.
Book Seller to the Honarable East India Company London.

## ಪಾನ ನಿರೋಧವನ್ನು ಕುರಿತ ಸಂಕ್ಷಿಪ್ತ ಟಿಪ್ಪಣಿ

ಟಿಪ್ಪುಸುಲ್ತಾನನು ತನ್ನ ರಾಜ್ಯಾದ್ಯಾಂತ ಸಾರಾಯಿ ಹಾಗೂ ಗಾಂಜಗಳ ಮಾರಾಟವನ್ನು ನಿಷೇಧಿಸಿದ್ದನು. ಈ ನಿಷೇಧವು ೧೭೮೭ ಡಿಸೆಂಬರ್ ನಿಂದ ೧೭೮೮ರವರೆಗೆ ಜಾರಿಯಲ್ಲಿತ್ತು. ತನ್ನ ಸೈನ್ಯದಲ್ಲಿಯೂ ಯುರೋಪಿಯನ್ ರನ್ನು ಬಿಟ್ಟು ಉಳಿದವರಿಗೆ ಪಾನ ಪ್ರತಿಬಂಧವನ್ನು ವಿಧಿಸಿದ್ದನು. ಸ್ವತಂತ್ರ ಪೂರ್ವದಲ್ಲಿಯೇ ಕುಡಿತದ ದುಷ್ಪರಿಣಾಮಗಳನ್ನು ಭಾರತೀಯ ನ್ಯಾಷನಲ್ ಕಾಂಗ್ರೆಸ್ ಮನಗಂಡಿತ್ತಲ್ಲದೆ, ಅದರ ನಿರೋಧಕ್ಕೂ ಗಮನ ಹರಿಸಿತ್ತು. ೧೯೩೦ರಲ್ಲಿ ಅಸಹಕಾರ ಚಳುವಳಿಯ ಒಂದು ಅಂಗವಾಗಿ ಮದ್ಯದ ಗಡಂಗುಗಳ ತಡೆವಾಗಲು (ಪಿಕೆಟಿಂಗ್ ) ಸಹ ಸೇರಿಕೊಂಡಿತು. ಈ ತಡೆಗಾವಲು ಹಳೇ ಮೈಸೂರಿನ ನಗರ ಪಟ್ಟಣಗಳಿಗೂ ವ್ಯಾಪಿಸಿತು. ೧೯೩೭ರಲ್ಲಿ ಕಾಂಗ್ರೆಸ್ ಮಂತ್ರಿಗಳು ಬ್ರಿಟೀಷ್ ಪ್ರಾಂತ್ಯಗಳಲ್ಲಿ ಅಧಿಕಾರಕ್ಕೆ ಬಂದಾಗ ಅವು ಪಾನ ನಿರೋಧವನ್ನು ತಮ್ಮ ಧೋರಣೆಯ ಭಾಗವಾಗಿ ಒಪ್ಪಿಕೊಂಡವು.

ಹಳೆ ಮೈಸೂರು ಪ್ರದೇಶದಲ್ಲಿ ಪ್ರಾಯೋಗಿಕವಾಗಿ ಪಾನ ಪ್ರತಿಬಂಧವನ್ನು ರಾಮನಗರ ಹಾಗು ಚನ್ನಪಟ್ಟಣ ತಾಲೂಕುಗಳಲ್ಲಿ ಕೈಗೊಳ್ಳಲಾಯಿತು. ೧೯೪೦ರ ದಶಕದಲ್ಲಿ ಸರ್ಕಾರ ಹಾಗು ಬೆಂಗಳೂರಿನ ದೀನ ಸೇವಾ ಸಂಘಗಳಂತಹ ಖಾಸಗಿ ಸಂಸ್ಥೆಗಳು ಪಾನ ಪ್ರತಿಬಂಧ ಪ್ರಚಾರ ಕಾರ್ಯಕ್ರಮವನ್ನು ಹಳೇ ಮೈಸೂರು ಪ್ರದೇಶದಲ್ಲೆಲ್ಲಾ ಕೈಗೊಂಡವು. ನಂತರ ೧೯೪೭ರಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲೂಕು ಹಾಗು ತುಮಕೂರು ಜಿಲ್ಲೆಯ ಪಾವಗಡ ತಾಲೂಕುಗಳಲ್ಲಿ ಪಾನ ನಿರೋಧವನ್ನು ಜಾರಿಗೆ ತರಲಾಯಿತು. ಅದೇ ವರ್ಷದಲ್ಲಿ ಶೇಕಡ ೨೦ರಷ್ಟು ಹೆಂಡದ ಅಂಗಡಿಗಳನ್ನು ಪ್ರತಿ ವರ್ಷ ಕಡಿತ ಮಾಡುವ ನಿಯಮವೊಂದನ್ನು ರೂಪಿಸಲಾಯಿತು. ಹಂತಹಂತವಾಗಿ ಮೈಸೂರು ಪಾನ ನಿರೋಧ ಅಧಿನಿಯಮ ೧೯೪೮ನ್ನು ರಾಜ್ಯದಲ್ಲಿ ಜಾರಿಗೆ ತರಲಾಯಿತು. ೧೯೫೭ರ ವೇಳೆಗೆ ಕೇವಲ ಐದು ಜಿಲ್ಲೆಗಳು (ಚಿತ್ರದುರ್ಗ, ತುಮಕೂರು, ಕೋಲಾರ, ಶಿವಮೊಗ್ಗ, ಹಾಗೂ ಚಿಕ್ಕಮಗಳೂರು) ಮತ್ತು ಹಾಸನ ಜಿಲ್ಲೆಯ ನಾಲ್ಕು ತಾಲೂಕುಗಳು ಹಾಗೂ ಬೆಂಗಳೂರು ಜಿಲ್ಲೆಯ ಎರಡು ತಾಲೂಕುಗಳು ಪಾನ ಪ್ರತಿಬಂಧದ ಅಡಿಯಲ್ಲಿ ಬಂದಿದ್ದವು. ೧೯೪೯ರ ಮುಂಚೆ ಪಾನ ನಿರೋಧ ಅಧಿಸೂಚನೆಯ ಪ್ರಕಾರ ಬೆಳಗಾವಿ ಪ್ರದೇಶದಲ್ಲಿ ಏಪ್ರೀಲ್ ೧೯೫೦ರಿಂದಲೇ ಪೂರ್ಣ ಪ್ರಮಾಣದ ಪಾನ ಪ್ರತಿಬಂಧವನ್ನು ತರಲಾಗಿತ್ತು. ಜಿಲ್ಲಾ ಕಲೆಕ್ಟರ್ ಗಳಿಗೆ ಇದನ್ನು ಜಾರಿಗೆ ತರಲು ಪೂರ್ಣ ಅಧಿಕಾರವನ್ನು ಕೊಡಲಾಗಿತ್ತು. ಪಾನ ನಿರೋಧ ಹಾಗು ಅಬಕಾರಿಯ ಜಿಲ್ಲಾ ಇನ್ಸಪೆಕ್ಟರ್ ಹಾಗೂ ಉಪ ಇನ್ಸ್ ಪೆಕ್ಟರ್

ಜಿಲ್ಲಾಧಿಕಾರಿಗಳಿಗೆ ಸಹಾಯಕರಾಗಿದ್ದರು. ೧೯೩೭ರ ಮದ್ರಾಸು ಪಾನ ನಿರೋಧ ಅಧಿನಿಯಮದಂತೆ ದಕ್ಷಿಣ ಕನ್ನಡ ಬಳ್ಳಾರಿ ಹಾಗು ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲೂಕುಗಳಲ್ಲಿ ಪಾನ ನಿರೋಧವನ್ನು ಜಾರಿಗೆ ತರಲಾಗಿತ್ತು. ಅದಕ್ಕೆ ಮೊದಲು ಮತ್ತು ಬರಿಸುವ ವಿವಿಧ ವಸ್ತುಗಳನ್ನು ಅನುಮತಿ ಪಡೆದ ಅಂಗಡಿಗಳಲ್ಲಿ ಮಾತ್ರ ಮಾರಬಹುದಾಗಿತ್ತು. ಮೊದಲಿಗೆ ಪಾನ ನಿರೋಧ ಕಾರ್ಯಾಲಯದ ಸಿಬ್ಬಂದಿಗಳೇ ಪ್ರತಿಬಂಧಕಾರ್ಯದ ಜವಾಬ್ದಾರಿ ಹೊತ್ತಿದ್ದು ೧೯೫೬ರಲ್ಲಿ ಪೋಲಿಸ್ ಇಲಾಖೆಗೆ ಅದನ್ನು ವರ್ಗಾಯಿಸಲಾಯಿತು. ಹಳೆಯ ಕೊಡಗು ಸಂಸ್ಥಾನದ ೧೯೪೬ರಅಧಿನಿಯಮ ಒಂದರ ಪ್ರಕಾರ ಕೊಡಗು ಜಿಲ್ಲೆಯಲ್ಲಿ ಏಪ್ರಿಲ್ ೧೯೪೬ ರಿಂದ ಮೊದಲ ಜಾರಿಗೆ ಪಾನ ಪ್ರತಿಬಂಧವನ್ನು ಅಳವಡಿಸಲಾಯಿತು. ಇದರಿಂದಾಗಿ ೧೯೫೬ರಲ್ಲಿ ವಿಶಾಲ ಕರ್ನಾಟಕ ರೂಪಿಸುವ ವೇಳೆಗೆ ಹಳೇ ಮೈಸೂರಿನ ಕೆಲವು ಜಿಲ್ಲೆಗಳು ಹಾಗೂ ಕಲ್ಬುರ್ಗಿ ಪ್ರದೇಶಗಳ ವಿನಾ ಉಳಿದಂತೆ ಪಾನ ನಿರೋಧವು ಜಾರಿಯಲ್ಲಿತ್ತು. ಹೊಸ ರಾಜ್ಯ ಉದಯಿಸಿದ ಮೇಲೆ ಹಾಸನ ಜಿಲ್ಲೆಯ ನಾಲ್ಕು ತಾಲೂಕುಗಳಲ್ಲಿ ಮತ್ತು ಬೀದರ್ ಜಿಲ್ಲೆಯಲ್ಲಿ ೧೯೫೦ರಲ್ಲೂ ೧೯೬೦ ರಲ್ಲಿ ಮೈಸೂರು ನಗರ ಹಾಗೂ ಅದೇ ತಾಲೂಕನ್ನು ಬಿಟ್ಟು ಉಳಿದಂತೆ ಮೈಸೂರು ಜಿಲ್ಲೆಯಲ್ಲಿ ಪಾನ ನಿರೋಧವನ್ನು ಜಾರಿಗೆ ತರಲಾಯಿತು. ೧೯೬೧ರಲ್ಲಿ ಮಂಡ್ಯ ಜಿಲ್ಲೆ ಮೈಸೂರು ತಾಲೂಕು ಹಾಗು ಮೈಸೂರು ನಗರಗಳು ಮದ್ಯರಹಿತವಾದವು. ಕಲ್ಬುರ್ಗಿ, ರಾಯಚೂರು ಜಿಲ್ಲೆಗಳು ಹಾಗೂ ಬೆಂಗಳೂರು ಜಿಲ್ಲೆ (ರಾಮನಗರ, ಚನ್ನಪಟ್ಟಣ ತಾಲೂಕುಗಳ ವಿನ:)ಯನ್ನು ಬಿಟ್ಟು ಇಡೀ ರಾಜ್ಯಕ್ಕೆ ಅನ್ವಯಿಸುವಂತೆ ೧೯೬೧ರ ಕರ್ನಾಟಕ ಪಾನ ನಿರೋಧ ಅಧಿನಿಯಮವನ್ನು ೧೯೬೨ರಲ್ಲಿ ಪರಿಷ್ಕರಿಸಿ ಜಾರಿಗೆ ತರಲಾಯಿತು.

ರಾಜ್ಯದ ಅದಾಯದಲ್ಲಿ ನಷ್ಟ, ಹೆಚ್ಚುತ್ತಿದ್ದ ಕಳ್ಳಭಟ್ಟಿ ಸಾರಾಯಿಯ ಉಪಯೋಗ ಮೊದಲಾದ ಕಾರಣಗಳಿಂದಾಗಿ ಕರ್ನಾಟಕ ಪಾನ ನಿರೋಧ (ತಿದ್ದುಪಡಿ) ಅಧಿನಿಯಮ ೧೯೬೭ನ್ನು ಜಾರಿಗೆ ತಂದು ಹಿಂದೆ ಮಾಡಿದ ೧೯೬೧ರ ಕರ್ನಾಟಕ ಪಾನ ನಿರೋಧ ಅಧಿನಿಯಮ ಸೂಚಿಸಿದ್ದ ಯಾವುದೇ ಸ್ಥಳದಲ್ಲಿ ಪಾನ ನಿರೋಧವನ್ನು ಸಡಿಲಿಸಬಹುದಾದ ಅನುಕೂಲವನ್ನು ಪಡೆಯಲಾಯಿತು. ಇದರ ಪರಿಣಾಮವಾಗಿ ಅಕ್ಟೋಬರ್ ೧೯೬೭ರಲ್ಲಿ ಬೆಳಗಾವಿ, ಬಳ್ಳಾರಿ, ಕೊಡಗು, ಚಿಕ್ಕಮಗಳೂರು,ಚಿತ್ರದುರ್ಗ, ಹಾಸನ, ಧಾರವಾಡ, ಕೋಲಾರ, ಮಂಡ್ಯ ,ಶಿವಮೊಗ್ಗ, ದಕ್ಷಿಣ ಕನ್ನಡ, ತುಮಕೂರು ಹಾಗು ಬೆಂಗಳೂರು ಜಿಲ್ಲೆ (ರಾಮನಗರ, ಚೆನ್ನಪಟ್ಟಣ ತಾಲೂಕುಗಳನ್ನು ಹೊರತುಪಡಿಸಿ) ಮತ್ತು ಜಮಖಂಡಿ ತಾಲೂಕು ವಿನ: ಬಿಜಾಪುರ ಜಿಲ್ಲೆ ಚಾಮರಾಜನಗರ, ಯಳಂದೂರು ತಾಲೂಕುಗಳ ವಿನ: ಮೈಸೂರು ಜಿಲ್ಲೆ ಕುಮಟ ಅಂಕೋಲ ಹೊನ್ನಾವರ ತಾಲೂಕುಗಳ ವಿನ:

ಉಳಿದ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಪಾನ ಪ್ರತಿಬಂಧವನ್ನು ಸಡಿಲಿಸ ಲಾಯಿತು. ಜೂನ್ ೧೯೬೮ರಲ್ಲಿ ಬಿದರೆ ಜಿಲ್ಲೆ ಹಾಗು ಉತ್ತರ ಕನ್ನಡ ಜಿಲ್ಲೆಯ ಕುಮಟಾ ಹೊನ್ನಾವರ, ತಾಲೂಕುಗಳಲ್ಲಿ ಪಾನ ನಿರೋಧವನ್ನು ಸಡಿಲಿಸಲಾಯಿತು. ಏಪ್ರಿಲ್ ೧೯೭೦ರಲ್ಲಿ ಉತ್ತರ ಕನ್ನಡ ಜಿಲ್ಲೆ ಹಾಗೂ ವಿಜಾಪುರದ ಉಳಿದ ತಾಲೂಕುಗಳಲ್ಲಿ ನಿರ್ಬಂಧವು ರದ್ದಾಯಿತು. ಮೈಸೂರು ಜಿಲ್ಲೆಯ ಚಾಮರಾಜನಗರ ತಾಲೂಕು ಜುಲೈ ೧೯೭೩ರಲ್ಲಿಯೂ ಹಾಗು ಅದೇ ಜಿಲ್ಲೆ ಯಳಂದೂರು ತಾಲೂಕು ಕೊಟ್ಟ ಕೊನೆಯದಾಗಿ ಒಂದನೇ ಜುಲೈ ೧೯೮೧ರಿಂದಲೂ ಪಾನ ನಿರೋಧದಿಂದ ವಿಮುಕ್ತವಾಯಿತು. (ಅಬಕಾರಿ ಕಂದಾಯದ ಅಂಕೆ- ಸಂಖ್ಯೆಗಳಿಗೆ ೯ನೇ ಅಧ್ಯಾಯ ನೋಡಿ). ಪಾನ ನಿರೋಧವನ್ನು ತೆಗೆದು ಹಾಕಿದರೂ ಕೂಡ ಕಳ್ಳ ಭಟ್ಟಿ ಸಾರಾಯಿಯ ತಯಾರಿಕೆ ಹಾಗು ವಿತರಣೆ ಮುಂದುವರಿಯುತ್ತಲೇ ಇದೆ. ಈಚೆಗೆ ೧೯೮೧ರಲ್ಲಿ ವಿಷಪೂರಿತ ಕಳ್ಳಭಟ್ಟಿ ಕುಡಿದು ಬೆಂಗಳೂರು ಹಾಗು ಮೈಸೂರಿನಲ್ಲಿ ನಡೆದ ಘೋರ ದುರಂತದಿಂದಾಗಿ ೩೩೬ ಹೆಂಗಸರು ಗಂಡಸರು, ಮಕ್ಕಳು ಸಾವಿಗೀಡಾದರಲ್ಲದೆ ಅನೇಕರು ಶಾಶ್ವತವಾಗಿ ಕಣ್ಣು ಕಳೆದು ಕೊಂಡರು. ಇದರ ಬಗ್ಗೆ ನ್ಯಾಯಧೀಶ ದೇಸಾಯಿಯವರ ನೇತೃತ್ವದಲ್ಲಿವಿಚಾರಣಾ ಸಮಿತಿಯೊಂದನ್ನು ಏರ್ಪಡಿಸಿದ್ದು ಅವರು ನೀಡಿದ ವರದಿಯನ್ನು ೧೯೮೩ರ ಮಾರ್ಚಿನಲ್ಲಿ ಸಾರ್ವಜನಿಕರ ಮುಂದೆ ಇಡಲಾಯಿತು.

ಪಾನ ಸಂಯಮ ಮಂಡಲಿ

ಕರ್ನಾಟಕ ಸರ್ಕಾರದಿಂದ ೧೯೭೧ರಲ್ಲಿ ಕರ್ನಾಟಕ ರಾಜ್ಯ ಪಾನ ಸಂಯಮ ಮಂಡಲಿ ರಚಿತವಾಯಿತು. ಸಂಯಮ ಎಂದರೆ ಮದ್ಯದ ಬಳಕೆಯನ್ನು ಹತೋಟಿಗೆ ತಂದು ಕೊಳ್ಳುವುದಲ್ಲದೇ ಪೂರ್ತಿಯಾಗಿ ಬಿಟ್ಟುಬಿಡುವಂತೆ ಮನವೊಲಿಸುವುದು. ಶಾಲಾ ಪಠ್ಯವಿಷಯಗಳಲ್ಲಿ ಈ ವಿಷಯಗಳನ್ನು ಸೇರಿಸಿ ವಿದ್ಯಾರ್ಥಿ ದಿಸೆಯಲ್ಲಿಯೇ ತಿಳುವಳಿಕೆ ನೀಡುವುದು. ಈ ಮಂಡಳಿಯ ಶಿಫಾರಸ್ಸಿನಂತೆ ಪ್ರತಿ ತಿಂಗಳ ಒಂದನೇ ತಾರೀಖು 'ಪಾನ ಮುಕ್ತ ದಿನ' ಎಂದು ಸರ್ಕಾರ ಘೋಷಿಸಿತಾದರೂ ಇದನ್ನು ೧೯೮೦ರಿಂದ ಕೈಬಿಡಲಾಯಿತು. ಮದ್ಯಪಾನದಿಂದ ಉಂಟಾಗುವ ದುಷ್ಪರಿಣಾಮವನ್ನು ಮಹಿಳೆಯರಿಗೆ ತಿಳಿಸಲು ಬೇಕಾದ ಅಂಕಿ-ಅಂಶಗಳನ್ನು ಸಂಗ್ರಹಿಸಲಾಯಿತು. ಈ ರೀತಿಯಾದ ಪ್ರಚಾರ ಕಾರ್ಯಕ್ರಮಗಳನ್ನು ಪಾನ ಸಂಯಮ ಮಂಡಳಿ ಕೈಗೊಂಡಿತಾದರೂ ಫಲಿತಾಂಶ ಶೂನ್ಯ.

(ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ೧೯೮೬ ಭಾಗ-೩ ಸೂರ್ಯನಾಥ್ ಯು. ಕಾಮತ್ (ಸಂ) ಪುಟ-೨೦೧,೨೦೨.)

# I. A BRIEF NOTES ON TODDY

1. Prior to 1990-91 excise year the Sale of Toddy in Toddy shops were disposed of in Public Action.

2. The Sale of Toddy was banned in the entire state from the Excise year i.e. 1-7-1990 under Government Letter No. HD/27/EDC/90 dated 11-5-90. The Sale of Toddy was allowed in D.K. District through Toddy Tappers Society under Govt. Lr.No.HD/107/EDC/90 dated 17-11-90.

3. The Sale of Toddy was re-introduced during the year 1991-92 under Govt. Order No. FD/60/EDC/91 dated 29-5-91 in the Raichur Taluk, Sedam, Chincholi and Chittapur of Gulbarga District inoluding D.K.Dsitriot to sell Toddy through Toddy Tappers Co-Operative Socities.

4. The Sale of Toddy was continued during the year 1992-93 under Govt. Notification No.FD/54/EDC/92 (p-III)(i) dated 21-5-92 in the Taluks of Raichur, Manvi, Sindanur, Lingasugur, Devadurga of Raichur District and Gulbarga Chittapur, Chincholi, Sedam and Yadgiri Taluks of Gulbarga District including D.K. District to sell toddy through Toddy Tappers Co-Operative Socities.

5. Later during the Excise year 1993-94 the Sale of Toddy was prohibited all over Karnataka except in D.K.District under Govt.Lr.No.FD/50/EDC/93 (ii) dated 18-3-93.

6. The Sale of Toddy was re-introduced during the year 1994-95 under Govt. Notification No.ED/40/EDC/93 (ii) dated 15-4-94 in Raichur and Devadurga Taluks of Raichur District and in Chittapur, chincholi, Sedam and Yadagiri Taluks of Gulbarga District and in D.K.District through Co-Operative Socities.

7. The Sale of Toddy was also continued during the year 1995-96 under Government Notification No.FD/73/EDC/95 (i) dated 29-4-95 in Raichur and Devadurga Taluks of Raichur District and in Chittpur, Sedam, Chincholi and Yadgiri Taluks of Gulbarga District including D.K.District.

## II. BAN ON SALE OF TODDY

1985-86 = Bidar and Kodagu.

1986-87 = Bidar and Kodagu.

1987-88 = Bidar and Kodagu.

1988-89 = Bidar, Chickmagalur, Kodagu, Mysore & Shimoga.

1989-90 = Belgaum, Bidar, Chickmagalur, Kodagu, Mysore, Shimoga & Uttara Kannada.

1990-91 = Total Ban in the entire state.

1991-92 = Except Gulbarga (4) Taluks and Raichur (5) Taluks.

1992-93 = Except Gulbarga (5) Taluks and Raichur (5) and Dakshina Kannada.

1993-94 = Except D.K.District.

1994-95 = Except Dakshina Kannada District, Chittapur, Chincholi, Sedam and Yadgiri Taluks of Gulbarga District and Raichur and Devadurga Taluks of Raichur District.

(Collected from Department of Excise Okkaliga Bavana Bangalore. )

**III. ABAKAR. H.** A Manufacturer or retailer of spitituous liquors; Lit. da maker of (strong) water.

ABAKARI also written ABAKAREE, ABAKARY, ABAKERI, AUBKAURY, H & C. or in Telugu ABUKARY, Reveue derived from duties levied on the manufacturer and sale of inebriating liquors, as Tari or toddy, panchnai arrack & c, and on intoricating drugs.

Water in substance infussion of extract a opium, Bhang, Chiras, & c. it is levied on certain licenced distilleries, or in fees for dicenceds granted by the collector to retailers. In some parts of the south india the abakalri inclueded dufies on eating shops, gaming houses intinerant tumblers, Jugglers and the like [in report of the house of commons 1832, p.95 it is said to comprehend duries on pepper and betel; But this is a mis statement as no such duties are levied; although in mysore the areka-nut was some times included in the abakari farm] the principal Regulations in Bengal for the Abakari duties are xxvii. 1793, x 1813 xiii. 1816, and vii 1824. Abakari Darogh. H (...) The head native officer oppointed to superintend distilteries, spirit shops and the like. Abakari mahal H. The department office of Abakari the excise. (p-1).

**KALA** ; also **KALAR, KALAWAR,** in correctly, **KALAL, H.** A distiller a maker and vendor of spirituous liquors; kalal kalari Mar & C. A wine seller avintner, atavern- keeper; anything reloring to spirituous liquor a Tax upan them exise.(p-250)Book).

**Icnalu; Karn** (Echalu) A wild date free

**Ichalune'ru** - (Echalu Niru) The fermented juice of the date or other palns tari.

**IDIGA; EEDIGU;** Karn.( Eediga) A caste or man of a cast whose business it is to manufacture and sell the fermented Juice of the paln or other sprituous liquors, He is also employed as a palankin bearer.

Idiguttige-Karn (Eediguthige) A duty upon tari in mysore.

**[ From: GLOSSARY OF JUDICIAL AND REVENUE TERMS H.H. WILLSON. 1855 page 1,250.London.]**

**IV. IDIGA:-** The Telugu toddy drawers, whose hereditary acupation is the extraction of the Juice of the date and palmyra palms, go by differentnames in different licalities. Those for exampal, who live in the salem, North Arcot and chingleput districts, are called Idigas or Indras. In the North circars and the Nellore district they are known as Gamandals, and in the cuddapah district as Asilis.

It is recorded in the North Arcot Manual, that Idiga is one of the toddy-drawig castes of the Telugu country. The name being derived from Telugu Iduchu, to draw. The Idigas are supposed to be a branch of the Balija Tribe separated on account of their occupation. They are chifely Vishnavites having satanis as their priests. They are divided into two clases,the Dandu (army) Idigas and the Balija Idigas, of whom the former used originality to distil arrak, but now that the manufacture is a monopoly, They usually sell it. The Baliji Idigas ectract toddy, the juice of the palm tree. They differ from the shnans in some of their professional customs, for while that Tamilians in the climbing tie their knives behind them, the Telugu tie them on the right thigh Tamilians drawers extract the Juice from palmyras and coconuts, but rarely from the date, and the Telugus from the palmyras and dates, but never from cocoanuts. The chief object of their worship is Yallamma the deity who presides over toddy and liquor. On every sunday the pots containig liquor are decorated with flowes, saffron, etc., and offerings are made to them.

In the madras census report, 1901 it is stated that "It is said that the Idigas are the descendants of Balijas from Rajamahendry in Godavari district, and that their occpution separeted them into a distrinct castes. They are divieded into two endogamous sections called either Dandu and palli or patha (old) and Kotta (Now). The head man of the caste is called Gaudu. They emplovy Brahamans purohiths for their ceremonies, and these Brahmans are revied on equality by other Brahamans. They bury their dead, and observe pollution for twelve days, during wich they obstain from eating flesh. The consumption of Alchol is strictly prohibited and is severly punished by the head man of the cast.

They eate with all Balijas, except the Gazulu sections. Their tittle are Aiya Appa and Gandu.

It is noted by Mr. F. Fwacett that "in the northern districts amomg the Telugu population the toddy-drawers use a ladders about eight of nine feet in lenth. Wich is placed against the tree to avoid climbing a third or fourth of it.

While in the act of climging up or down. They make use of a wide band, wich is passed round the body at th small of the bac, and round the tree. This band is casily fastened with toggle and eye. The back is protected by a piece of thick soft leather. It gives great assistance in climbing wich it makes easy. All over the southern most portion of the penin sula. Among the shanas and Tiyans, The ladder and waistband are unknown.

They climbing up and down with their hands and drms, using only a soft grummed of coir (cocoanut fibre) to keep the feet near together.

The Idigas clim to be descended from Vyasa, the traditional compiler of the Mahabharatha. In a note by Mr. F.R. Heminy way on the Idigas of the Godavari district, They are said to worship a deity to whome they annually ofter fowls on new year's day and make daily offerings of a few drops of toddy from the firtst pot taken from the tree. In this district they are commonly called chetti. The insigne of the Idigas, as recorded at conjeeveram is a ladder.

**[ "CASTES AND TRIBS OF SOUTHERN INDIA"**

**Edgar Thurston V-II 1987. page 368,369, 370.]**

